# ನವಕರ್ನಾಟಕ ಪ್ರಕಾಶನದ ಮಹತ್ವದ ಪ್ರಕಟಣೆಗಳು

ನಿಮ್ಮ ಪುಸ್ತಕ ಸಂಗ್ರಹದಲ್ಲಿ ಇರಲೇಬೇಕಾದ ಅಮೂಲ್ಯ ಕೃತಿಗಳು




## ಎರವಲು ಪದಕೋಶ

(ಕನ್ನಡದಲ್ಲಿರುವ ಅನ್ಯದೇಶ್ಯಗಳ ನಿಘಂಟು)

ಪ್ರೊ॥ ಜಿ. ವೆಂಕಟಸುಬ್ಬಯ್ಯ

**ಪುಟ : 248** **ಬೆಲೆ : ರೂ. 100**

ಒಂದು ಭಾಷೆಗೆ ಬೇರೊಂದು ಭಾಷೆಯಿಂದ ಎರವಲಾಗಿ ಬಂದು ಬಳಕೆಯಾಗುವ ಪದಗಳ ಕುರಿತ ವ್ಯಾಸಂಗವು ಭಾಷಾಶಾಸ್ತ್ರದ ಬಹು ಮುಖ್ಯವಾದ ಅಂಗವಾಗಿದೆ. ಇದು ಭಾಷೆಯ ದೃಷ್ಟಿಯಿಂದ ಮಾತ್ರವಲ್ಲದೆ ಸಂಸ್ಕೃತಿಯ ದೃಷ್ಟಿಯಿಂದಲೂ ಪ್ರಧಾನವಾಗಿದೆ. ಹಲವು ವರ್ಷಗಳ ಅವಧಿಯಲ್ಲಿ, ಕೆಲವು ಪ್ರಭಾವಗಳಿಂದ ತನ್ನಷ್ಟಕ್ಕೆ ನಡೆದುಹೋಗುವ ಪದಗಳ ಇಂಥ ಹೊಕ್ಕು ಬಳಕೆಯ ಅರ್ಥವ್ಯಾಪ್ತಿಯು ಅತ್ಯಂತ ರೋಚಕವಾಗಿದೆ. ಎರವಲು ಪದಗಳು ಕನ್ನಡದ ಸ್ವಭಾವವನ್ನು, ಸ್ವರೂಪವನ್ನೂ ಹೇಗೆ ಪಡೆಯುತ್ತವೆ ಎಂಬುದು ಕುತೂಹಲಕಾರಿಯಾಗಿದೆ.

### ಹೊಸತು

*ಮಾಸಪತ್ರಿಕೆಗೆ ಮೂರು ವರ್ಷದ ಚಂದಾ ಹಣ ರೂ. 250/- ನೀಡಿ ನವಕರ್ನಾಟಕ ಪ್ರಕಾಶನದ ಎಲ್ಲಾ ಪುಸ್ತಕಗಳ ಮೇಲೆ 20% ರಿಯಾಯಿತಿ ಪಡೆಯಿರಿ*




## ಇಗೋ ಕನ್ನಡ

ಸಾಮಾಜಿಕ ನಿಘಂಟು

ಪ್ರೊ॥ ಜಿ. ವೆಂಕಟಸುಬ್ಬಯ್ಯ

**ಪುಟ : 448 (2ನೇ ಮುದ್ರಣ)**

**ಜನಪ್ರಿಯ ಆವೃತ್ತಿ : ರೂ. 150**

**ಗ್ರಂಥಾಲಯ ಆವೃತ್ತಿ : ರೂ. 180**

ಇದೊಂದು ಅರ್ಥಕೋಶ ಅಥವಾ ನಿಘಂಟು ಎಂದು ತಿಳಿಯಬೇಕಾಗಿಲ್ಲ. ಓದಿದಾಗ ಮುದ ಕೊಡುವ ಇದರ ವ್ಯಾಪಕತೆ ಒಂದು ಪದಕ್ಕೆ ಅರ್ಥ ನೀಡುವಷ್ಟಕ್ಕೇ ಸೀಮಿತವಾಗಿಲ್ಲ. ಪದದ ಅರ್ಥ ಹುಡುಕುತ್ತ ಅದರ ಬೇರು, ಕಾಂಡ, ರೆಂಬೆ-ಕೊಂಬೆ ಇತ್ಯಾದಿಗಳ ಮೂಲ ಶೋಧಿಸಿ, ಬಳಕೆಯಲ್ಲಿ ಅದು ಹೇಗೆಲ್ಲ ಬದಲಾವಣೆಗೊಳಗಾಗಿದೆ ಎಂಬುದನ್ನು ಪತ್ತೆ ಮಾಡುವ, ಅಂತೆಯೇ ಭಾಷೆಯ ಬೆಳವಣಿಗೆಯ ದೃಷ್ಟಿಯಿಂದ ಅತ್ಯಂತ ಕ್ರಿಯಾಶೀಲವಾದ ಪರಿಶ್ರಮ ಈ ಕೃತಿಗೆ ಹಿನ್ನೆಲೆಯಾಗಿದೆ.




## ಪದಾರ್ಥ ಚಿಂತಾಮಣಿ

(ಎರಡನೇ ಮುದ್ರಣ)

ಪಾ. ವೆಂ. ಆಚಾರ್ಯ

**ಪುಟ : 352** **ಬೆಲೆ : ರೂ. 140**

ಅಧ್ಯಯನದ ಸಂದರ್ಭದಲ್ಲಿ ಎದುರಾಗುವ ಹಲವು ಪದಗಳ ಅರ್ಥ ಹುಡುಕುತ್ತ ಹೋದಂತೆ ಅವು ನಮ್ಮನ್ನು ಹಲವು ಕಡೆ ತಿರುಗಾಡಿಸಿ ಬೇರೊಂದು ಕಾಲಕ್ಕೆ, ಬೇರೊಂದು ಸಂಸ್ಕೃತಿಗೆ ಒಯ್ದು ಅಚ್ಚರಿ ಉಂಟುಮಾಡಬಲ್ಲವು. ಈ ಪದಾರ್ಥಲೋಕ ನಾವೆಣಿಸಿಕೊಂಡದ್ದಕ್ಕಿಂತಲೂ ರಂಗುರಂಗಿನದು; ಶಬ್ದ ಮೂಲಗಳು ಯಾವ ಯಾವ ಐತಿಹಾಸಿಕ, ನರವಂಶ ಚರಿತ್ರೆಯ ಅರ್ಥವ್ಯವಸ್ಥೆಯ, ಸಂಸ್ಕೃತಿ ಸಂಪ್ರದಾಯಗಳ ಬಗ್ಗೆ ಗುಟ್ಟು ಹೇಳುತ್ತವೆ ಎಂಬುದು ಇವುಗಳಿಂದ ತಿಳಿಯುತ್ತದೆ. ಪ್ರತಿಯೊಂದು ಪದಕ್ಕೂ ಅದರದೇ ಆದ ಚರಿತ್ರೆಯುಂಟು, ಐತಿಹ್ಯವುಂಟು, ಕಥೆಯುಂಟು. 'ವರ್ಡ್‌ಲೋರ್'ಗೆ ಸಂಬಂಧಿಸಿದ ಮೊತ್ತಮೊದಲ ಪುಸ್ತಕ.

### ನವಕರ್ನಾಟಕ ಶಾಖೆಗಳು

5ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - 560 009 ☎ : 225138

ಕೆಂಪೇಗೌಡವೃತ್ತದ ಬಳಿ
ಬೆಂಗಳೂರು - 560 009 ☎ : 287238

ಕೆ. ಎಸ್. ಆರ್. ರಸ್ತೆ
ಮಂಗಳೂರು - 575 001 ☎ : 441016

ರಾಮಸ್ವಾಮಿ ವೃತ್ತ
ಮೈಸೂರು - 570 024 ☎ : 444094

ಸ್ಟೇಷನ್ ರಸ್ತೆ
ಗುಲ್ಬರ್ಗಾ - 585 102 ☎ : 24302

## ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್

ಎಂಬೆಸಿ ಸೆಂಟರ್, 11, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ 5159, ಬೆಂಗಳೂರು-560 001
ದೂರವಾಣಿ / ಫ್ಯಾಕ್ಸ್ : 2203580 / 81 / 82 e-mail : nkp@bgl.vsnl.net.in

# ಹೊಸತು

## ಒಳಗೇನಿದೆ.....




ಚಿತ್ರಗಳು : ಗುಜ್ಜಾರ್, ಮೋಹನ, ಹಾದಿಮನಿ, ಸುರೇಶ್, ರವಿಕುಮಾರ್

ಮುಖಪುಟ ವಿನ್ಯಾಸ : ನವಕರ್ನಾಟಕ ವಿನ್ಯಾಸ

ಕಚೇರಿ ಸಹಕಾರ : ಜಿ. ವಿ. ತೇಜೋವತಿ


ಪ್ರಮುಖವಾದ ಪ್ರಶ್ನೆಗಳನ್ನು ಅಷ್ಟಾಗಿ ಎತ್ತದೆ ಚುನಾವಣಾ ಪ್ರಚಾರ ಅಗ್ಗವಾಗಿ ಹೋದದ್ದು ತೀರಾ ಅಸಮಾಧಾನದ ವಿಷಯ. ಬಳ್ಳಾರಿಯಲ್ಲಂತೂ ವಿಶ್ವದ ಗಮನ ಸೆಳೆಯಬಹುದಾದ ಯಾವುದೇ ವಿಷಯ ಚರ್ಚೆಗೆ ಬರಲಿಲ್ಲ, ಆದರೂ ಅದು ವಿಶೇಷವಾಗಿ ಪ್ರಸಿದ್ಧಿಗೆ ಬಂದಿತು. ಚುನಾವಣಾ ಆಯೋಗವು ಆಗಾಗ್ಗೆ ಮಧ್ಯಪ್ರವೇಶ ಮಾಡಿ ವೈಯಕ್ತಿಕ ನಿಂದನೆಗಳನ್ನು ಕೈಬಿಟ್ಟು ಜನರ ಸಮಸ್ಯೆಗಳನ್ನು ಕೈಗೆತ್ತಿಕೊಳ್ಳಬೇಕೆಂಬ ಸೂಚನೆ ನೀಡಬೇಕಾಗಿ ಬಂದುದು ಸ್ವಾಗತಾರ್ಹವೇನಲ್ಲ. ಅದನ್ನು ಹೇಳಿಸಿಕೊಳ್ಳುವ ಮಟ್ಟಕ್ಕೆ ದೊಡ್ಡ ರಾಜಕೀಯ ಪಕ್ಷಗಳು ಇಳಿದದ್ದು ಶೋಚನೀಯ. ಅಲ್ಲದೆ ಯಾವ ಸಮಸ್ಯೆಯನ್ನು ಜನರ ಮುಂದಿಡಬೇಕೆಂಬ ಸೂಚನೆ ಕೊಡುವುದು ಚುನಾವಣಾ ಆಯೋಗದ ಪರಿಧಿಗೆ ಸೇರಿದ್ದಲ್ಲ. ಇಂದು ಇಂತಹ ಸಮಸ್ಯೆ ಎತ್ತಿ ಎಂದು ಹೇಳಿ, ನಾಳೆ ಆ ಸಮಸ್ಯೆಯ ಬಗ್ಗೆ ಹೀಗೆ ಹೇಳಿ ಎಂದು ಆಯೋಗ ತಿಳಿಸುವಂತಾದರೆ ಜನರ ಅಭಿಪ್ರಾಯ - ಆಶಯಗಳಿಗೆ ಸ್ಥಾನವೆಲ್ಲಿರುತ್ತದೆ ?

ಬಳ್ಳಾರಿಯಲ್ಲಿ ಸುಷ್ಮಾ – ಪ್ರಿಯಾಂಕ ನಾಲ್ಕೈದು ವಾಕ್ಯಗಳನ್ನು ಕನ್ನಡದಲ್ಲಿ ಹೇಳಲು ಕಲಿತಿದ್ದು ನಮ್ಮ ಮಾಧ್ಯಮಗಳಿಗೆ ಸಂಭ್ರಮದ ಸುದ್ದಿಯಾಯಿತು. ಇದು ಅವಿವೇಕ ಮತ್ತು ಕೀಳರಿಮೆಯ ಕುರುಹು ಎನಿಸುತ್ತದೆ. ನಮ್ಮ ಪ್ರೌಢಶಾಲೆಗಳಲ್ಲಿ ನಡೆಯುವ ಎಷ್ಟೋ ಚರ್ಚಾಸ್ಪರ್ಧೆಗಳಲ್ಲಿ ಪ್ರತಿಪಾದನಾ ಶೈಲಿ ಮತ್ತು ಸಾಮಗ್ರಿ ಸುಷ್ಮಾ – ಪ್ರಿಯಾಂಕ ನೀಡಿದ ಭಾಷಣಗಳಿಗಿಂತ ಸಾವಿರಪಟ್ಟು ಉತ್ತಮವಾಗಿರುತ್ತವೆ. ಸುಷ್ಮಾ ಮೂರು ನಿಮಿಷಗಳಿಗೆ ಬೇಕಾಗುವಷ್ಟು ಕನ್ನಡ ವಾಕ್ಯಗಳನ್ನು ಸಹ ಉರುಹೊಡೆಯಲು ಅಸಮರ್ಥರಾದರೆ ಪ್ರಿಯಾಂಕ ಮೂರು ಸಾಲುಗಳನ್ನು ಮೀರಿ ಹೋಗಲಿಲ್ಲ. ಇವರು ವೋಟುಗಳನ್ನು ಕೇಳಲು ಕನ್ನಡದ ನಾಲ್ಕೈದು ವಾಕ್ಯಗಳನ್ನು ಬಾಯಿಪಾಠ ಮಾಡಿಕೊಂಡು ಊದಿದರೆ ಇಷ್ಟೊಂದು ವಿಸ್ಮಯವೇ ! ನಮ್ಮ ಶಾಲಾ-ಕಾಲೇಜುಗಳ ಎಷ್ಟೋ ವಿದ್ಯಾರ್ಥಿ-ವಿದ್ಯಾರ್ಥಿನಿಯರು ಪುಟಗಟ್ಟಲೆ ಬಾಯಿಪಾಠ ಮಾಡಿ ಒಪ್ಪಿಸುತ್ತಾರೆ, ಚರ್ಚಾಸ್ಪರ್ಧೆಗಳಲ್ಲಿ ಅದನ್ನೆಲ್ಲಾ ಅತ್ಯಂತ ಸಹಜವಾಗಿ ಮಂಡಿಸುತ್ತಾರೆ. ಅವರಿಗೆ ತಿಳಿಯದ ಫ್ರೆಂಚ್ ಭಾಷೆಯಲ್ಲಿ ಹದಿನೈದು ವಾಕ್ಯಗಳನ್ನು ಬರೆದುಕೊಟ್ಟು ಎರಡು ಬಾರಿ ಉಚ್ಚಾರಣೆ ತೋರಿಸಿಕೊಟ್ಟರೆ ಬಹಳವೆಂದರೆ ೫೪ ನಿಮಿಷಗಳಲ್ಲಿ ನಿರರ್ಗಳವಾಗಿ ಅದನ್ನು ಮಾತನಾಡಿ ತೋರಿಸಬಲ್ಲರು. ಆದರೂ ಸುಷ್ಮಾ – ಪ್ರಿಯಾಂಕ ಕನ್ನಡದಲ್ಲಿ ಮಾತನಾಡಿದ್ದು ಏನೋ ಗಂಭೀರವಾದ ಸಾಹಸದಂತೆ ಚಿತ್ರಿಸಲಾಯಿತು.

ಈ ಹಿನ್ನೆಲೆಯಲ್ಲಿ ಒಂದೆರಡು ಅಂಶಗಳನ್ನು ಮನನ ಮಾಡಿಕೊಳ್ಳಬೇಕು. ಇಡೀ ದೇಶದ ಮೇಲೆ ಹಿಂದಿಯ ಹೊರೆಯನ್ನು ಹೇರಿರುವುದು ನಮಗೆ ಗೋಚರಿಸಬಾರದೇಕೆ ? ದೂರದರ್ಶನದಲ್ಲಿ 'ರಾಷ್ಟ್ರೀಯ'ವೆಂದು ನಡೆಯುವ ಎಲ್ಲಾ ಪ್ರಸಾರವೂ ಹಿಂದಿಯಲ್ಲಿ. ಬೇರೆ ಭಾಷೆಗಳು ರಾಷ್ಟ್ರೀಯವಲ್ಲವೇನು ? ಆ ಭಾಷೆಗಳಲ್ಲಿ ಅಡಕವಾಗಿರುವ ವ್ಯಕ್ತಿತ್ವ ಮತ್ತು ಸಂಸ್ಕೃತಿ ಆಯಾ ಭಾಷಿಕರನ್ನು ಬಿಟ್ಟು ಉಳಿದವರಿಗೆ ಅಪ್ರಸ್ತುತವೆ ? ಎಲ್ಲಾ ಭಾಷೆಗಳಲ್ಲೂ ಪ್ರಸಾರವಾದಾಗ ಮಾತ್ರವೇ ಅದು 'ರಾಷ್ಟ್ರೀಯ'ವಾಗಬಲ್ಲದು ಎಂಬ ಕನಿಷ್ಠ ತಿಳುವಳಿಕೆಗೆ ಪ್ರಾಶಸ್ತ್ಯ ದೊರಕಬೇಕಾಗಿದೆ.

ಸುಷ್ಮಾ – ಪ್ರಿಯಾಂಕ ಕನ್ನಡ ಮಾತನಾಡಿದರು ಎಂದು ಪುಲಕಿತರಾಗುವ ಬದಲು ನಮ್ಮ ನಗರಗಳಲ್ಲಿ ಸೊಪ್ಪು ಮಾರುವ ಅನೇಕ ಅಜ್ಜಿಗಳು ಗಿರಾಕಿಗಳನ್ನು ಕಳೆದುಕೊಳ್ಳದಿರಲು ಹಿಂದಿಯಲ್ಲಿ ವ್ಯವಹಾರ ನಡೆಸಬೇಕಾಗಿ ಬಂದಿದೆ ಎಂಬುದನ್ನು ನೆನಪಿನಲ್ಲಿಟ್ಟುಕೊಳ್ಳಬೇಕೇನೋ ! ಬೇರೆ ಭಾಷೆಯವರನ್ನು ದ್ವೇಷಿಸಬೇಕೆಂದಾಗಲಿ ಅವರನ್ನು ನಮ್ಮ ನಗರಗಳಿಂದ ಹೊರಗಟ್ಟಬೇಕೆಂದಾಗಲಿ ಇದರ ಸೂಚನೆಯಲ್ಲ. ಸುಷ್ಮಾ – ಪ್ರಿಯಾಂಕರಿಗೆ ತುರ್ತಾಗಿ ಅವಶ್ಯಕವೆನಿಸಿದ ಭಾಷೆಯ ಕಲಿಕೆ ಹತ್ತಾರು ವರ್ಷಗಳಿಂದ ಇಲ್ಲೇ ನೆಲೆಸಿರುವವರಿಗೆ ಅಗತ್ಯವೆನಿಸಲಿಲ್ಲ, ಅದಕ್ಕೆ ಸುಷ್ಮಾ – ಪ್ರಿಯಾಂಕ ಪ್ರತಿಕ್ರಿಯೆ ಏನು ? ಆಗ್ರಾ – ಭೋಪಾಲ್ ನಗರಗಳಲ್ಲಿ ಸೊಪ್ಪು ಮಾರುವ ಮುದುಕಿಯೊಡನೆ ಕನ್ನಡದಲ್ಲಿ ಮಾತನಾಡಬಹುದೆಂಬ ಕಲ್ಪನೆಯೇ ಸಾಧ್ಯವಿಲ್ಲ, ಅಂದರೆ, ಸುಷ್ಮಾ – ಪ್ರಿಯಾಂಕ ನಾಲ್ಕು ಕನ್ನಡ ವಾಕ್ಯಗಳನ್ನಾಡಿದರೆ ಅದು ಅದ್ಭುತ, ನಾವು ಯಾವಾಗಲೂ ಹಿಂದಿ ಮಾತನಾಡುವುದೆಂದರೆ ಅದು ಸಹಜ ಕರ್ತವ್ಯ!

ನಮ್ಮ ಸಂವಿಧಾನದ ಎಂಟನೇ ಷೆಡ್ಯೂಲ್‌ನಲ್ಲಿ ನಮೂದಿತವಾಗಿರುವ ಎಲ್ಲಾ ಭಾಷೆಗಳು ಮತ್ತು ನಮೂದಾಗದಿರುವ ಹತ್ತಾರು ಬೇರೆ ಭಾಷೆ - ಉಪಭಾಷೆಗಳು ಸಮಾನವಾಗಿರಬೇಕು. ಸುಷ್ಮಾ ವಾರ್ತಾ ಮತ್ತು ಪ್ರಸಾರ ಸಚಿವೆಯಾಗಿದ್ದಾಗ ಇದಕ್ಕೆ ಮಾನ್ಯತೆ ನೀಡಿದ್ದಂತೆ ತೋರುವುದಿಲ್ಲ, ಅವರು ಕನ್ನಡ ಮಾತನಾಡದಿದ್ದರ ಬೇಡ, ಸರ್ಕಾರದಲ್ಲಿ ಎಲ್ಲ ಭಾಷೆಗಳಿಗೂ ಸಮಾನ ಅವಕಾಶ ಕಲ್ಪಿಸಿಕೊಡಲಿ, ಸಾಕು.

# ಸಂಪಾದಕೀಯ


ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ -೧ ಸಂಚಿಕೆ - ೩ ಅಕ್ಟೋಬರ್ ೧೯೯೯

**ಪ್ರಧಾನ ಸಂಪಾದಕ**

ಜಿ. ರಾಮಕೃಷ್ಣ

**ಸಂಪಾದಕ ಮಂಡಲಿ**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಬಿ. ಜಿ. ಗುಜ್ಜಾರಪ್ಪ
ಎಸ್. ಗುರುದತ್
ಮಲ್ಲೇಪುರಂ ಜಿ. ವೆಂಕಟೇಶ್
ರಹಮತ್ ತರೀಕೆರೆ
ಬಿ. ವಿ. ವೀರಭದ್ರಪ್ಪ
ಕೆ. ಪಿ. ಸ್ವಾಮಿ

**ವ್ಯವಸ್ಥಾಪಕರು**

ಎಸ್. ಸುರೇಂದ್ರ
ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

ನವಕರ್ನಾಟಕ ಪ್ರಿಂಟರ್ಸ್
೧೬೨ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೮೩೯೭೪೮೨೬

**ಹೊಸತು ಕಚೇರಿಯ ವಿಳಾಸ**

ನವಕರ್ನಾಟಕ ಪ್ರಕಾಶನ

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಜೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ / ಫ್ಯಾಕ್ಸ್ : ೨೨೦೩೫೮೦ / ೮೧ / ೮೨
e-mail:nkp@bgl.vsnl.net.in


## ಅಪೇಕ್ಷಿತ ಸಂಯುಕ್ತ ರಂಗ

ನಮ್ಮದು ಅಧ್ಯಕ್ಷೀಯ ಮಾದರಿ ಸರ್ಕಾರವಲ್ಲ. ಆದರೆ ಈಗ ನಡೆದಿರುವ ಚುನಾವಣೆ ಅಂತಹ ವ್ಯವಸ್ಥೆ ಇದೆಯೇನೋ ಎಂಬ ರೀತಿಯಲ್ಲಿ ನಡೆದಿದೆ. ಇಬ್ಬರು ವ್ಯಕ್ತಿಗಳನ್ನು ಮಾತ್ರವೇ ಕೇಂದ್ರೀಕರಿಸಿ ಪ್ರಚಾರ ಮಾಡಿದ್ದು ಪಾರ್ಲಿಮೆಂಟರಿ ಪ್ರಜಾಪ್ರಭುತ್ವವನ್ನು ಪೋಷಿಸುವುದು ಅವರಿಗೆ ಬೇಕಿಲ್ಲವೆಂಬುದನ್ನು ತೋರಿಸುತ್ತದೆ. ವಿದೇಶಿ ಸಂಜಾತ ಭಾರತೀಯರು ಕೆಲವು ಸ್ಥಾನಗಳನ್ನು ತುಂಬುವಂತಿಲ್ಲವೆಂದು ನಮ್ಮ ಸಂವಿಧಾನ ಹೇಳಿಲ್ಲ. ಆದರೂ ಅಂತಹ ನಿಯಮವಿದೆಯೇನೋ ಅನ್ನುವಂತೆ ಅಬ್ಬರ ನಡೆದಿದೆ. ಐವತ್ತು ವರ್ಷಗಳಲ್ಲಿ ಹಾಗೆ ತಿದ್ದುಪಡಿ ತರಲು ಯಾರನ್ನೂ ಯಾರೂ ನಿರ್ಬಂಧಿಸಿರಲಿಲ್ಲ. ಅದನ್ನು ಮಾಡುವ ಮುಂಚೆ ಸುಮ್ಮನೆ ಅಬ್ಬರ ಮಾಡುವುದು ಧೂರ್ತತನವಾಗುತ್ತದೆ.

ಅಕ್ಟೋಬರ್ ೮ರ ವೇಳೆಗೆ ನಮಗೆ ಎಂತಹ ಸರ್ಕಾರ ಇರುತ್ತದೆಂಬುದು ತಿಳಿಯುತ್ತದೆ. ಯಾರೇ ಬಂದರೂ ಜನರು ತಮ್ಮ ಸಂಘರ್ಷ ಮುಂದುವರಿಸುತ್ತಾರೆ, ವಿಚಾರಗಳ ತಾಕಲಾಟ ಮುಂದುವರಿಯುತ್ತದೆ. ಅದು ಇನ್ನೂ ತೀವ್ರಗೊಳ್ಳುತ್ತದೆ ಕೂಡ. ಜನರನ್ನು ಮೀರಿ ನಿಲ್ಲುವ ಸಂಯುಕ್ತ ರಂಗ ನಮಗೆ ಅನಪೇಕ್ಷಣೀಯ; ಅವರ ಮಧ್ಯದಿಂದ ಬಂದು ಮತ್ತೆ ಅವರ ಬಳಿ ಹೋಗುವಂತಹ ಸಂಯುಕ್ತ ರಂಗ ನಮಗೆ ಬೇಕು.

ಆತಂಕದ ವಿಷಯವೆಂದರೆ ನಮ್ಮಲ್ಲಿ ಅನ್ಯಾಕ್ರಮಣಶೀಲ ಮತೀಯ ದುರ್ಭಾವನೆಗಳಿಗೆ ಸೊಪ್ಪುಹಾಕುವ ವಿಭಾಗವು ಈಗಾಗಲೆ ಒಂದು ಸಂಯುಕ್ತ ರಂಗವನ್ನು ರಚಿಸಿಕೊಂಡಿದೆ. ಆಗಾಗ್ಗೆ ತೋಚಿದಂತೆ ಸಾಮ್ರಾಜ್ಯಶಾಹಿಯ ವಿರುದ್ಧ ಲೊಚಗುಟ್ಟುವ ರಂಗ ಇದು; ಆದರೆ ಮೂಲತಃ ಅಮೆರಿಕಾದ ಆಜ್ಞಾನುವರ್ತಿ. ಈ ಶತಮಾನದ ಚರಿತ್ರೆಯಲ್ಲಿ ಅತ್ಯಂತ ಹೇಯವಾದ ಕೃತ್ಯವನ್ನೆಸಗಿದ ಹಿಟ್ಲರನ ಫ್ಯಾಸಿಸ್ಟ್ ಸರ್ಕಾರದ ಧೋರಣೆ ಮತ್ತು ಅವನ ಪಕ್ಷದ ತಂತ್ರ, ಅನೀತಿಗಳು ಇದೇ ರೀತಿಯವು. ಥೈಸ್ಸೆನ್-ಕ್ರುಪ್ ಉದ್ಯಮಗಳ ಬೆಂಬಲವು ಜನರ ಆಶಯಗಳಿಗೆ ಮನ್ನಣೆ ಇಲ್ಲದಂತೆ ಮಾಡಿದವು. ನಮ್ಮ ಅಂಬಾನಿ-ಗೋದ್ರೆಜ್‌ಗಳ ಸನ್ನಾಹವೂ ಅದೇ. ಅವರ ಬೆನ್ನಿಗಿದೆ ವಿದೇಶಿ ಬಂಡವಾಳ ಸಹ.

೧೯೩೫ರಷ್ಟು ಹಿಂದೆ ಗಿಯೋರ್ಗಿ ದಿಮಿತ್ರೋವ್ ಎಂಬ ಬಲ್ಗೇರಿಯಾದ ಕಾರ್ಮಿಕ ನಾಯಕ ಹೇಳಿದ್ದುದು ಇದು: ''ಫ್ಯಾಸಿಸಂ ಎಂಬುದು ಆರ್ಥಿಕ ಬಂಡವಾಳದ ಪ್ರಾಬಲ್ಯ. ದುಡಿಯುವ ಜನರ, ರೈತಾಪಿ ಜನರ ಹಾಗೂ ಬೌದ್ಧಿಕ ವ್ಯವಸಾಯ ದಲ್ಲಿರುವವರ ನಡುವೆ ವೈರುಧ್ಯ ಪ್ರಚೋದಿಸಲು ಹುಟ್ಟಿಕೊಳ್ಳುವ ಸಂಸ್ಥೆ ಅದು. ಭೀಕರ ಭಯೋತ್ಪಾದನೆಯನ್ನು ಜನರ ಮೇಲೆ ಹರಿಯಬಿಡಲು ಆ ಸನ್ನಿವೇಶದ ಬಳಕೆಯಾಗುತ್ತದೆ. ವಿದೇಶಾಂಗ ವ್ಯವಹಾರದಲ್ಲಿ ಫ್ಯಾಸಿಸಂ ಅನುಸರಿಸುವುದು ಅನ್ಯಾಕ್ರಮಣ ಶೀಲತೆಯನ್ನು. ಬೇರೆ ಜನಗಳನ್ನು ಮೃಗೀಯವಾಗಿ ದ್ವೇಷಿಸುವುದು ಅದರ ಪದ್ಧತಿ.''

ಈ ಛಾಯೆಯನ್ನುಳ್ಳ ಸಂಯುಕ್ತ ರಂಗ ನಮ್ಮಲ್ಲಿ ಸರ್ಕಾರ ರಚಿಸುವಂತಾಗಬಾರದು. ಅದನ್ನು ತಡೆಯಲು ದೇಶದ ಸಾರ್ವಭೌಮತ್ವ, ಪ್ರಜಾಪ್ರಭುತ್ವ, ಪ್ರಾದೇಶಿಕ ಸ್ವಾಯತ್ತತೆ, ಭಾಷೀಯ-ಮತಧರ್ಮೀಯ ಸ್ವಾತಂತ್ರ್ಯ, ಆದ್ಯ ಮಾನವಿಕ ಹಕ್ಕುಗಳ ರಕ್ಷಣೆ, ಮಹಿಳೆಯ ಗೌರವ, ಇತ್ಯಾದಿಗಳನ್ನು ಪುರಸ್ಕರಿಸುವಂತಹ ಜನಪರ ಸಂಯುಕ್ತ ರಂಗದ ಅಗತ್ಯವಿದೆ. ಜನಪರ ಹೋರಾಟದ ಹೆಸರನ್ನೇ ಉಚ್ಚರಿಸದ ಕಾಂಗ್ರೆಸ್ ಇದನ್ನು ಮನಗಾಣಬೇಕಾಗಿದೆ. ಎಡಪಕ್ಷಗಳೂ ಸಹ ಒಟ್ಟಾಗಿ ತಮ್ಮ ಹಲವು ಅಸಂಗತ ಪಂಥ ದುರಭಿಮಾನಗಳನ್ನು ದೂರವಿಟ್ಟು ಜನರ ಹಿತವನ್ನು ಕಾಯುವಂಥ ಸಂಯುಕ್ತ ರಂಗಕ್ಕೆ ರಕ್ತ-ಮಾಂಸಗಳನ್ನು ತುಂಬಬೇಕಾಗಿದೆ. ಎರಡನೇ ಮಹಾಯುದ್ಧದ ಸನ್ನಿವೇಶದಲ್ಲಿ ಫ್ರಾನ್ಸ್ ಅಂತಹ ಒಂದು ನಿದರ್ಶನವನ್ನು ತೋರಿಸಿಕೊಟ್ಟಿತ್ತು.

ಚುನಾವಣೆಯ ಫಲಿತಾಂಶ ಹೊರಬಿದ್ದನಂತರ ಕೇಂದ್ರದಲ್ಲಿ ಸರ್ಕಾರ ರಚಿಸುವಾಗ ಇಂತಹ ಸಂಯುಕ್ತ ರಂಗ ರೂಪುಗೊಳ್ಳುತ್ತದೆಂಬ ನಿರೀಕ್ಷೆಯನ್ನು ಹುಸಿಮಾಡಲು ಮತಧರ್ಮೀಯ ಹುನ್ನಾರಗಳನ್ನು ವಿರೋಧಿಸುವ ಯಾವ ಪಕ್ಷಕ್ಕೂ ಇಂಬು ದೊರೆಯಬಾರದು. ಚುನಾವಣಾಪೂರ್ವದ ಸಂಮಿಶ್ರಣಗಳೇ ಅಂತಿಮವಾದುವಲ್ಲ; ಹೊಸ ದಿಗಂತಗಳ ಆಕಾಂಕ್ಷೆ ಯನ್ನು ಪೂರೈಸಲು ಬೇರೆಯೇ ರೀತಿಯ ಜನಪರ ಸಂಮಿಶ್ರಣಗಳ ಅಗತ್ಯವಿದೆ, ಸಾಧ್ಯತೆ ಇದೆ. ಹಾಗಾದಾಗ ಮಾತ್ರವೇ ನಮ್ಮ ಪ್ರಜಾಪ್ರಭುತ್ವವನ್ನು ದಿಕ್ಕಿಲ್ಲದ ಪ್ರಜ್ಞೆಯಾಗದಂತೆ ರಕ್ಷಿಸಿ ಜನರ ಪ್ರಭುತ್ವದ ಹಾದಿಗೆ ಕೊಂಡೊಯ್ಯುವ ಭರವಸೆ ಮೂಡುತ್ತದೆ.

## ಮಾನವ ಹಕ್ಕುಗಳ ದಮನ

ಕೆಲವು ತಿಂಗಳುಗಳ ಹಿಂದೆ ಮಹಾರಾಷ್ಟ್ರ, ಮಧ್ಯಪ್ರದೇಶ, ಆಂಧ್ರಪ್ರದೇಶ ಮತ್ತು ಕರ್ನಾಟಕ ರಾಜ್ಯಗಳ ಗೃಹಸಚಿವರ ಸಭೆ ಜರುಗಿತು. ಆಯಾ ರಾಜ್ಯಗಳ ವರಿಷ್ಠ ಪೊಲೀಸ್ ಅಧಿಕಾರಿಗಳೂ ಸಭೆಯಲ್ಲಿ ಭಾಗವಹಿಸಿದ್ದರು. ಮಸೀದಿಯೊಂದನ್ನು ಕೆಡವಲು ಪ್ರಚೋದನೆ ನೀಡಿದರೆಂಬ ಆಪಾದನೆಯಿಂದ ಮುಕ್ತರಾಗಿಲ್ಲದ ಕೇಂದ್ರ ಗೃಹಸಚಿವರು ಸಭೆಯನ್ನುದ್ದೇಶಿಸಿ ಮಾತನಾಡಿದರು. ಈ ನಾಲ್ಕು ರಾಜ್ಯಗಳಲ್ಲಿ ''ತೀವ್ರಗಾಮಿಗಳಾದ ನಕ್ಸಲೀಯರು'' ಹೆಚ್ಚಿದ ಭರಾಟೆಯಿಂದ ಚಳುವಳಿಗಳನ್ನು ಹಮ್ಮಿಕೊಳ್ಳು ತ್ತಿರುವುದರಿಂದ ಅವರನ್ನು ಹತ್ತಿಕ್ಕಲು ''ಸೂಕ್ತ'' ಕ್ರಮ ತೆಗೆದುಕೊಳ್ಳಬೇಕೆಂದು ಅಪ್ಪಣೆ ಕೊಡಿಸಿದ ಸಚಿವರು ಅದಕ್ಕಾಗಿ ಇನ್ನಷ್ಟು ಜೀಪುಗಳು, ಬಂದೂಕುಗಳು, ಪೇದೆಗಳು, ಗುಂಡುಗಳು, ಮುಂತಾದುವಕ್ಕೆ ಕೇಂದ್ರವು ಹಣ ನೀಡುವುದಾಗಿ ಘೋಷಿಸಿದರು. ಆ ಬಾಬ್ತು ಆಮೇಲೆ ರಾಜ್ಯಗಳಿಗೆ ಎಷ್ಟು ಹಣ ಕೇಂದ್ರದಿಂದ ಬಂದಿತೋ ತಿಳಿಯದು.

ರಾಮಮಂದಿರ ಕಟ್ಟಲು ಇಟ್ಟಿಗೆಯ ಸಂಗ್ರಹಣೆ ಮತ್ತು ಮಸೀದಿ ಕೆಡವಲು ಭಾವೋದ್ರೇಕಗೊಂಡ ಜನರ ಸಂಗ್ರಹಣೆ, - ಇವೇ ಈ ಕೇಂದ್ರ ಸಚಿವರಿಗೆ ತಿಳಿದಿರುವ ಚಳುವಳಿಗಳೆಂದು ತೋರುತ್ತದೆ. ಬೇರೆ ಜನಪರ ಚಳುವಳಿಗಳು ಅಪ್ರಸ್ತುತ ಮತ್ತು ನಿರರ್ಥಕವೆಂದು ಅವರು ಬಗೆದಿರಬಹುದು. ಸಾಮಾಜಿಕ-ಆರ್ಥಿಕ ಪರಿಸ್ಥಿತಿ ಬಿಗಡಾಯಿಸುತ್ತಿರುವ ಹಿನ್ನೆಲೆಯಲ್ಲಿ ಜನ ಕಂಗಾಲಾಗುತ್ತಿರುವುದು ಅವರಿಗೆ ಕಾಣದು. ಶತಮಾನಗಳಿಂದ ದಬ್ಬಾಳಿಕೆ-ದೌರ್ಜನ್ಯಗಳಿಗೆ ಗುರಿಯಾಗಿರುವ ನಮ್ಮ ಕೆಳವರ್ಗದ

# ಸಂಪಾದಕೀಯ

ಜನರ ಆಕಾಂಕ್ಷೆಗಳು ಅವರಿಗೆ ಹಿಡಿಸುವುದಿಲ್ಲ. ಪಾಳೆಗಾರಿ ಪದ್ಧತಿಯಡಿ ಅತೀವ ಮರ್ದನಕ್ಕೆ ಗುರಿಯಾಗಿರುವವರು ಬಂಧನದಿಂದ ಹೊರಬಂದು ಸ್ವತಂತ್ರ ಜೀವಿಗಳಾಗಬೇಕೆಂಬ ಬಯಕೆ ಪ್ರಕಟಿಸುವುದು ಅವರಿಗೆ ಅಸಹನೆ ತರಿಸುತ್ತದೆ. ಅವರು ಪ್ರತಿನಿಧಿಸುವುದು ಭಾರಿ ಭೂಮಾಲಿಕರ ಆಶಯಗಳನ್ನು ಎಂಬುದು ಇದರಿಂದ ಸ್ಪಷ್ಟವಾಗಿದೆ. ರಾಜ್ಯ ಯಂತ್ರವು ಭಾರಿ ಉದ್ದಿಮೆದಾರರ, ವಿದೇಶಿ ಬಂಡವಾಳದ ಹಾಗೂ ಭಾರಿ ಭೂಮಾಲಿಕರ ರಕ್ಷಣಾ ಪಡೆಯಾಗುವುದು ಇಂತಹ ಸನ್ನಿವೇಶದ ಪರಿಣಾಮ.

ಹೀಗಿರುವಾಗ ಜನಸಾಮಾನ್ಯರ ಜೀವನ, ಜೀವನಮೌಲ್ಯ, ಸ್ವಾತಂತ್ರ್ಯ ಮತ್ತು ಮಾನವ ಹಕ್ಕುಗಳೆಲ್ಲಾ ಧ್ವಂಸವಾಗಿಬಿಡುತ್ತವೆ. ಕೇವಲ ''ಕಾನೂನು ಪರಿಪಾಲನೆ'' ಎಂಬ ಯಾಂತ್ರಿಕ ದೃಷ್ಟಿ ಸರ್ವಸ್ವವನ್ನೂ ನಿರ್ಧರಿಸುವ ಮಾನದಂಡವಾಗುತ್ತದೆ. ಭೂಮಾಲಿಕ ಎಷ್ಟೇ ಪೀಡಿಸಲಿ, ಪೊಲೀಸರು ಎಷ್ಟೇ ಹಲ್ಲೆ ನಡೆಸಲಿ, ಅಧಿಕಾರಿಗಳು ಎಷ್ಟೇ ಭ್ರಷ್ಟರಾಗಿರಲಿ ಜನರಿಗೆ ಒಂದೇ ಸೂತ್ರದ ನಿರ್ದೇಶನ; ಅದು ''ಕಾನೂನು ಪರಿಪಾಲನೆ.'' ಆ ಕಾನೂನು ತುಳಿತಕ್ಕೆ ಸಿಲುಕಿರುವವರಿಗೆ ಬಿಡುಗಡೆ ನೀಡುವಂಥದಲ್ಲ, ಅದನ್ನು ಮಾಡಿದವರು ಜನರ ಪ್ರತಿನಿಧಿಗಳಲ್ಲ ಎಂಬಿತ್ಯಾದಿ ಅಂಶಗಳು ನಮ್ಮ ಆಳುವ ವರ್ಗಕ್ಕೆ ಅರ್ಥವಾಗುವುದಿಲ್ಲವೆಂದಲ್ಲ. ಬ್ರಿಟಿಷ್ ವಸಾಹತುಶಾಹಿಯ ದರ್ಪ ಮತ್ತು ಲೂಟಿಗಳ ಸಂದರ್ಭದಲ್ಲಿ ರಚಿಸಲಾದ ಕಾನೂನನ್ನು ಸಾರ್ವಭೌಮ, ಪ್ರಜಾಪ್ರಭುತ್ವವಾದೀ ಭಾರತದ ಸರ್ಕಾರವು ಪರಿಷ್ಕರಿಸಲು ಮುಂದಾಗಿಲ್ಲ. ಏಕೆಂದರೆ ಆ ಕಾನೂನು ಉಪಯುಕ್ತವಾದ ದಮನ ಸಾಧನೆಯಾಗಿದೆ, ನಮ್ಮ ಆಳುವ ವರ್ಗದ ಸವಲತ್ತುಗಳನ್ನು ರಕ್ಷಿಸಲು ಹರಿತವಾದ ಆಯುಧವಾಗಿದೆ.

ನಮ್ಮ ಸಮಸ್ಯೆಗಳಿಗೆ ನಕ್ಸಲೀಯ ಮಾರ್ಗವು ಪರಿಹಾರ ಒದಗಿಸುತ್ತದೋ ಇಲ್ಲವೋ ಎಂಬುದು ಚರ್ಚೆಗೆ ಗ್ರಾಸವಿರಬಹುದು; ಆಂಧ್ರದ ಸಿರಪುರ ಕಗ್ಗೊಲೆಯನ್ನು ನಾಗರಿಕ ಹಕ್ಕುಗಳ ಸಮಿತಿ ತೀವ್ರವಾಗಿ ಖಂಡಿಸಿದೆ. ಈ ವಿಧದ ಹಿಂಸೆ ಜನತೆಯ ಚಳುವಳಿ ಎನಿಸಿಕೊಳ್ಳುವುದಿಲ್ಲ. ಆದರೆ ನಮ್ಮ ಜನವಿಭಾಗವೊಂದು ಆ ದಿಕ್ಕಿನಲ್ಲಿ ಹೋಗುತ್ತಿದ್ದರೆ ಅದಕ್ಕೆ ಕಾರಣವೇನೆಂಬುದನ್ನು ಕೇಂದ್ರ ಗೃಹಸಚಿವರಾಗಲಿ ವಿವಿಧ ರಾಜ್ಯಗಳ ಆಡಳಿತ ಯಂತ್ರಗಳಾಗಲಿ ವಿವೇಚನೆ ಮಾಡುವ ಗೋಜಿಗೆ ಹೋಗುವುದಿಲ್ಲ. ಪೊಲೀಸ್ ಸಶಸ್ತ್ರಪಡೆಗಳಿಂದ ಅವರನ್ನು ಬಗ್ಗುಬಡಿಯುವುದೊಂದೇ ಅವರು ಅನುಸರಿಸುವ ಮಾರ್ಗ. ಹೋರಾಟಕ್ಕಿಳಿದ ಜನರನ್ನು ಪರಕೀಯರು, ಸಮಾಜದ್ವೇಷಿಗಳು, ರಾಜ್ಯದ್ರೋಹಿಗಳು ಎಂಬ ರೀತಿಯಲ್ಲಿ ನಡೆಸಿಕೊಳ್ಳುವ ರಾಜ್ಯಯಂತ್ರವು ಪ್ರಜಾಪ್ರಭುತ್ವಕ್ಕೆ ಪೂರಕವಾಗಬಲ್ಲ ಅಂಗರಚನೆಯಲ್ಲ. ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ, ಹೋರಾಟದಲ್ಲಿ ತೊಡಗುವವರೆಲ್ಲಾ ನಕ್ಸಲೀಯರು ಎಂದು ಪುಕಾರು ಹುಟ್ಟಿಸಿ ಅವರನ್ನು ಕೊಲ್ಲುವ, ಕೊಲ್ಲಿಸುವ ಪ್ರಕ್ರಿಯೆಯೂ ಆರಂಭವಾಗುತ್ತದೆ. ರಾಷ್ಟ್ರದ ಸಂಪತ್ತನ್ನು ದೋಚುವವರು ಮತ್ತು ಅದನ್ನು ವಿದೇಶೀ ಕಂಪನಿಗಳಿಗೆ ಪರಭಾರೆ ಮಾಡುವವರು ದೇಶಭಕ್ತರು, ತಮ್ಮ ಜೀವನವನ್ನು ಸ್ವಲ್ಪ ಹಸನುಗೊಳಿಸಿಕೊಳ್ಳಲು ಹೋರಾಟಕ್ಕೆ ಸಜ್ಜಾಗುವವರು ಸಮಾಜ ವಿರೋಧಿಗಳು ! ಈ ವಿಪರ್ಯಾಸವನ್ನು ಕೊನೆಗಾಣಿಸಬೇಕಾಗಿದೆ. ತೀವ್ರ ಆಂತರಿಕ ಘರ್ಷಣೆಗಳು ಅನಗತ್ಯವಾಗುವಂತಹ ರೀತಿಯಲ್ಲಿ ಸಮಾಜವನ್ನು ಸಂಘಟಿಸಿಕೊಳ್ಳಬೇಕಾಗಿದೆ.

ಜನಸಮುದಾಯವು ಹಲವು ರೀತಿಗಳಲ್ಲಿ ಸಂಘಟನೆಗೊಳ್ಳುವುದು ತನ್ನ ಸಕ್ರಿಯ ಮಧ್ಯಪ್ರವೇಶದಿಂದ ಈ ಉದ್ದೇಶವನ್ನು ಸಾಧಿಸುವುದಕ್ಕಾಗಿ. ರಾಯಚೂರು ಜಿಲ್ಲೆಯಲ್ಲಿ ರೈತ ಕೂಲಿ ಸಂಘವು ಮಾಡುವುದೂ ಇದನ್ನೇ. ಅಹಿತಕರ ವಾತಾವರಣವನ್ನು ನಿರ್ಮಿಸುವುದನ್ನಾಗಲಿ ಹಿಂಸಾಚಾರಕ್ಕಿಳಿಯುವುದನ್ನಾಗಲಿ ಸಮರ್ಥಿಸಬೇಕೆಂಬುದು ಇದರ ಅರ್ಥವಲ್ಲ. ಭೂಮಾಲಿಕರ ದಬ್ಬಾಳಿಕೆಯು ಹಿಂಸೆಯನ್ನು ಹರಿಯಬಿಟ್ಟಾಗ ಅದು ಸಮಾಜವಿರೋಧಿ ಕಾರ್ಯಾಚರಣೆ ಎಂದೇ ಅನಿಸಿಕೊಳ್ಳುತ್ತದೆ. ಅದನ್ನು ಹತ್ತಿಕ್ಕದ ಸರ್ಕಾರ ಕೂಲಿ ಸಂಘದವರನ್ನು ಚಚ್ಚಲು ಎಲ್ಲಿಲ್ಲದ ಆಸ್ಥೆ ತೋರಿಸುತ್ತದೆ. ಇದು ಅದರ ವರ್ಗ ದೃಷ್ಟಿಕೋನದ ಸೂಚಕ.

ರಿಜ್ವಾನಾ ಬೇಗಂ ಎಂಬಾಕೆಯ ಸಂದರ್ಭವು ಇದೆಲ್ಲದರ ಪ್ರತಿಫಲನವಾಗಿದೆ. ಆಕೆಯ ವಯಸ್ಸು ೧೮ಕ್ಕಿಂತ ಹೆಚ್ಚೆಂದು ತಜ್ಞವೈದ್ಯರು ಪ್ರಾಯೋಗಿಕವಾಗಿ ನಿರ್ಧರಿಸಿದ್ದಾರೆ. ಆದರೂ ಪೊಲೀಸರು ಆಕೆ ಅಪ್ರಾಪ್ತ ವಯಸ್ಕಳು, ಅವಳನ್ನು ಕೂಲಿ ಸಂಘದ ಕಾರ್ಯಕರ್ತರು ಅಪಹರಿಸಿದ್ದಾರೆಂದು ಅವರ ಮೇಲೆ ಆಪಾದನೆ ಹೊರಿಸಿದ್ದಾರೆ. ಆ ಸಂಬಂಧದಲ್ಲಿ ಎಂಟು ಮಂದಿ ಈಗಾಗಲೇ ೯ ತಿಂಗಳುಗಳಿಂದ ಬಂಧನದಲ್ಲಿದ್ದಾರೆ. ಈ ದೇಶದಲ್ಲಿ ನ್ಯಾಯಾಂಗದ ಕ್ರಿಯಾಶಾಲಿತ್ವವನ್ನು ಹಾಡಿ ಹೊಗಳುವವರು ಇಂತಹ ಪ್ರಸಂಗಗಳನ್ನು ನೆನಪಿಸಿಕೊಳ್ಳುವುದಿಲ್ಲ. ತಾನು ಸ್ವಯಂನಿರ್ಧಾರದಿಂದ ರೈತ ಸಂಘದ ಕಾರ್ಯಕರ್ತೆಯಾಗಿರುವುದಾಗಿಯೂ, ಸ್ವಯಂ ಪ್ರೇರಣೆಯಿಂದ ಮನೆಯಿಂದ ಹೊರಗೆ ಬಂದಿರುವುದಾಗಿಯೂ ರಿಜ್ವಾನಾ ಹೇಳಿದರೆ ಅದಕ್ಕೆ ಮಾನ್ಯತೆ ಇಲ್ಲ; ಭೂಮಾಲಿಕರ ಪರ ಸಾಕ್ಷಿ ಹೇಳುವ ಸುಳ್ಳರಿಗೇ ಮಾನ್ಯತೆ ! ತನ್ನ ಹೇಳಿಕೆಯನ್ನು ನ್ಯಾಯಾಲಯದಲ್ಲಿ ದಾಖಲು ಮಾಡಿಕೊಳ್ಳಬೇಕೆಂಬ ಆಕೆಯ ಮನವಿಗೆ ಹತ್ತು ತಿಂಗಳಿಂದ ಪುರಸ್ಕಾರ ದೊರೆತಿಲ್ಲ. ಇದು ನಮ್ಮ ಕಾನೂನು ವೈಖರಿ.

ರಾಜ್ಯ ಆಡಳಿತ ಯಂತ್ರಕ್ಕೆ ಹೃದಯವೂ ಇಲ್ಲ, ಕಣ್ಣು-ಕಿವಿಗಳೂ ಇಲ್ಲ. ರೈತ ಕೂಲಿ ಸಂಘವನ್ನು ಸಂಹರಿಸಿದರೆ ಎಲ್ಲಾ ನಿಯಂತ್ರಣಕ್ಕೆ ಬರುತ್ತದೆಂಬುದಷ್ಟೇ ಅದರ ಭ್ರಾಮಕ ಕಲ್ಪನೆ. ಒಂದು ಪ್ರಾಥಮಿಕ ಪ್ರಶ್ನೆ ಇದು: ರಿಜ್ವಾನಾಳಂತಹವರಿಗೆ ಒಂದು ಸಂಘದ ಕಾರ್ಯಕರ್ತೆಯರಾಗಿ ದುಡಿಯುವ ಹಕ್ಕಿಲ್ಲವೆ ? ಅದನ್ನು ತೀರ್ಮಾನಿಸುವವರೂ ಭೂಮಾಲಿಕರೇ ಏನು? ಈಗ ರಿಜ್ವಾನಾ ರಾಷ್ಟ್ರಾಧ್ಯಕ್ಷರಿಗೆ ಮತ್ತು ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗದ ಅಧ್ಯಕ್ಷರಿಗೆ ಮನವಿ ಸಲ್ಲಿಸಿದ್ದಾರೆ. ಅದರಿಂದಲಾದರೂ ಸಂವಿಧಾನದತ್ತವಾದ ಹಕ್ಕುಗಳು ಆಕೆಗೆ ಮತ್ತು ದೌರ್ಜನ್ಯಗಳಿಂದ ಪಾರಾಗಲು ಸಂಘಟಿತರಾಗುವ ಜನಸಾಮಾನ್ಯರಿಗೆ ದಕ್ಕುತ್ತವೆಯೇ ಎಂಬುದನ್ನು ಕಾತುರದಿಂದ ನಿರೀಕ್ಷಿಸಬೇಕಾಗಿದೆ.

> ಮುಖ ಪುಟ ಚಿತ್ರಕ್ಕೆ ನಿಮ್ಮ ಪ್ರತಿಕ್ರಿಯೆ ಏನು? ನಿಮ್ಮ ಅನಿಸಿಕೆಯನ್ನು ಅಕ್ಟೋಬರ್ ೧೫ರೊಳಗೆ ಬರೆದು ಕಳಿಸಿ. ಬರಹ ೨೫೦ ಪದಗಳ ಮಿತಿಯಲ್ಲಿರಲಿ. ಉತ್ತಮವಾದುದನ್ನು ಮುಂದಿನ ಸಂಚಿಕೆಯಲ್ಲಿ ಪ್ರಕಟಿಸಿ ಅದರ ಲೇಖಕರಿಗೆ ಒಂದು ವರ್ಷ ಹೊಸತು ಪತ್ರಿಕೆಯನ್ನು ಉಚಿತವಾಗಿ ಕಳಿಸಲಾಗುವುದು.
>
> – ಸಂ.


ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ





**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೦/- |
| ವಾರ್ಷಿಕ ಚಂದಾ | ರೂ. ೧೦೦/- |
| ಎರಡು ವರ್ಷಗಳಿಗೆ | ರೂ. ೧೮೦/- |
| ಮೂರು ವರ್ಷಗಳಿಗೆ | ರೂ. ೨೫೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯ ☎: ೨೨೫೧೩೮೨
ಕೆಂಪೇಗೌಡ ವೃತ್ತದ ಬಳಿ
ಬೆಂಗಳೂರು - ೫೬೦ ೦೦೯ ☎: ೨೮೭೨೩೮೫
ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫೦೦೧ ☎: ೪೪೧೦೦೬
ರಾಮಸ್ವಾಮಿ ವೃತ್ತ
ಮೈಸೂರು - ೫೭೦೦೨೪ ☎: ೪೪೪೯೪
ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫೧೦೨ ☎: ೨೪೩೦೨

### 'ಹೊಸತು'ವಿನ ದಿಕ್ಕು

'ವೈಚಾರಿಕತೆ' ಎಂಬುದು ಕೇವಲ ವೇದಿಕೆ, ಸಮ್ಮೇಳನ, ಎ.ಸಿ. ರೂಂಗಳ ನಾಟಕದ ರಿಹರ್ಸಲ್‌ಗಳಾಗಿರುವಾಗ, ವೈಚಾರಿಕತೆಯನ್ನು ನಿಜಜೀವನದ ತೆಕ್ಕೆಗೆ ದಕ್ಕಿಸಿಕೊಳ್ಳಬೇಕಾದುದು ಅನಿವಾರ್ಯ. ಅದರಲ್ಲಿಯೂ 'ಭಾರತ'ದಂತಹ 'ದ್ವಂದ್ವಮಯ' ಸಮಾಜದಲ್ಲಿ ವೈಚಾರಿಕತೆ ದಿಕ್ಕು ತಪ್ಪುವ ಸಾಧ್ಯತೆಗಳೇ ಹೆಚ್ಚು. ಪತ್ರಿಕೆ ಈ ನಿಟ್ಟಿನಲ್ಲಿ ಜನಸಮುದಾಯವನ್ನು ಜಾಗ್ರತವಾಹಿನಿಯೆಡೆಗೆ ಚಲಿಸುವಂತೆ ಮಾಡಬೇಕು. ಹಾಗಂತ ಈ ಜವಾಬ್ದಾರಿ ತುಂಬಾ ಸರಳವೇನಲ್ಲ. ಮಲ್ಟಿಮೀಡಿಯಾಗಳ ಮಧ್ಯೆ ಜಡತ್ವ ಮತ್ತು ಯಾಂತ್ರಿಕತೆಯನ್ನೇ 'ಜೀವಂತಿಕೆ' ಎಂದು ನಂಬಿ ಉಸಿರಾಡುತ್ತಿರುವ ಬಹುತೇಕ ಜನರ ನಾಡಿಮಿಡಿತವನ್ನೇ ನವೀಕರಿಸಬೇಕಾಗಿದೆ.

**ರಾಮಪುರ, ಮ.ಪ್ರ.** **ವಾಸುದೇವ ನಾಡಿಗ್**

ತಾವು ಜಾಗತೀಕರಣ, ಉದಾರೀಕರಣದಂಥ ಲೇಖನಗಳನ್ನು ಪದೇ ಪದೇ ಹಾಕದೆ, ಸಮಗ್ರ ಕರ್ನಾಟಕದ, ಮುಖ್ಯವಾಗಿ ಅಲ್ಲಿ ಕಿತ್ತು ತಿನ್ನುತ್ತಿರುವ ಸಾಮಾಜಿಕ ಹಾಗೂ ಸಾಂಸ್ಕೃತಿಕ ಬಿಕ್ಕಟ್ಟಿನ ಕುರಿತಾದ ಲೇಖನಗಳಿಗೆ ಹೆಚ್ಚು ಸ್ಪಂದಿಸಿರಿ- ಎಂಬುದು ನನ್ನ ಸಲಹೆ.

**ಅಂಬಾದಾಸ ವಡೆ**
**ಬಾಗಲಕೋಟೆ**




ಸಂಪ್ರದಾಯವಾದಿ, ವಿಚಾರವಾದಿ ಈ ಇಬ್ಬರಲ್ಲಿ ಯಾರು ಶ್ರೇಷ್ಠರು ಎನ್ನುವ ಚರ್ಚೆಗಿಂತ ಮುಖ್ಯವಾಗಿರುವುದು ಹೃದಯವಂತಿಕೆ, ಮಾನವೀಯ ಮೌಲ್ಯಗಳಲ್ಲಿ ನಂಬಿಕೆ ಇರುವುದು. ಈಗ ಅಗತ್ಯವಾಗಿ ಬೇಕಾಗಿರುವುದು ಅದು. ಕೆಲ ವಿಚಾರವಾದಿಗಳ ಸಣ್ಣತನ, ತಮ್ಮ ತೆವಲುಗಳಿಗೆ ಪ್ರತಿಕ್ಷಣ ಬಣ್ಣ ಬದಲಾಯಿಸುವ ಅವರ ನೀಚ ಸ್ವಭಾವ ಯುವಕರಲ್ಲಿ ಗೊಂದಲವುಂಟುಮಾಡಿದೆ. ನಡೆ-ನುಡಿಗಳ ನಡುವೆ ಅಂತರವಿರುವ ವ್ಯಕ್ತಿ ಗೌರವಕ್ಕೆ ಅರ್ಹನಲ್ಲ.

**ಮೈಸೂರು** **ಎಸ್. ಎಸ್. ರಮೇಶ್**

### ಬುದ್ಧನ ಇನ್ನೊಂದು ಕಥೆ

ಡಾ|| ಮ. ನ. ಜವರಯ್ಯನವರ **'ಬುದ್ಧನ ಇನ್ನೊಂದು ಕಥೆ'** ಎಂಬ ಲೇಖನವು ಬುದ್ಧನ ಬದುಕಿನ ಮೇಲೆ ಹೊಸ ಬೆಳಕನ್ನು ಚೆಲ್ಲುವಂತಿದೆ. ಬುದ್ಧನ ಕುರಿತು ಇದುವರೆಗೂ ಆಬಾಲವೃದ್ಧರಿಗೂ ತಿಳಿದಿರುವ ಕಥೆ – ಶವ, ವಯೋವೃದ್ಧ ಮತ್ತು ರೋಗಿಯನ್ನು ಕಂಡು ಲೌಕಿಕ ಬದುಕಿಗೆ ವಿದಾಯ ಹೇಳಿದ್ದು. ಆದರೆ ಡಾ|| ಮ. ನ. ಜವರಯ್ಯನವರು ಇಂಥ ಸೂಕ್ಷ್ಮ ವಿಷಯದ ಮೇಲೆ ಮಾಡಿರುವ ಸಂಶೋಧನಾತ್ಮಕ ಪ್ರಯತ್ನ ಸ್ತುತ್ಯರ್ಹವಾಗಿದೆ.

**ಹೂವಿನ ಹಡಗಲಿ** **ಪ್ರಭು ಸೊಪ್ಪಿನ**

### ಕರ್ನಾಟಕದಲ್ಲಿ ಉನ್ನತ ಶಿಕ್ಷಣ

ಪ್ರೊ|| ವೆಂಕಟೇಶ ಮೂರ್ತಿಯವರು ಪ್ರೌಢಶಾಲೆಯ ಹಂತದಲ್ಲೆ ವಿಜ್ಞಾನ ಕಲಿಕೆಯ ಬಗ್ಗೆ ಆಸಕ್ತಿ ಕಮರಿಹೋಗುತ್ತಿರುವುದಕ್ಕೆ ಆತಂಕ ವ್ಯಕ್ತಪಡಿಸಿರುವುದು ಸಹಜವಾಗಿದೆ. ಕಾಲದ ಪ್ರವಾಹದಲ್ಲಿ ಪಠ್ಯವಸ್ತುಗಳನ್ನೂ, ಪಠ್ಯಪುಸ್ತಕಗಳನ್ನೂ ಭೋರ್ಗರೆದು ಹರಿಸುವ ಪ್ರಯತ್ನದಿಂದಾಗಿ ವಿಷಯಗಳು ಶುಷ್ಕವಾಗಿವೆ. ಸಂಕೀರ್ಣವಾದ ವಿಜ್ಞಾನ ವಿಷಯಗಳನ್ನು ಬೋಧಿಸುವ ಶಿಕ್ಷಕರೇ ತಲೆನೋವೆಂದು ಕೂರುವ ಹತಾಶ ವ್ಯಕ್ತಿಗಳಾಗಿದ್ದಾರೆ. ಹೀಗಿರಲು ಮಕ್ಕಳ ಪಾಡೇನು ? ಯಾವುದೇ ವಿಷಯವನ್ನು ಬೋಧಿಸುವಾಗ, ಪಠ್ಯಪುಸ್ತಕ ರಚಿಸುವಾಗ ಸರಿಯಾದ ಸನ್ನಿವೇಶ ಸೃಷ್ಟಿಸಿ ಉದ್ದೇಶಿತ ವಿಷಯ ಮಂಡನೆ ಮಾಡಿ ಬೋಧಿಸಿದರೆ ಕಲಿಕೆ-ಬೋಧನೆ ಪರಿಣಾಮಕಾರಿಯಾಗುತ್ತದೆ. ವಿಷಯವೂ ಮಕ್ಕಳಲ್ಲಿ ಉಳಿಯುತ್ತದೆ.

**ಮೈಸೂರು** **ಪರಮಶಿವ ನಡುಬೆಟ್ಟ**

### ಹೀಗೊಬ್ಬ ಜನಸಾಮಾನ್ಯ

ಶ್ರೀ ಸಾಮಾನ್ಯ ಅನುಭವಿಸುವ ಕಷ್ಟಗಳನ್ನು ಎಳೆ ಎಳೆಯಾಗಿ ಅವನಿಂದ ಹೊರಗೆಡವಿದ್ದೀರಿ. ಭವಿಷ್ಯದ ಬದುಕಿಗೆ ತನ್ನದೇ ಆದ ಸುಂದರ ಕನಸುಗಳನ್ನು ಇವನ ಹಾಗೆ ಅನೇಕ ಜನರು ಇಟ್ಟುಕೊಂಡಿರುತ್ತಾರೆ. ಆದರೆ ನಮ್ಮ ಸಮಾಜ, ನಮ್ಮನ್ನು ಆಳುವವರ ಯೋಚನೆ ಇವರ ಆಸೆಗೆ ಸಂಪೂರ್ಣ ವಿರುದ್ಧವಾಗಿರುತ್ತದೆ.

**ಹೂವಿನ ಹಡಗಲಿ** **ಸುರೇಶ್ ಅಂಗಡಿ**

### ಐ. ಎನ್. ಎ. ಹುಸೇನ್‌ಸಾಬ್ ಗೂಡವಾಲಾ

ಧಾರವಾಡದ ಓರ್ವ 'ಸ್ವಾತಂತ್ರ್ಯಯೋಧನ ದಾರಿದ್ರ್ಯ'ದ ಬಗ್ಗೆ ತಮ್ಮ ಆಗಸ್ಟ್ ತಿಂಗಳ ಸಂಚಿಕೆಯಲ್ಲಿ ಬರೆದ ಲೇಖನ ಓದಿ ಈ ದೇಶದ ಕಂದು ಬಣ್ಣದ ಅಧಿಕಾರಶಾಹಿಗಳ ಬಗ್ಗೆ ಬೇಸರವೂ ಕ್ರೋಧವೂ ಉಂಟಾಗಿದೆ. ಅದೇ ರೀತಿ ವೇಷಧಾರಿ ಖೋಟಾ ಸ್ವಾತಂತ್ರ್ಯ ಹೋರಾಟಗಾರರ ಬಗ್ಗೆಯೂ ವಿವರವಾದ ಲೇಖನಗಳು ನಿಮ್ಮ ಪತ್ರಿಕೆಯಲ್ಲಿ ಬರಲಿ ಎಂದು ಆಶಿಸುತ್ತೇನೆ.

**ಊರುಕೆರೆ, ತುಮಕೂರು ಜಿಲ್ಲೆ** **ಟಿ. ಕೆ. ಗೋವಿಂದರಾಜು**

### ಸೋನಿಯಾ ವಿದೇಶೀ ಮೂಲ

ಸೋನಿಯಾ 'ವಿದೇಶೀ' ಅನ್ನೋ ಸಂಗತಿಯನ್ನು ಶುರುಮಾಡಿದವರು ಬಿಜೆಪಿಗಳು. ಕಾಂಗ್ರೆಸ್ ಪಕ್ಷದಿಂದ ಹೊರಹೋದ ಶರದ್ ಪವಾರ್‌ಗೆ ಇದ್ದ ಏಕೈಕ ಕಾರಣ ಸೋನಿಯಾ ವಿದೇಶದವರು ಎನ್ನುವುದು. ಆದರೆ ಬಿಜೆಪಿಯವರಿಗೆ ಮಾತ್ರ ಚುನಾವಣೆಗೆ ಇದೊಂದು ಸ್ಲೋಗನ್. ಒಂದು ನಿಶ್ಚಿತ ತಾತ್ವಿಕ ದೃಷ್ಟಿಕೋನ ಇರದವರು ಈ ರೀತಿಯ ಬಡಬಡಿಕೆಗಳಲ್ಲಿ ಮುಳುಗುತ್ತಾರೆ.

ವಂಶಾಡಳಿತವನ್ನು ದೃಷ್ಟಿಯಲ್ಲಿಟ್ಟುಕೊಂಡು ಸೋನಿಯಾ ಕಾಂಗ್ರೆಸ್ ಪಕ್ಷದ ಅಧ್ಯಕ್ಷತೆ ವಹಿಸಿಕೊಂಡದ್ದನ್ನು ನಾವೆಲ್ಲ ಶಾಶ್ವತವಾಗಿ ವಿರೋಧಿಸುವುದು ಉಚಿತ. ಆದರೆ ಒಂದು ರಾಷ್ಟ್ರೀಯ ಪಕ್ಷದ ಉಳಿವಿಗೆ ಮತ್ತು ಮತಾಂಧ ಪಕ್ಷಕ್ಕೆ ಪರ್ಯಾಯವಾಗಿ ಕಾಂಗ್ರೆಸ್ಸನ್ನು ಕಟ್ಟಲು ಸೋನಿಯಾ ಪಕ್ಷದ ಅಧ್ಯಕ್ಷೆಯಾದದ್ದನ್ನು ಸ್ವಾಗತಿಸುವುದೊಳಿತು.

ಇನ್ನು ಪ್ರೀತಿ ಮತ್ತು ದೇಶಪ್ರೇಮ: ಗಾಂಧೀಜಿಯನ್ನು ಕೊಂದವರು, ಇಲ್ಲಿ ಹುಟ್ಟಿ ಹೊರದೇಶದಲ್ಲಿ ನೆಲೆಸಿ ಈ ದೇಶವನ್ನು ಹೀನಾಮಾನ ಬೈದ ಭಯಂಕರ ಲೇಖಕರು, ಇಂಡಿಯಾದ ಅಂತಃಸತ್ವವಾದ ಸಹಬಾಳ್ವೆಯ ಸಂಕೇತವಾದ ಮಸೀದಿಗಳನ್ನು ಬೀಳಿಸಿದವರು, ಈ ದೇಶದ 'ಜ್ಞಾನ ವ್ಯವಸ್ಥೆ'ಯಲ್ಲಿ ಪ್ರಧಾನ ಪಾತ್ರ ವಹಿಸಿರುವ ಕ್ರೈಸ್ತ ಬಂಧುಗಳ ಪಾದ್ರಿಗಳನ್ನು ಸುಟ್ಟವರು, ಕಾರ್ಗಿಲ್‌ನಲ್ಲಿ ಅನಾವಶ್ಯಕ ಯುದ್ಧ ಸೃಷ್ಟಿಸಿ ದೇಶದ ಮೇಲೆ ಸಾಲದ ಹೊರೆ ಹೇರಿದವರು, ಈಗ ಅದೇ ಯುದ್ಧ ಸಂಗತಿಯನ್ನು ಓಟು ಕೇಳಲು ಉಪಯೋಗಿಸಿಕೊಳ್ಳುತ್ತಿರುವವರು ಇದೇ ನೆಲದಲ್ಲಿ ತಾನೆ ಹುಟ್ಟಿರುವರು.....? ಅನ್ಯ ಧರ್ಮೀಯ ಹುಡುಗ ಹುಡುಗಿಯರಿಬ್ಬರೂ ಪ್ರೀತಿಸಿದರೆ ಅದನ್ನೂ ರಾಷ್ಟ್ರೀಯ ಸಮಸ್ಯೆಯಾಗಿಸಿ ನಗರಗಳನ್ನು ಮತಾಂಧ ಜ್ವಾಲಾಮುಖಿಗಳನ್ನಾಗಿಸಿದವರು ಇಲ್ಲೇ ಹುಟ್ಟಿದವರು...? ಇವರೇ ತಾನೇ ಶೂದ್ರರೂ, ಮಹಿಳೆಯರೂ, ಓದದವರೂ, ಬರೀ ಸೇವೆ ಮಾಡಿಕೊಂಡಿರಬೇಕೆಂದು ಕಾನೂನು ರಚಿಸಿದವರು.....? 'ಬ್ರಿಟಿಷರು ಬಾರದಿದ್ದಲ್ಲಿ ನಾನು ದನದ ಕೊಟ್ಟಿಗೆಯಲ್ಲಿ ಸೆಗಣಿ ಹೊಡೆಯುತ್ತಿರಬೇಕಿತ್ತು' ಎಂಬ ಕುವೆಂಪುರವರ ಭಾವನಾತ್ಮಕ ಹೇಳಿಕೆಯ ಹಿಂದೆ ಇರುವ ಮನುವಾದಿಗಳು ಇದೇ ಮಹಾನ್ ಭಾರತದಲ್ಲಿ ತಾನೆ ಹುಟ್ಟಿದವರು.....?

ಪ್ರೇಮಿಸುವುದಕ್ಕೆ ಹುಟ್ಟು, ಜಾತಿ, ಧರ್ಮ, ಗಡಿ, ಲಿಂಗ ಇದ್ಯಾವುದೂ ಸಮಸ್ಯೆಗಳಲ್ಲ. ಒಂದು ದೇಶವನ್ನು, ವಸ್ತುವನ್ನು, ಹುಡುಗನನ್ನು ಪ್ರೀತಿಸುವುದಕ್ಕೆ ನಾವು ಇದೇ ನೆಲದಲ್ಲಿ ಹುಟ್ಟಬೇಕೆಂದೇನೂ ಇಲ್ಲ. ಭಾವನೆ, ಸ್ಪಂದನೆ, ಪ್ರೀತಿ, ಹೃದಯಮಿಡಿತ, ರೋಮಾಂಚನ, ನರಮಂಡಲ, ರಕ್ತ, ಧಮನಿ, ಮೆದುಳು, ಮನಸ್ಸು ಮನುಷ್ಯರಾದ ಎಲ್ಲರಿಗೂ ಇರುತ್ತವೆ. ನಾವೇ ಕೊರೆದ ಗಡಿಗಳು ತಾಕಿರಲಾರವು. ನಾಳೆ ಸೋನಿಯಾಳ ಮೊಮ್ಮಗುವಿನ ಮೈಯಲ್ಲಿ ಇಟಲಿಯ ರಕ್ತ ಎಷ್ಟಿದೆ ಎಂದು ಲೆಕ್ಕಹಾಕಲೂ ಬಹುದು !

ನಾನು ಸೋನಿಯ ಪ್ರಧಾನಿ ಆಗಬೇಕು ಅಂತ ಬಯಸುವವನಲ್ಲ. ಈ ದೇಶದಲ್ಲಿ ಎಡಪಾದಿಗಳಿಗೆ, ಪ್ರಗತಿಪರರಿಗೆ ಅಧಿಕಾರಕ್ಕೆ ಬರಲು ಸದ್ಯಕ್ಕೆ ಸಾಧ್ಯವೇ ಇಲ್ಲ ಎಂಬ ವಾತಾವರಣದಲ್ಲಿ ಬದುಕುತ್ತಿರುವ ನನ್ನಂಥವರಿಗೆ ಈ ಮತಾಂಧರಿಗಿಂತ ಉಳಿದವರು ಎಷ್ಟೋ ಪಾಲು ವಾಸಿ ಎನ್ನುವಂತಾಗಿದೆ.

**ಹೊಸಪೇಟೆ** **ಪ್ರಭಾಕರ, ಎ. ಎಸ್.**

# ಸ್ವದೇಶಿ ಚಳುವಳಿ ಇಂದು ಎಷ್ಟು ಪ್ರಸ್ತುತ? ಅದೇಕೆ ಆಗಿಲ್ಲ?

ಎಚ್. ಎಸ್. ದೊರೆಸ್ವಾಮಿ

ಗಾಂಧೀಜಿ ಸ್ವದೇಶಿ ಚಳುವಳಿಯನ್ನು ಆರಂಭಿಸಿದಾಗ ಈಸ್ಟ್ ಇಂಡಿಯಾ ಕಂಪನಿ ಭಾರತಕ್ಕೆ ಬಂದಿತ್ತು. ಅದು ವ್ಯಾಪಾರಕ್ಕಾಗಿಯೇ ಬಂದ ಸಂಸ್ಥೆ. ಅವರು ಭಾರತದಿಂದ ಕಡಿಮೆ ಬೆಲೆಯಲ್ಲಿ ಎಷ್ಟೋ ಪದಾರ್ಥಗಳನ್ನು ದೋಚಿಕೊಂಡು ಹೋದರು. ಅವುಗಳ ಪೈಕಿ ಅರಳೆಯೂ ಒಂದು. ನಮ್ಮ ದೇಶದಲ್ಲಿ ಬಟ್ಟೆ ಮಾಡಿಕೊಳ್ಳುವ ಕಲೆ, ಬೇರೆ ದೇಶಗಳ ಜನ ಬೆತ್ತಲೆ ತಿರುಗುತ್ತಿದ್ದ ಕಾಲದಿಂದ ಪ್ರಸ್ತುತವಿತ್ತು. ಬಂಗಾಳದ ಢಾಕಾ ಮಸ್ಲಿನ್ ಬಹಳ ಹೆಸರು ಗಳಿಸಿತ್ತು.

ಆಗ ಬಟ್ಟೆ ಉದ್ಯಮ ಗೃಹೋದ್ಯೋಗವಾಗಿ ನಡೆಯುತ್ತಿತ್ತು. ರಾಟೆಗಳಿಂದ ದಾರ ತೆಗೆದು, ಕೈಮಗ್ಗದಲ್ಲಿ ಬಟ್ಟೆ ತಯಾರಿಸುತ್ತಿದ್ದರು. ಈಸ್ಟ್ ಇಂಡಿಯಾ ಕಂಪೆನಿ ಈ ಉದ್ಯಮವನ್ನು ನಾಶಮಾಡಲು ಮಾಡಬಾರದ್ದನ್ನೆಲ್ಲ ಮಾಡಿತು. ಆನಂತರ ಅವರು ಅರಳೆಯನ್ನು ಕಡಿಮೆ ಬೆಲೆಗೆ ಕೊಂಡು, ಹಡಗಿನಲ್ಲಿ ಮ್ಯಾಂಚೆಸ್ಟರಿಗೆ ಸಾಗಿಸುತ್ತಿದ್ದರು. ಅಲ್ಲಿ ತಯಾರಾದ ಬಟ್ಟೆಯನ್ನು ಹಡಗಿನಲ್ಲಿ ತುಂಬಿಕೊಂಡು ಬಂದು ಭಾರತದಲ್ಲಿ ಮಾರಾಟ ಮಾಡತೊಡಗಿದರು. ಯಂತ್ರಗಳ ಆವಿಷ್ಕಾರವಾದ ಮೇಲೆ ಭಾರತದಲ್ಲಿ ಅದೇ ವೇಳೆಗೆ ಮೊದಲನೆಯ ಬಟ್ಟೆಯ ಗಿರಣಿ ಆರಂಭವಾಯಿತು. ಜೆಮ್‌ಷಡ್ಜಿ ತಾತಾ ಅದರ ಸ್ಥಾಪಕರು. ಮೊದಲನೆಯ ದೇಶೀಯ ಬಂಡವಾಳಶಾಹಿ ಬಟ್ಟೆ ಮಿಲ್ಲು ಭಾರತದಲ್ಲಿ ಅಂದು ಅಸ್ತಿತ್ವಕ್ಕೆ ಬಂತು. ಬ್ರಿಟಿಷರ ಈ ಪೈಪೋಟಿ, ತಮಗೆ ದೊರೆಯುವ ಲಾಭಕ್ಕೆ ಸಂಚಕಾರ ತರುತ್ತದೆಂಬ ಏಕೈಕ ಆತಂಕ ತಾತಾ ಅವರದು. ಗಾಂಧಿಯವರು ಬ್ರಿಟಿಷರ ಬಟ್ಟೆಯ ವಿರುದ್ಧವಾಗಿ ಚಳುವಳಿ ಮಾಡಿದ್ದು ತಾತಾಗೆ ಪ್ರಿಯವಾಗಿಯೇ ಇತ್ತು. ಸ್ವಾರ್ಥ ಅವರ ಈ ಮನೋಭಾವಕ್ಕೆ ಕಾರಣವಾಗಿತ್ತು ಎಂಬುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ.

ಗಾಂಧೀಜಿಗೆ ಬ್ರಿಟಿಷರು ಮ್ಯಾಂಚೆಸ್ಟರಿನಿಂದ ಬಟ್ಟೆ ತಂದು ಇಲ್ಲಿ ಮಾರುವುದು ಸರಿಕಾಣಲಿಲ್ಲ. ಆದರೆ ಇದಕ್ಕೆ ಕಾರಣ ಬೇರೆಯದೇ ಆಗಿತ್ತು. ಸಾಮಾನ್ಯಜನ ಅದರಲ್ಲೂ ಹಳ್ಳಿಯ ಬಡ ಕಸಬಿನವರು ಎಷ್ಟೋ ಕಾಲದಿಂದ ಜವಳಿ ಉದ್ಯಮ ನಡೆಸುತ್ತಿದ್ದು, ಅದಕ್ಕೆ ಬ್ರಿಟಿಷರ ಈ ಕ್ರಮದಿಂದ ಪೆಟ್ಟು ಬೀಳುವುದೆಂಬುದು ಗಾಂಧೀಜಿಯ ಆತಂಕ. ಅಷ್ಟೇ ಅಲ್ಲ, ಇವರನ್ನು ಹೀಗೆಯೇ ಬೆಳೆಯಗೊಟ್ಟರೆ ಅನತಿಕಾಲದಲ್ಲೇ ಅವರು ಯಂತ್ರ ಸಮೇತ ಭಾರತಕ್ಕೆ ಬಂದಿಳಿದು, ಮ್ಯಾಂಚೆಸ್ಟರ್ ಬದಲು ಇಲ್ಲೇ ತಮ್ಮ ಉದ್ಯಮವನ್ನು ಆರಂಭಮಾಡಿ, ಇನ್ನೂ ಹೆಚ್ಚಿನ ಶೋಷಣೆ ಮಾಡಬಹುದೆಂಬ ಆತಂಕ ಅವರದು. ಆ ಕಾಲದಲ್ಲಿ ಯಾವ ಆರ್ಥಿಕ ತಜ್ಞನೂ ಈ ಕುರಿತು ಹೀಗೆ ಯೋಚನೆ ಮಾಡಿರಲಿಲ್ಲ. ಗಾಂಧೀಜಿ ಇದರಿಂದಾಗಬಹುದಾದ ಅನಾಹುತವನ್ನು ಮನಗಂಡು, ಪರದೇಶದಿಂದ ಬರುವ ಎಲ್ಲ ಪದಾರ್ಥಗಳನ್ನೂ ಬಹಿಷ್ಕರಿಸಬೇಕೆಂದು ಜನತೆಗೆ ಕರೆ ಇತ್ತರು. ಆಗ ಮುಖ್ಯವಾಗಿ ಭಾರತಕ್ಕೆ ಪರದೇಶದಿಂದ ಬರುತ್ತಿದ್ದ ಸಾಮಗ್ರಿಗಳೆಂದರೆ, ಚಹಾಪುಡಿ, ಡೈಮಂಡ್ ಸಕ್ಕರೆ, ಬೀಟ್‌ರೂಟ್ ಸಕ್ಕರೆ, ಬಟ್ಟೆ ಮುಂತಾದ ಕೆಲವು ಸಾಮಗ್ರಿಗಳು ಮಾತ್ರ. ಇವುಗಳನ್ನೂ ಭಾರತೀಯರು ಬಹಿಷ್ಕರಿಸಬೇಕೆಂದು ಗಾಂಧೀಜಿ ಕರೆ ಇತ್ತರು. ಅನೇಕರು ಬಹಿಷ್ಕಾರ ಕ್ರಮ ಕೈಗೊಂಡು, ಆ ಪದಾರ್ಥಗಳನ್ನು ಕೊಳ್ಳುವುದನ್ನೂ ಕೈಬಿಟ್ಟರು. ಗಾಂಧೀಜಿ ಪ್ರಚಾರ ದೃಷ್ಟಿಯಿಂದ ಬಹಿರಂಗ ಸಭೆಗಳನ್ನು ಎಲ್ಲೆಲ್ಲೂ ನಡೆಸಿ, ಪರದೇಶಿ ಬಟ್ಟೆ ಸುಡುವ ಕಾರ್ಯಕ್ರಮ ಹಮ್ಮಿಕೊಳ್ಳಲು ಜನತೆಗೆ ಕರೆ ಇತ್ತರು. ಜನ ಅಧಿಕ ಪ್ರಮಾಣದಲ್ಲಿ ಈ ಬಟ್ಟೆಯ ಹೋಲಿ ಕಾರ್ಯಕ್ರಮದಲ್ಲಿ ಭಾಗವಹಿಸಲಾರಂಭಿಸಿದರು. ಸಭಿಕರು ತಾವಾಗಿಯೇ, ತಾವು ತೊಟ್ಟ, ಉಟ್ಟ ಬಟ್ಟೆಗಳನ್ನು ಬಿಚ್ಚಿ ಬೆಂಕಿಗೆ ಹಾಕುತ್ತಿದ್ದರು. ಮ್ಯಾಂಚೆಸ್ಟರ್‌ನ ಮಿಲ್ ಮಾಲೀಕರು ತಮ್ಮ ಮಿಲ್‌ಗಳನ್ನು ಮುಚ್ಚಬೇಕಾಗುವುದೆಂದು ಆತಂಕಪಟ್ಟರು.

ಈಗ ಭಾರತಕ್ಕೆ ಸ್ವಾತಂತ್ರ್ಯ ಬಂದ ಕಳೆದ ಐವತ್ತು ವರ್ಷಗಳಲ್ಲಿ ೫೦೦೦ ಬಹುರಾಷ್ಟ್ರೀಯ ಕಂಪೆನಿಗಳನ್ನು ನಮ್ಮ ಸರ್ಕಾರದವರೇ ಬರಮಾಡಿಕೊಂಡಿದ್ದಾರೆ. ಅವರಿಗೆ ವಿಶೇಷ ರಿಯಾಯಿತಿಗಳನ್ನೂ, ಸೌಲಭ್ಯಗಳನ್ನೂ ಒದಗಿಸಿದ್ದಾರೆ. ಗಾಂಧೀಜಿ ಸ್ವದೇಶಿ ಚಳುವಳಿ ಆರಂಭಿಸಿದಾಗ ಭಾರತದಲ್ಲಿ ಇದ್ದದ್ದು ಒಂದೇ ವಿದೇಶಿ ಕಂಪೆನಿ. ವ್ಯಾಪಾರಕ್ಕೆಂದು ಬಂದು ಅವರು ಮುಂದೆ ೨೦೦ ವರ್ಷಗಳ ಕಾಲ ನಮ್ಮನ್ನು ಗುಲಾಮಗಿರಿಗೆ ತಳ್ಳಿದರು. ಹೀಗಿರುವಾಗ ನಾವಾಗಿಯೇ ಬರಮಾಡಿಕೊಂಡಿರುವ ಈ ಬಹುರಾಷ್ಟ್ರೀಯ ಕಂಪನಿಗಳು ನಮ್ಮ ದೇಶವನ್ನು ಮತ್ತೆ ಆರ್ಥಿಕ ಗುಲಾಮಗಿರಿಗೆ ತಳ್ಳುವುದರಲ್ಲಿ ಅನುಮಾನವೇ ಇಲ್ಲ. ಸರ್ಕಾರದ ಈ ನೀತಿ ಅನರ್ಥಕಾರಿಯಾದದ್ದು. ಜನತೆಯು ಗಾಂಧೀಜಿ ಮಾಡಿದಂತೆ ಈ ಕಂಪೆನಿಗಳು ತಯಾರು ಮಾಡುವ ಪದಾರ್ಥಗಳನ್ನು ಕೊಳ್ಳಬಾರದೆಂದೂ ಅದಕ್ಕೆ ಬಹಿಷ್ಕಾರ ಹಾಕಬೇಕೆಂದೂ ಎಷ್ಟೋ ಹಿಂದೆ ಚಳುವಳಿ ಹೂಡಬೇಕಾಗಿತ್ತು. ಬಹುರಾಷ್ಟ್ರೀಯರು ತಯಾರಿಸುವ ಪದಾರ್ಥಗಳು ತಮ್ಮ ಮನೆಗಳಿಗೆ ಹೊಗದಂತೆ ತಡೆಗಟ್ಟಬೇಕಾಗಿತ್ತು. ಸಾರ್ವತ್ರಿಕವಾಗಿ ಬಹಿಷ್ಕಾರ ಚಳುವಳಿಯನ್ನು ಆರಂಭಿಸಬೇಕಾಗಿತ್ತು. ಈ ಕೆಲಸವನ್ನು ಮೊದಲೇ ಮಾಡಿದ್ದರೆ, ಅನೇಕ ಕಂಪೆನಿಗಳು ತಾವು ಇಲ್ಲಿ ತಳ ಊರಲು ಭಾರತೀಯರು ಅವಕಾಶ ಕೊಡುವುದಿಲ್ಲವೆಂದು ಮನಗಂಡು ಇಲ್ಲಿಗೆ ನುಗ್ಗಿಬರುವ ಸಾಹಸ ಮಾಡುತ್ತಿರಲಿಲ್ಲ.

ನಮಗೆ ವಿದೇಶಿ ಕಂಪನಿಗಳ ಆಗಮನದಿಂದ ಆಗಬಹುದಾದ ದುಷ್ಪರಿಣಾಮಗಳ ಬಗೆಗೆ ಅರಿವಿದ್ದರೂ, ನಾವೇಕೆ ಕಾರ್ಯೋನ್ಮುಖರಾಗುತ್ತಿಲ್ಲ? ಸ್ವಾತಂತ್ರ್ಯ ಪೂರ್ವಕ್ಕಿಂತಲೂ ಈಗ ವಿಚಾರಶಕ್ತಿ ಜನತೆಯಲ್ಲಿ ಬೆಳೆದಿದೆ. ಸಮಸ್ಯೆಗಳೂ ನೂರುಪಟ್ಟು ಹೆಚ್ಚಿವೆ. ಇವುಗಳ ಪರಿಹಾರಕ್ಕಾಗಿ ಹುಟ್ಟಿಕೊಂಡಿರುವ ಸಂಸ್ಥೆಗಳಿಗೂ ಕೊರತೆ ಇಲ್ಲ. ರೈತರ ಸಮಸ್ಯೆಗಳಿಗಾಗಿ, ಪರಿಸರ ಸಂರಕ್ಷಣೆಗಾಗಿ, ಕಾರ್ಮಿಕರ ಸಮಸ್ಯೆಗಳ ಪರಿಹಾರಕ್ಕಾಗಿ, ಮಹಿಳಾ ಜಾಗೃತಿಗಾಗಿ, ವಿದ್ಯಾರ್ಥಿ ಸಂಘಟನೆಗಾಗಿ, ಆದಿವಾಸಿಗಳ ಪುರೋಭಿವೃದ್ಧಿಗಾಗಿ, ದಲಿತರ ಮೇಲಿನ ದೌರ್ಜನ್ಯಗಳನ್ನು ಎದುರಿಸುವುದಕ್ಕಾಗಿ, ಹೀಗೆ ನೂರಾರು ಸಂಸ್ಥೆಗಳ ಒಂದು ದೊಡ್ಡ ಜಾಲವೇ ಇದೆ. ಇಷ್ಟೊಂದು ಸಮಾಜ

(ಮುಂದಿನ ಪುಟ ನೋಡಿ)



೧೯೩೦ರಲ್ಲಿ ಉಪ್ಪಿನ ಸತ್ಯಾಗ್ರಹಕ್ಕಾಗಿ ಗಾಂಧೀಜಿಯವರು ಕಾಲ್ನಡಿಗೆಯಿಂದಲೇ ಸಾಗಿದ ಸುಪ್ರಸಿದ್ಧವಾದ ದಂಡೀಯಾತ್ರೆ

# ಗಾಂಧೀಜಿ: ಹಿಂಸೆ-ಅಹಿಂಸೆ

**ಎನ್. ಪಿ. ಶಂಕರನಾರಾಯಣರಾವ್**

೨೦ನೆಯ ಶತಮಾನದಲ್ಲಿ ಗಾಂಧೀಜಿಯವರು ಅಹಿಂಸೆಯ ಪ್ರವಾದಿಯೆಂದೇ ಪ್ರಖ್ಯಾತರಾಗಿದ್ದಾರೆ. ೧೮೯೩ರ ಸುತ್ತಿನಲ್ಲಿ ಆರಂಭವಾಗಿ ೧೯೪೮ರಲ್ಲಿ ಅವರ ಹತ್ಯೆಯಲ್ಲಿ ಕೊನೆಗೊಂಡ ಅವರ ಸಾರ್ವಜನಿಕ ಜೀವನದ ಉದ್ದಕ್ಕೂ ಅವರು ಅಹಿಂಸೆಯನ್ನು ಎತ್ತಿ ಹಿಡಿದರು. ರಾಜಕೀಯ ಹೋರಾಟಗಳಲ್ಲಿ, ಸಮಾಜ ಸುಧಾರಣೆಯ ಚಳುವಳಿಗಳಲ್ಲಿ ಅವರು ಅಹಿಂಸೆಯನ್ನು ಕಾರ್ಯರೂಪಕ್ಕೆ ಇಳಿಸಿ, ನೂತನವಾದ ಹೋರಾಟದ ವಿಧಾನಗಳನ್ನು ಆವಿಷ್ಕರಿಸಿದರು. ಸತ್ಯಾಗ್ರಹ ಎಂದು ಹೆಸರಾಗಿರುವ ಅವರ ಆ ಹೋರಾಟ ವಿಧಾನವನ್ನು ಅಂಬೇಡ್ಕರರೂ ಸೇರಿದಂತೆ ಹಲವಾರು ರಾಜಕೀಯ ನಾಯಕರು, ಮಾರ್ಟಿನ್ ಲೂಥರ್ ಕಿಂಗ್ ಮುಂತಾದ ಸಾಮಾಜಿಕ ಸಮಾನತೆಯ ಪ್ರತಿಪಾದಕರು ಪ್ರಯೋಗಿಸಿದ್ದಾರೆ. ಯಶಸ್ಸಿನ ಮಟ್ಟ ಎಲ್ಲ ಸಂರ್ಭಗಳಲ್ಲಿಯೂ, ಎಲ್ಲ ಹೋರಾಟಗಳಲ್ಲಿಯೂ ಒಂದೇ ರೀತಿಯಾಗಿಲ್ಲ. ಆದರೂ ಸಹ ಈಗ ಸತ್ಯಾಗ್ರಹವು ಸಾಕಷ್ಟು ಪರಿಣಾಮಕಾರಿಯಾದ ಒಂದು ರಾಜಕೀಯ ಹೋರಾಟ ವಿಧಾನವಾಗಿ ಜಗತ್ಪ್ರಸಿದ್ಧವಾಗಿದೆ. ಆರಂಭಿಕ ಹಂತದಲ್ಲಿ ೧೯೦೮ರಲ್ಲಿ ಅದು ಟ್ರಾನ್ಸ್‌ವಾಲಿನಲ್ಲಿ ಬೃಹತ್‌ರೂಪದಲ್ಲಿ ಮೊದಲ ಬಾರಿಗೆ ಅನುಷ್ಠಾನಗೊಂಡಾಗಲೇ ಶ್ವೇತ ವರ್ಣೀಯರೊಬ್ಬರು ''ಅಸಗಾಯ್‌ಗಿಂತ ಇದು ಎಷ್ಟೋ ಮೇಲು!'' ಎಂದು ಉದ್ಗರಿಸಿದ್ದರು. 'ಅಸಗಾಯ್' ಆಫ್ರಿಕದ ಕಪ್ಪು ಜನರ ಮಚ್ಚುಗತ್ತಿ.



ನೋವಾಖಲಿಯಲ್ಲಿ ಬತ್ತದ ಗದ್ದೆಯನ್ನು ದಾಟುತ್ತಿರುವುದು

ಹಿಂಸೆ–ಅಹಿಂಸೆಗಳನ್ನು ಕುರಿತ ಗಾಂಧೀಜಿಯವರ ಚಿಂತನೆ, ಅದರ ವಿವಿಧ ಆಯಾಮಗಳು ಮುಂತಾದುವನ್ನು ಕುರಿತ ಜಿಜ್ಞಾಸೆಯು ಗಾಂಧೀಜಿಯವರ ಇಂಗಿತ ಹೀಗಿರಬಹುದೇ ಎಂಬ ಧಾಟಿಯಲ್ಲಿ ಮಾತ್ರ ವ್ಯಕ್ತವಾಗಬಲ್ಲದು ಎನಿಸುತ್ತದೆ.

**ಅಹಿಂಸೆ : ಮತಧರ್ಮಗಳಲ್ಲಿ**

ಭಾರತೀಯ ಮತಧರ್ಮಗಳಲ್ಲಿ ಅಹಿಂಸೆಯು ಒಂದು ಪ್ರಧಾನ ಅಂಶವಾಗಿದೆ. ಜೈನ ಮತ್ತು ಬೌದ್ಧಮತಗಳಲ್ಲಿ ಇದು ಪ್ರತಿಪಾದಿಸಲ್ಪಟ್ಟಿದೆ. ಹಿಂದು ಧರ್ಮದಲ್ಲಿಯೂ ಸಹ ಅರಿಷಡ್ವರ್ಗಗಳನ್ನು ಗೆಲ್ಲುವುದು ಮುಂತಾದವನ್ನು ವಿವರಿಸುವಾಗ ಅಹಿಂಸೆಯು ಮೇಲು ಸ್ಥಾನ ಪಡೆಯುತ್ತದೆ. ಯೇಸು ಕ್ರಿಸ್ತನ ಬೋಧನೆಗಳಲ್ಲಿ ಅಹಿಂಸೆಯು ಅಹಿಂಸೆಯಾಗಿಯೇ ಪ್ರಸ್ತಾಪಗೊಂಡಿಲ್ಲವಾದರೂ ಕ್ಷಮೆ, ಒಂದು ಕೆನ್ನೆಗೆ ಹೊಡೆದರೆ ಇನ್ನೊಂದು ಕೆನ್ನೆಯನ್ನು ತೋರಿಸು, ಮುಂತಾದವು ಬರುವಾಗ ಅಲ್ಲಿ ಅಹಿಂಸೆಯು ಇಂಗಿತವಾಗಿದೆ. ಆದರೆ ಎಷ್ಟು ಪ್ರಮುಖ ಸ್ಥಾನವನ್ನು ಪಡೆದಿದ್ದರೂ, ನಿತ್ಯಜೀವನದಲ್ಲಿ ಅದು ಅನುಷ್ಠಾನಕ್ಕೆ ಬರುವಾಗ್ಗ 'ಮಂತ್ರಕ್ಕಿಂತ ಉಗುಳೇ ಜಾಸ್ತಿ' ಎಂಬಂತಾಗಿದೆ. ಇದು ಮಾತ್ರವಲ್ಲ, ಅನುಷ್ಠಾನ ವೈಯಕ್ತಿಕವೇ ಹೊರತು ಸಾಮಾಜಿಕ ವ್ಯಾಪ್ತಿಯದಲ್ಲ. ಲೌಕಿಕವಾದ ವ್ಯಾಜ್ಯಗಳಲ್ಲಿ, ಮುಖ್ಯವಾಗಿ ರಾಜರಾಜರ ನಡುವಣ ಸಂಬಂಧಗಳಲ್ಲಿ ಅಹಿಂಸೆ ವಹಿಸಿರುವ ಪಾತ್ರ ಏನೇನೂ ಇಲ್ಲ. ಅದೇನೇ ಇದ್ದರೂ ಗಾಂಧೀಜಿಯವರ ಮೇಲೆ ಈ ಎಲ್ಲ ಮತಧರ್ಮಗಳ ತಾತ್ವಿಕ ಚಿಂತನೆಗಳೂ ಮಹತ್ತರ ಪ್ರಭಾವ ಬೀರಿವೆ. ಯೇಸು ಕ್ರಿಸ್ತನ ಬೋಧನೆಗಳು ಹಾಗೂ ಸಂತ ನರಸೀ ಮೆಹ್ತನ ಬೋಧನೆಗಳು ಅವರ ಮೇಲೆ ಬೀರಿರು ವಂತಹ ಪ್ರಭಾವವಂತೂ ಅಪಾರ.

**ರಸ್ಕಿನ್ ಮತ್ತು ಟಾಲ್‌ಸ್ಟಾಯ್**

ಗಾಂಧೀಜಿಯವರು ಪ್ರತಿಪಾದಿಸಿರುವ ತತ್ವಗಳ ಮೇಲೆ ರಸ್ಕಿನ್ ಮತ್ತು ಟಾಲ್‌ಸ್ಟಾಯ್ ಅವರು ಬೀರಿರುವ ಪ್ರಭಾವವು ಮಹತ್ತರ ವಾದುದು. ೧೯೦೮ರಷ್ಟು ಹಿಂದೆಯೇ ಅವರು ತಾವು ನಡೆಸುತ್ತಿದ್ದ 'ಇಂಡಿಯನ್ ಒಪೀನಿಯನ್' ಪತ್ರಿಕೆಯಲ್ಲಿ ರಸ್ಕಿನ್ನನ 'ಅನ್‌ಟು ದಿಸ್ ಲಾಸ್ಟ್' ಕೃತಿಯನ್ನು ಸರಳ ಸಂಕ್ಷಿಪ್ತ ಗುಜರಾತಿಗೆ ಅನುವಾದ ಮಾಡಿ ಪ್ರಕಟಿಸಿದರು. ಟಾಲ್‌ಸ್ಟಾಯ್‌ರ ಬರವಣಿಗೆಗಳಿಂದ ಪ್ರಭಾವಗೊಂಡ ಅವರು ದಕ್ಷಿಣ ಆಫ್ರಿಕಾದಲ್ಲಿ 'ಫೀನಿಕ್ಸ್' ಮತ್ತು

*(ಮುಂದಿನ ಪುಟ ನೋಡಿ)*

---

*(ಹಿಂದಿನ ಪುಟದಿಂದ)*

ಸೇವಾ ಸಂಸ್ಥೆಗಳಿದ್ದೂ, ಬಹುರಾಷ್ಟ್ರೀಯರನ್ನು ತಡೆಗಟ್ಟುವ, ಸ್ವದೇಶಿಯ ಮನೋಭಾವ ಬೆಳೆಸುವ ಒಂದು ಹೋರಾಟದ ಸಂಘಟನೆ ಏಕೆ ಕೈಗೂಡಿಲ್ಲ ಎಂಬುದನ್ನು ಕುರಿತು ಈ ಎಲ್ಲ ಸಮಾಜ ಸೇವಾ ಸಂಸ್ಥೆಗಳೂ ತೀವ್ರವಾಗಿ ವಿಚಾರ ಮಾಡಬೇಕು. ಗಾಂಧೀಜಿಗೆ ಸಂಘಟನೆ ಮಾಡಲು ಆಯಿತೇಕೆ? ನಮಗೇಕೆ ಆಗಿಲ್ಲ, ಎಂದೂ ನಮ್ಮನ್ನು ನಾವೇ ಪ್ರಶ್ನಿಸಿಕೊಳ್ಳಬೇಕು. ಅದಕ್ಕೆ ಕಾರಣ ಹುಡುಕಿಕೊಳ್ಳಲು ತಲೆ ಕೆಡಿಸಿಕೊಳ್ಳಬೇಕಾಗಿಲ್ಲ. ಅದಕ್ಕೆ ಮುಖ್ಯ ಕಾರಣ, ನಮ್ಮಗ್ಯಾರಿಗೂ ಸಮಾಜದ ಬಗ್ಗೆ ಬದ್ಧತೆ ಇಲ್ಲ, ದೇಶಾಭಿಮಾನ ಇಲ್ಲ, ಅದನ್ನು ಸಾಧಿಸಲು ಬೇಕಾದ ಇಚ್ಛಾಶಕ್ತಿ ಇಲ್ಲ ಎಂಬುದನ್ನು ನಾವೆಲ್ಲ ಒಪ್ಪಿಕೊಳ್ಳಬೇಕು. ಸಂಘಸಂಸ್ಥೆಗಳು ಕೂಡಿ ಕೆಲಸ ಮಾಡುವುದನ್ನು ಕಲಿಯಬೇಕು. ಸ್ವಲ್ಪ ತ್ಯಾಗ ಬಲಿದಾನಕ್ಕೆ ತಯಾರಾಗಬೇಕು.

ಅಮೇರಿಕದ ಒಂದು ಉದಾಹರಣೆ ಕೊಟ್ಟರೆ ನಮ್ಮಲ್ಲಿ ಇರುವ ಕೊರತೆಯೇನು ಎಂಬುದು ಅರ್ಥವಾಗುತ್ತದೆ:

ಅಮೆರಿಕಕ್ಕೆ ಸ್ವಾತಂತ್ರ್ಯ ಬಂದ ಹೊಸದರಲ್ಲಿ ಅಲ್ಲಿಯ ಸರ್ಕಾರ ಹಾಗೂ ಜನ, ತಮಗೆ ಬೇಕಾದ ಉಣ್ಣೆಗಾಗಿ ಇಂಗ್ಲೆಂಡನ್ನು ಸಂಪೂರ್ಣವಾಗಿ ಅವಲಂಬನೆ ಮಾಡಿದ್ದರು. ಕೆಲವರ್ಷಗಳ ಮೇಲೆ ಬುದ್ಧಿ ಜೀವಿಗಳು, ಸಮಾಜ ಕಾರ್ಯಕರ್ತರು, ಉಣ್ಣೆಗಾಗಿ ಇಂಗ್ಲೆಂಡನ್ನು ಅವಲಂಬಿಸುವುದು ತಪ್ಪು, ಅದರಿಂದ ಬಹಳ ಹಣ ಅಲ್ಲಿಗೆ ಹರಿದು ಹೋಗುತ್ತದೆ. ಆದ್ದರಿಂದ ಅದನ್ನು ತಡೆಗಟ್ಟಬೇಕು ಎಂದು ನಿರ್ಧರಿಸಿದರು. ಕುರಿ ಪೋಷಣೆಯ ಉದ್ಯಮವನ್ನು ಬೆಳೆಸಿದರು. ಕುರಿ ಸಾಕುವುದು ಉಣ್ಣೆಯ ಆಮದನ್ನು ತಡೆಗಟ್ಟುವುದಕ್ಕಾಗಿ. ಆದ್ದರಿಂದ ಕುರಿಯ ಮಾಂಸವನ್ನೂ ತಿನ್ನುವುದೇ ಬೇಡ. ಹಸು, ಹಂದಿ ತಿಂದು ಬದುಕೋಣ. ಕುರಿ ಸಾಕಣೆ ಉದ್ಯಮ ಬೆಳೆಸಿ, ಉಣ್ಣೆಯ ವಿಚಾರಕ್ಕೆ ಸ್ವಪರಿಪೂರ್ಣರಾಗೋಣ ಎಂದು ವಿಚಾರ ಮಾಡಿದರು. ಅದಕ್ಕೆ ಕಾರ್ಯಕ್ರಮ ಹಾಕಿಕೊಂಡರು. ಜನತೆಯ ಸಹಯೋಗ ಪಡೆದುಕೊಂಡರು. ಒಂದು ದಿನ ಉಣ್ಣೆಯ ಆಮದು ಪೂರ್ತಿ ನಿಂತುಹೋಯಿತು.

ಇಂತಹ ಇಚ್ಛಾಶಕ್ತಿ ಭಾರತೀಯರಲ್ಲಿ ಉಂಟಾದರೆ ಬಹುರಾಷ್ಟ್ರೀಯರ ಹಾವಳಿ ತಡೆಗಟ್ಟಲೂ, ಸ್ವದೇಶಿ ಮತ್ತು ಸ್ವಾವಲಂಬನೆ ಬೆಳೆಸಲೂ ಸಾಧ್ಯವಾದೀತು. ಇಂತಹ ಒಂದು ಬಹಿಷ್ಕಾರ ಚಳುವಳಿಯನ್ನು ಕರ್ನಾಟಕದ ಎಲ್ಲ ಸೇವಾಸಂಸ್ಥೆಗಳೂ ಕೂಡಿಕೊಂಡು ಆರಂಭಿಸಲು ಸಾಧ್ಯವಿಲ್ಲವೇ ಇಂಬುದನ್ನು ಕುರಿತು ಎಲ್ಲರೂ ಕೂಡಿ ಆಲೋಚಿಸಬೇಕು.

ಎಚ್. ಎಸ್. ದೊರೆಸ್ವಾಮಿ
ನಂ. ೧೮/ಬಿ, ೭ನೇ ಅಡ್ಡರಸ್ತೆ, ಎನ್. ಆರ್. ಕಾಲೋನಿ, ಬೆಂಗಳೂರು - ೫೬೦೦೧೯

### ಗಾಂಧೀಜಿ : ಹಿಂಸೆ – ಅಹಿಂಸೆ

'ಟಾಲ್‌ಸ್ಟಾಯ್' ಆಶ್ರಮಗಳನ್ನು ತೆರೆದರು.

ಬಂಡವಾಳ, ಲಾಭ, ನಿರಂತರ ವಿಸ್ತರಣೆಗಳನ್ನು ಪ್ರತಿಪಾದಿಸುವ ಅರ್ಥಶಾಸ್ತ್ರವನ್ನು ಪ್ರಬಲವಾಗಿ ವಿರೋಧಿಸುತ್ತಿದ್ದವರು ರಸ್ಕಿನ್. ಸರಳ ಭಾಷೆಯಲ್ಲಿ ಸ್ಪರ್ಧೆಯನ್ನು ತಗ್ಗಿಸಿ, ಪರಸ್ಪರ ಪ್ರಯೋಜನದ ಆಧಾರದ ಮೇಲೆ ರೂಪುಗೊಳ್ಳುವ ಒಂದು ವಿನೂತನ ಅರ್ಥಶಾಸ್ತ್ರವನ್ನು ಅವರು ಪ್ರತಿಪಾದಿಸಿದರು, ಸ್ಪರ್ಧೆಯಿಂದ ಅಂತಿಮವಾಗಿ ನಷ್ಟ ಎಂದು ಅವರು ಹೇಳಿದರು.

ಟಾಲ್‌ಸ್ಟಾಯ್ ಶ್ರೀಮಂತರು ಬಡಜನರ ಧರ್ಮದರ್ಶಿಗಳಂತೆ ಇರಬೇಕು ಎಂದು ಹೇಳಿದರು. ಅವರ 'ರಿಸರೆಕ್ಷನ್' ಕಾದಂಬರಿಯ ಅಂತ್ಯಭಾಗದಲ್ಲಿ ಅದರ ರೂಪರೇಷೆಗಳು ದೊರೆಯುತ್ತವೆ. ಈ ಬಹುಮುಖ ಪ್ರಭಾವಗಳ ಕಾರಣದಿಂದಾಗಿಯೇ ಗಾಂಧೀಜಿಯವರ ಅಹಿಂಸಾತತ್ವದ ಪ್ರತಿಪಾದನೆಯು ಸಹ ಬಹುಮುಖ ಪ್ರಭಾವವುಳ್ಳದ್ದು ಹಾಗೂ ಚೈತನ್ಯಪೂರ್ಣವಾದದ್ದು.

### ಗಾಂಧೀಜಿಯವರ ಅಹಿಂಸೆಯ ವ್ಯಾಪ್ತಿ

ಗಾಂಧೀಜಿಯವರು ಪ್ರತಿಪಾದಿಸಿರುವ ಅಹಿಂಸೆಯ ತತ್ವಕ್ಕೆ ಮುಖ್ಯವಾಗಿ ಮೂರು ಆಯಾಮಗಳಿವೆ ಎಂದು ಹೇಳಬಹುದು.

ವೈಯಕ್ತಿಕ ಆಯಾಮವು ಮೊದಲನೆಯದು. ಇದು ಬಹುಮಟ್ಟಿಗೆ ವ್ಯಕ್ತಿಯ ವಿಚಾರ ಮತ್ತು ಆಚಾರಗಳಿಗೆ ಸಂಬಂಧಪಟ್ಟದ್ದು. ಉದ್ವೇಗರಹಿತವಾದ ಜೀವನ ಇದರ ಆದರ್ಶ. ಸರಳ ಆಹಾರ, ಸರಳ ಉಡುಪು, ಸರಳ ಜೀವನ, ಸಂಯಮ, ಎಲ್ಲವನ್ನೂ ಬಾಚಿಕೊಂಡು ತನ್ನದಾಗಿಸಿಕೊಳ್ಳಬೇಕು ಎಂಬ ಆಶೆಬುರುಕತನದಿಂದ ಮುಕ್ತಿ, ಅಪರಿಗ್ರಹ ಮೊದಲಾದವು ಇದರ ಸೂತ್ರಗಳು. ಒಂದೇ ಮಾತಿನಲ್ಲಿ ಹೇಳುವುದಾದರೆ 'ವೈಷ್ಣವ ಜನತೋ ತೇನೇ ಕಹಿಯೇ ಜೇ ಪೀಡ ಪರಾಯಿ ಜಾಣೇರೆ' ಎಂಬ ನರಸೀ ಮೆಹ್ತನ ಕೃತಿಯ 'ವೈಷ್ಣವ' ಗಾಂಧೀಜಿಯವರ ಅಹಿಂಸೆಯ ವೈಯಕ್ತಿಕ ಆಯಾಮದ ಮೂರ್ತರೂಪ.

ಸಾಮಾಜಿಕ ಆಯಾಮದಲ್ಲಿ ಮೊದಲನೆಯದು ಪ್ರತಿಭಟನೆಯ ಆಯಾಮ. ಇದನ್ನು ಗಾಂಧೀಜಿ ಮೊದಲಿಗೆ, 'ಪ್ಯಾಸಿವ್ ರೆಸಿಸ್ಟೆನ್ಸ್' ಎಂದು ಕರೆದರು. ಅದರ ಗುಜರಾತಿ ಸಾಮಾನ್ಯ ಶಬ್ದವನ್ನು ಹುಡುಕಿದಾಗ ದೊರೆತದ್ದು ಸತ್ಯಾಗ್ರಹ. ಸಭೆಗಳು, ಭಾಷಣಗಳು, ನಿರ್ಣಯಗಳು, ಮನವಿಗಳು, ಕಾಯಿದೆ ಭಂಗ, ಅಸಹಕಾರ, ಕರ ನಿರಾಕರಣೆ ಮುಂತಾದ ಕ್ರಮಗಳ ಮೂಲಕ ನಡೆಯುವ ಪ್ರತಿಭಟನಾ ಚಳುವಳಿ ಸತ್ಯಾಗ್ರಹ. ಇದರ ಮೊಟ್ಟ ಮೊದಲ ನಿಯಮ ನಮ್ಮ ಕೋರಿಕೆ ನ್ಯಾಯಯುತವಾಗಿರಬೇಕು ಎಂಬುದು. ಸತ್ಯಾಗ್ರಹಿಯು ಹಿಂಸೆಯ ದಾರಿಯಲ್ಲಿ ಹೋರಾಡಲಾಗದು, ತನ್ನ ಮೇಲೆ ಹಿಂಸೆಯು ಪ್ರಯೋಗಗೊಂಡಾಗ ಅದನ್ನು ಸಹನೆಯಿಂದ, ಪ್ರತಿ ಹಿಂಸೆಗೆ ಇಳಿಯದೇ ಅನುಭವಿಸಬೇಕು. ಹೊಡೆಸಿ ಕೊಳ್ಳುತ್ತಾ, ನೋವಿನಿಂದ ಅರಚದೇ ಏಟುತಿಂದ



ಸತ್ಯಾಗ್ರಹಿಗಳನ್ನು ಕಣ್ಣಾರೆ ಕಂಡು ಮೂಕ ವಿಸ್ಮಿತರಾದ ಹಲವಾರು ಮಂದಿ ಇದ್ದಾರೆ. ೧೯೩೦ರ ಮೇ ೨೧ ರಂದು ಧರ್ಸಾನ ಎಂಬಲ್ಲಿ ಸರೋಜಿನಿ ನಾಯ್ಡು ಅವರ ನಾಯಕತ್ವದಲ್ಲಿ ಜರುಗಿದ ಸತ್ಯಾಗ್ರಹವನ್ನು ಅಮೆರಿಕದ ಯುನೈಟೆಡ್ ಪ್ರೆಸ್‌ನ ಪ್ರತಿನಿಧಿ ವೆಬ್ ಮಿಲರ್ ಎಂಬುವರು ಕಂಡು, ಮಾಡಿರುವ ವರದಿ ಸತ್ಯಾಗ್ರಹದ ನೈಜ ಚಿತ್ರವೊಂದನ್ನು ಒದಗಿಸುತ್ತದೆ. ಅಂತಿಮವಾಗಿ ಭಾರತವು ಸ್ವಾತಂತ್ರ್ಯವನ್ನು ಗಳಿಸಿದುದಕ್ಕೆ, ಸುಮಾರು ೨೫ ವರ್ಷಗಳ ಅವಧಿಯಲ್ಲಿ ಹರಡಿಕೊಂಡಿರುವ ಇಂತಹ ಸತ್ಯಾಗ್ರಹಗಳ ಮೂಲಕ ನಿರ್ಮಾಣಗೊಂಡ ಜಗದ್ವ್ಯಾಪಿ ಸಹಾನುಭೂತಿಯು ಒಂದು ಪ್ರಮುಖ ಕಾರಣ ಎಂಬುದು ನಿಸ್ಸಂದೇಹ.

ಸಾಮಾಜಿಕ ಆಯಾಮದಲ್ಲಿ ಎರಡನೆಯದು ಸಕಾರಾತ್ಮಕವಾದ ಸರ್ವೋದಯದ ಕಲ್ಪನೆ. ಸರ್ವೋದಯದ ಸಮಾಜದಲ್ಲಿ ಆರ್ಥಿಕ ಅಡಿಪಾಯವು ಸಂಪತ್ತಿನ ಕ್ರೋಢೀಕರಣ ಹಾಗೂ ವಿಪರೀತವಾದ ಆದಾಯದ ಅಂತರಗಳನ್ನು ಪ್ರಚೋದಿಸುವಂತಿರುವುದಿಲ್ಲ. ಉತ್ಪಾದನೆಯು ಮುಖ್ಯವಾಗಿ ಮಾನವ ಶ್ರಮದ ಆಧಾರದಲ್ಲಿ ಜರುಗುವ ಗುಡಿ ಕೈಗಾರಿಕೆಗಳದ್ದಾಗಿರುತ್ತದೆ. ಬೃಹತ್ ಪ್ರಮಾಣದ ಔದ್ಯಮೀಕರಣಕ್ಕೆ ಅದರಲ್ಲಿ ಅವಕಾಶವಿಲ್ಲ ಎಂದು ತೋರುತ್ತದೆ. ಸರ್ವೋದಯ ಸಮಾಜದ ಒಂದು ಕಲ್ಪನಾಚಿತ್ರ ನನ್ನ ಗಮನಕ್ಕೆ ಬಂದಿಲ್ಲ. ಗಾಂಧೀಜಿಯವರು ಅಂತಹ ಒಂದು ಸಮಗ್ರ ಚಿತ್ರವನ್ನು ನೀಡಿಲ್ಲ ಎಂದು ನನ್ನ ನಂಬಿಕೆ.

### ಹಾಗಾದರೆ ಹಿಂಸೆಗೆ ಸ್ಥಾನವೇ ಇಲ್ಲವೇ?

ಗಾಂಧೀಜಿಯವರ ತತ್ವಗಳಲ್ಲಿ ಹಿಂಸೆಗೆ ಸ್ಥಾನವೇ ಇಲ್ಲವೇ ಎಂಬುದು ಬಹಳ ಪ್ರಮುಖ ಪ್ರಶ್ನೆ. ೧೯೦೫ರಲ್ಲಿ ರಷ್ಯಾ–ಜಪಾನ್ ಯುದ್ಧ ಜರುಗಿದಾಗ ಎಲ್ಲ ಏಷ್ಯನ್ನರಂತೆ ಗಾಂಧೀಜಿಯವರೂ ಜಪಾನಿನ ಜಯವನ್ನು ಕಂಡು ಸಂತೋಷಪಟ್ಟಿದ್ದಾರೆ. ಅನಂತರದ ದಿನಗಳಲ್ಲಿಯೂ ಅವರು ಮೇಲಿಂದ ಮೇಲೆ ''ಅಹಿಂಸೆಯೆಂದರೆ ಹೇಡಿತನವಲ್ಲ'' ಎಂದು ಒತ್ತಿ ಒತ್ತಿ ಹೇಳಿದ್ದಾರೆ, ''ಅಹಿಂಸೆ ಎಂದರೆ ಬಲದ ಮುಂದೆ ಶರಣಾಗುವುದು ಎಂದು ಅರ್ಥವಲ್ಲ'' ಎಂದು ಸ್ಪಷ್ಟಪಡಿಸಿದ್ದಾರೆ.

ಈ ನಿಲುವನ್ನು ಹೀಗೆ ವಿವರಿಸಬಹುದು: ಆತ್ಮಬಲವನ್ನು ಬೆಳೆಸಿಕೊಂಡು ಅನ್ಯಾಯವನ್ನೂ ಆಕ್ರಮಣವನ್ನು ಎದುರಿಸಬೇಕು. ಅದು ಸಾಧ್ಯವಾಗದೆ ಹೋದಾಗ ? ಹೆದರಿ ಶರಣಾಗುವುದಕ್ಕಿಂತ ಶಸ್ತ್ರಧಾರಿಗಳಾಗಿ ನಮ್ಮನ್ನು ಕಾಪಾಡಿಕೊಳ್ಳುವುದು ಮೇಲು ಎಂಬ ಅಭಿಪ್ರಾಯವೂ ಅವರಿಂದ ವ್ಯಕ್ತಗೊಂಡಿದೆ. ೧೯೪೨ರ ಚಳುವಳಿಯ ಆರಂಭ ಹಂತದಲ್ಲಿಯೇ ಅವರು ಸ್ವಾತಂತ್ರ್ಯ ಹೋರಾಟಗಾರರು ಅದುವರೆಗೆ ನಿರೂಪಣೆಗೊಂಡಿದ್ದ ಸಾಮಾನ್ಯ ತತ್ವಗಳ ಆಧಾರದ ಮೇಲೆ ಚಳುವಳಿ ನಡೆಸಿರಿ ಎಂಬ ಕರೆ ನೀಡಿದುದು ಸಹ ಅಹಿಂಸೆಯನ್ನು ಕುರಿತು ಸ್ವಲ್ಪ ಸಡಿಲಗೊಂಡಿರುವ ಅಭಿಪ್ರಾಯ ಎಂಬುದಾಗಿ ಪರಿಗಣಿತವಾಗಿದೆ. ಕರ್ನಾಟಕದ ಕರನಿರಾಕರಣ ಚಳುವಳಿಯ ಸಂದರ್ಭದಲ್ಲಿ ಮಹಿಳಾ ಸತ್ಯಾಗ್ರಹಿಗಳಿಗೆ ವಿಶಿಷ್ಟ ಸನ್ನಿವೇಶಗಳಲ್ಲಿ ತಮ್ಮ ಶೀಲವನ್ನು ಕಾಪಾಡಿಕೊಳ್ಳಬೇಕಾಗಿ ಬರುವ ಸಂದರ್ಭದಲ್ಲಿ ಬಳಸುವುದಕ್ಕಾಗಿ ಒಂದು ಚೂರಿಯನ್ನಿಟ್ಟುಕೊಳ್ಳಲು ಅನುಮತಿ ಇತ್ತು.

### ಅಹಿಂಸೆ – ಪರಿಮಿತಿಗಳು

ಗಾಂಧೀಜಿಯವರ ಸತ್ಯಾಗ್ರಹವು ಬ್ರಿಟಿಷ್ ಸರ್ಕಾರ ದಂತಹವು ರೂಪಿಸಿ ಸ್ವಲ್ಪಮಟ್ಟಿಗೆ ಕಾರ್ಯಗತಗೊಳಿಸುವ ಕಾನೂನು ಕಾಯಿದೆಗಳ ಚೌಕಟ್ಟಿನಲ್ಲಿ ಮಾತ್ರ ಕೆಲಸ ಮಾಡುತ್ತಿದ್ದ ಆಡಳಿತಗಳ ಎದುರಿನಲ್ಲಿ ಒಂದು ಮಟ್ಟದಲ್ಲಿ ಯಶಸ್ಸು ಗಳಿಸಿತು. ಇಲ್ಲಿ ವಿವರಿಸುವ ಅಗತ್ಯವಿಲ್ಲವಾದರೂ ಎಲ್ಲ ರೀತಿಯ ಆಡಳಿತಗಳಲ್ಲೂ ಅದರ ಪ್ರಥಮ ಪ್ರಯೋಗವು ಸಹ ಕಾರ್ಯಗತವಾಗುತ್ತಿರಲಿಲ್ಲ ಎಂಬುದು ಸ್ಪಷ್ಟ.

ಸರ್ವೋದಯ ಸಮಾಜದ ಕಲ್ಪನೆಯು ಎಲ್ಲ ಆದರ್ಶ ಸಮಾಜಗಳ ಕಲ್ಪನೆಗಳಂತೆಯೇ ಮಾತು, ಬರವಣಿಗೆಗಳ ಹಂತದಲ್ಲಿ ತರ್ಕಬದ್ಧವಾಗಿ ಕಾಣಿಸುತ್ತದೆ. ಆದರೆ ಅಂತಹ ಎಲ್ಲ ಕಲ್ಪನೆಗಳ ಹಾಗೆಯೇ ಇದು ಸಹ ಮನುಷ್ಯನ ಮೂಲ ಸ್ವಭಾವಗಳನ್ನು ಒಂದು ಮುಖ್ಯ ವಿಷಯವಾಗಿ ಪರಿಗಣಿಸದೇ ಇರುವುದು ಅದರ ಮುಖ್ಯ ಕೊರತೆ. ಕಾರ್ಯಗತವಾಗುವಾಗ ಸಂಪೂರ್ಣ ಸ್ವಾತಂತ್ರ್ಯಗಳನ್ನು ಪ್ರತಿಪಾದಿಸುವ ಕಲ್ಪನೆ ಕೂಡ ಅತ್ಯಂತ ನೀಚ ದಬ್ಬಾಳಿಕೆಯನ್ನು, ಅಂತೆಯೇ ಸಮಾನತೆಯನ್ನು ಪ್ರತಿಪಾದಿಸುವ ಕಲ್ಪನೆಯು ಗರಿಷ್ಠ ಮಟ್ಟದ ಮೇಲು ಕೀಳುಗಳನ್ನು ಹುಟ್ಟಿಸಲು ಸಾಧ್ಯ. ಇದಕ್ಕೆ ಕಾರಣ ಆ ಕಲ್ಪನೆಗಳಲ್ಲಿರುವ ಕೊರತೆಗಳಲ್ಲ. ಮಾನವ ಸ್ವಭಾವವನ್ನು ಕುರಿತು ಗಾಢವಾಗಿ ಪರಿಶೀಲನೆ ಮಾಡಿರುವ ಇಸೈಯ ಬರ್ಲಿನ್ ಅವರ ಕೃತಿಯ ಶೀರ್ಷಿಕೆಯೇ ಸೂಚಿಸುವ ಹಾಗೆ ಅದು ''ದಿ ಕ್ರುಕೆಡ್ ಟಿಂಬರ್ ಆಫ್ ಹ್ಯೂಮಾನಿಟಿ''; ಅಂದರೆ ಮಾನವ ಸ್ವಭಾವವೆಂಬುದು ಒಂದು ಗಂಟು ಮರ.

ಎಸ್. ಪಿ. ಶಂಕರನಾರಾಯಣರಾವ್
೮೮೭, ೧೯ನೇ ಮೈನ್, ಬನಶಂಕರಿ ೨ನೇ ಹಂತ,
ಬೆಂಗಳೂರು-೫೬೦ ೦೭೦

# ಮಹಾತ್ಮ ಗಾಂಧಿಯವರ ಹಸಿರು ಕಾಳಜಿ

''ಈ ಜಗತ್ತು, ಭೂಮಿ-ಜಲ-ವಾಯು-ಅಗ್ನಿ ಮತ್ತು ಆಕಾಶಗಳೆಂಬ ಪಂಚಭೂತಗಳಿಂದ ನಿರ್ಮಾಣವಾಗಿರುವುದಷ್ಟೆ. ನಮ್ಮ ಶರೀರದ ನಿರ್ಮಾಣವಾದರೂ ಹಾಗೆಯೇ ಆಗಿದ್ದು ಅದು ಒಂದು ಸಣ್ಣ ಜಗತ್ತೇ ಆಗಿರುವುದು. ಆದ್ದರಿಂದ ನಮ್ಮ ಶರೀರಕ್ಕೆ ಮೇಲೆ ವಿವರಿಸಿದ ಪಂಚಭೂತಾತ್ಮಕ ಪದಾರ್ಥಗಳು ಯೋಗ್ಯ ಪ್ರಮಾಣದಲ್ಲಿ ಅವಶ್ಯವಾಗಿರುವುವು. ಅವು ಯಾವುವೆಂದರೆ, ಶುದ್ಧ ಭೂಮಿ-ಶುದ್ಧ ನೀರು-ಶುದ್ಧ ಅಗ್ನಿ ಅಥವಾ ಸೂರ್ಯಪ್ರಕಾಶ, ಶುದ್ಧ ಹವೆ ಮತ್ತು ಬೈಲು ಪ್ರದೇಶ. ಇವುಗಳಲ್ಲಿ ಯಾವುದಾದರೂ ಒಂದಕ್ಕೆ ಕೊರತೆಯಾಯಿತೆಂದರೆ ಶರೀರದಲ್ಲಿ ಅಸ್ವಸ್ಥತೆಯು ಉತ್ಪನ್ನವಾಗುವುದು.''

ವಿ. ಚಂದ್ರಶೇಖರ ನಂಗಲಿ

ಪ್ರಕೃತಿ ಚಿಕಿತ್ಸೆಯಲ್ಲಿ ಗಾಢವಾದ ಶ್ರದ್ಧೆಯನ್ನು ಹೊಂದಿದ್ದ ಗಾಂಧಿಯವರ ಮೇಲಿನ ಮಾತುಗಳಲ್ಲಿ 'ಶುದ್ಧ' ಪಂಚಭೂತಗಳ ಪ್ರಸ್ತಾಪವಿದೆ. 1918ರಲ್ಲಿ ಗಾಂಧಿಯವರು ಕಂಡಿದ್ದ ಭಾರತದ ನೈಸರ್ಗಿಕ ಪರಿಸರಕ್ಕೂ ಇಂದಿನ ಭಾರತದ ನೈಸರ್ಗಿಕ ಪರಿಸರಕ್ಕೂ ತುಂಬಾ ಅಂತರವಿದೆ. ಅಭಿವೃದ್ಧಿಯ ಹೆಸರಿನಲ್ಲಿ ದಿನೇ ದಿನೇ ವೃದ್ಧಿಯಾಗುತ್ತಿರುವ ಹಸಿರುಭಂಜಕ ಕೈಗಾರಿಕೀಕರಣ, ಸತ್ವನಾಶಕ ರಾಸಾಯನಿಕಗಳ ಬಳಕೆ, ಜೀವಮಾರಕ ಅಣು ಸಂಸ್ಕೃತಿಗಳಿಂದಾಗಿ ತರಕಾರಿ, ಹಣ್ಣುಹಂಪಲು ಮತ್ತು ಆಹಾರ ಪದಾರ್ಥಗಳಿಂದ ಹಿಡಿದು ಪಂಚಭೂತಗಳವರೆಗೆ ನಮ್ಮ ಎಲ್ಲ ಜೀವಸತ್ವಗಳು, ಜೀವಮೂಲಗಳು ಕಳೆದ ಅರ್ಧ ಶತಮಾನದಿಂದ ತೀವ್ರ ಕಲುಷಿತ ಮತ್ತು 'ನಿಧಾನ ವಿಷ'ಪೂರಿತವಾಗಿ ಪರಿಣಮಿಸುತ್ತಿವೆ. ಭೂಗ್ರಹದ ಜೈವಿಕ ವಲಯಗಳು ಕ್ರಮೇಣ ಕ್ಷುಭಿತ ವಲಯಗಳಾಗಿ ಮಾರ್ಪಡುತ್ತಿರುವುದನ್ನು ಪರ್ಯಾವರಣ ಚಿಂತಕರು ಆತಂಕದಿಂದ ನಿರೂಪಿಸಿದ್ದಾರೆ. ವೈಜ್ಞಾನಿಕ ಮಾನವನ ಭೂಗ್ರಹಸ್ವಾಮ್ಯದ ದಾಹವನ್ನು ಗಮನಿಸಿದರೆ ಮನುಷ್ಯ ಪ್ರಭಾವದಿಂದ ಬಾಧಿತವಾಗದ ಜೈವಿಕ ವಲಯಗಳು ಪ್ರಸ್ತುತ ಇಲ್ಲವೆಂದೇ ಹೇಳಬೇಕಾಗಿದೆ. ಭೂಗ್ರಹವನ್ನು ಆದ್ಯಂತವಾಗಿ ಪರಿಚಯಿಸಿಕೊಂಡಿರುವ ಮಾನವನು ನೈಸರ್ಗಿಕ ನಿಯಮಗಳನ್ನು ಮೀರಿ ತನ್ನ ಅಗತ್ಯಗಳಿಗೆ ತಕ್ಕಂತೆ ಯುಗಯಾತ್ರೀ ಜೈವಿಕ ವಲಯಗಳನ್ನು ಕ್ಷಣಾರ್ಧದಲ್ಲಿ (= ಪರೀಕ್ಷಾರ್ಥ ಬಾಂಬು ಸ್ಫೋಟಗಳೂ ಸೇರಿದಂತೆ) ಪರಿವರ್ತಿಸಿಕೊಳ್ಳುತ್ತಿದ್ದಾನೆ. ಇದರ ಪರಿಣಾಮವಾಗಿ ಸಮೃದ್ಧವೂ ವೈವಿಧ್ಯಮಯವೂ ಆಗಿದ್ದ ಮಾನವನ 'ಸಹಜೀವಿ' ಸಂಕುಲಗಳು ವಿನಾಶದ ಅಂಚಿಗೆ ಬಂದಿದ್ದು ಅಸಂಖ್ಯಾತ ಸಸ್ಯ ಮತ್ತು ಪ್ರಾಣಿ ಪ್ರಭೇದಗಳು 'ಡೋಡೋ' (ಕಣ್ಮರೆಯಾದ ಒಂದು ಪಕ್ಷಿಪ್ರಭೇದ) ಹಾದಿಯಲ್ಲಿ ಸಾಗುತ್ತಿವೆ.

ವಿಜ್ಞಾನ ಮತ್ತು ತಂತ್ರಜ್ಞಾನಗಳ ಹೆಸರಿನಲ್ಲಿ ವಿಜೃಂಭಿಸುವ ಅಭಿವೃದ್ಧಿ ಯೋಜನೆಗಳು ಆತ್ಯಂತಿಕವಾಗಿ ಜೀವಂತ ಭೂಮಿಗೆ ಮಾರಕವಾಗಬಹುದಾದ ಸಾಧ್ಯತೆಯನ್ನು ಮನಗಂಡ ಗಾಂಧಿಯವರ ಹಸಿರುಕಾಳಜಿಯ ಮುನ್ನೋಟಗಳು ಮೆಲುಕು ಹಾಕುವಂತಿವೆ : **''ಭೂಮಿ ನಮ್ಮೆಲ್ಲರ ಅಗತ್ಯಗಳನ್ನು ಪೂರೈಸುವಷ್ಟು ಸಮೃದ್ಧವಾಗಿದೆ. ಆದರೆ ನಮ್ಮ ದುರಾಸೆಗಳನ್ನು ಈಡೇರಿಸುವ ಸಾಮರ್ಥ್ಯವನ್ನು ಅದು ಹೊಂದಿಲ್ಲ. ಕ್ಷಿಪ್ರಲಾಭ ಗಳಿಸಲು ಭೂಮಿಯ ಸಾರವನ್ನೇ ಹೀರುವುದು ವಿನಾಶಕಾರಿಯಾದ ಸಂಕುಚಿತ ಧೋರಣೆಯಾಗಿದೆ. ಇದರಿಂದ ಭೂಮಿಯ ಜೀವಧಾರಣ ಶಕ್ತಿಯೇ ಕುಂದಿಹೋಗುತ್ತದೆ. ನಾನೇನೂ ವೈಜ್ಞಾನಿಕ ಪ್ರಗತಿಯ ವಿರೋಧಿಯಲ್ಲ. ಪಾಶ್ಚಾತ್ಯರ ವೈಜ್ಞಾನಿಕ ಪ್ರಗತಿಗೆ ನನ್ನ ಮೆಚ್ಚಿಗೆ ಇದೆ. ಆದರೆ ಪಾಶ್ಚಾತ್ಯ ವಿಜ್ಞಾನಿ ಈ ಸೃಷ್ಟಿಯ ಕನಿಷ್ಠ ಜೀವಿಗಳನ್ನು ಗಣನೆಗೆ ತೆಗೆದುಕೊಳ್ಳದೇ ಇರುವುದರಿಂದ ನನ್ನ ಮೆಚ್ಚಿಗೆಗೆ ಮಿತಿಯಿದೆ. ಭವಿಷ್ಯದ ಮಾನದಂಡದಲ್ಲಿ ಕೇವಲ ಮನುಷ್ಯಕುಲವಷ್ಟೇ ಅಲ್ಲದೆ ಸಮಸ್ತ ಜೀವರಾಶಿಯೂ ಒಳಗೊಳ್ಳುತ್ತದೆ. ಪಾಶ್ಚಾತ್ಯ ವಿಜ್ಞಾನ ಇಂದಿನ ಜ್ಞಾನ ಸಾಧನೆಯ ವಿಧಾನಗಳಿಗೆ ಮಿತಿ ಮೇರೆಗಳನ್ನು ಹಾಕುವ ದಿನ ಉದಯವಾಗುತ್ತಿರುವುದನ್ನು ನಾನು ಸ್ಪಷ್ಟವಾಗಿ ಕಾಣುತ್ತಿದ್ದೇನೆ.''** ಪಾಶ್ಚಾತ್ಯೀಕರಣದ ವಕ್ರಮಾರ್ಗದಲ್ಲಿ ವಿವೇಚನೆಯಿಲ್ಲದೆ ಸಾಗುತ್ತಿರುವ ಇಂದಿನ ನಗರ ಭಾರತದ ರೀತಿ-ನೀತಿಗಳನ್ನು ಮನಗಂಡರೆ ಈ ಮಾತು ಪೌರ್ವಾತ್ಯ ವಿಜ್ಞಾನಿಗಳಿಗೂ ಅನ್ವಯವಾಗುವಂತಿದೆ. ಮುಂದುವರಿದು ಅವರೆನ್ನುತ್ತಾರೆ :



**''ಒಂದು ದೇಶದ ಭೌತ ಭೂಗೋಳ ಅದರ ಸಂಸ್ಕೃತಿಯ ಸ್ವರೂಪವನ್ನು ನಿರ್ಧರಿಸುತ್ತದೆ. ಇಂಗ್ಲೆಂಡ್, ಇಟಲಿ, ಜಪಾನ್‌ಗಳಂಥ ಪುಟ್ಟ ದೇಶಗಳು ಪಟ್ಟಣಗಳನ್ನು ಕಟ್ಟಿಕೊಳ್ಳಬಲ್ಲವು. ಅವರದು ನಗರ ಪ್ರಧಾನ ನಾಗರಿಕತೆ. ಆದರೆ ವಿಪುಲ ಜನಸಂಖ್ಯೆಯುಳ್ಳ ವಿಸ್ತಾರ ದೇಶವಾಗಿರುವ ಭಾರತಕ್ಕೆ ಹಳ್ಳಿಗಳೇ ಸರಿ. ಭಾರತದ ಗ್ರಾಮೀಣ ಸಂಸ್ಕೃತಿಯ ಪರಂಪರೆ ಈ ತನಕ ಅದರ ಆವಶ್ಯಕತೆಗಳನ್ನು ಪೂರೈಸಿದೆ. ಯಾವುದೇ ಅನ್ಯ ನೆಲೆಯ ಹೊಸ ಮಾದರಿಯನ್ನೂ ಅದು ನಕಲು ಮಾಡಬೇಕಾಗಿಲ್ಲ. ಹಾಗೆ ಮಾಡಲೂ ಬಾರದು.''** ಗಾಂಧಿಯವರ 'ಗ್ರಾಮಸ್ವರಾಜ್ಯ' ಪರಿಕಲ್ಪನೆಯಲ್ಲಿ ಸಂಸ್ಕೃತಿಯ ಸ್ವರೂಪಜ್ಞಾನ, ಸ್ವಾವಲಂಬನೆ, ಸಹಕಾರನೀತಿ ಮತ್ತು ಸರ್ವೋದಯ ದೃಷ್ಟಿಗಳು ಮಿಳಿತವಾಗಿವೆ. ಸ್ವಾತಂತ್ರ್ಯ ಮತ್ತು ಸ್ವರಾಜ್ಯಗಳ ದ್ವಂದ್ವಾತ್ಮಕ ಸಂಬಂಧದಲ್ಲಿ ರಾಷ್ಟ್ರೀಯ ಪುನರುಜ್ಜೀವನ ಮತ್ತು ಗ್ರಾಮೀಣ ಸಂಸ್ಕೃತಿಯ ಪುನರುಜ್ಜೀವನಗಳೆಂಬ ಏಕೋಭಾವದ ಗುರಿ ಇದ್ದಿತ್ತಾದರೂ ಅದು ಅಖಂಡ ದೃಷ್ಟಿಕೋನವಾಗಿ ಸ್ವಾತಂತ್ರ್ಯೋತ್ತರದಲ್ಲಿ ಬೆಳೆದು ಬರಲಿಲ್ಲ. ಗ್ರಾಮಸ್ವರಾಜ್ಯವು ಮೂಲೆಗುಂಪಾಯಿತು. ''ಸ್ವಾತಂತ್ರ್ಯ ಸಿಕ್ಕರೂ ಸ್ವರಾಜ್ಯ ಬರಲಿಲ್ಲ''ವೆಂಬ ಗಾಂಧಿವಾದಿಗಳ ಹಳಹಳಿಕೆ ವಾಸ್ತವವಾಗಿದೆ.

## ನಗರ ಮತ್ತು ಗ್ರಾಮ

ನಮ್ಮ ದೇಶದ ಸಾಮಾಜಿಕ ವ್ಯವಸ್ಥೆಯ ಎರಡು ಮುಖಗಳಂತೆ ಇರಬೇಕಾಗಿದ್ದ ನಗರ ಮತ್ತು ಗ್ರಾಮಗಳು ಎರಡು ವಿರುದ್ಧ ಧ್ರುವಗಳಾಗುತ್ತಾ ಅಕ್ಷರಶಃ ಅಜಗಜಾಂತರ ಆಗುತ್ತಿರುವುದು ಆತಂಕಕರವಾಗಿದೆ. ನಮ್ಮಲ್ಲಿ 'ನಗರೀಕರಣ'ವೆಂಬುದು ಹಳ್ಳಿಗಳ ಉತ್ಪಾದನಾ ಶಕ್ತಿಯನ್ನು ನಾಶಮಾಡುವ ವಿಧ್ವಂಸಕ ಯೋಜನೆಯಾಗಿ ಪರಿಣಮಿಸುತ್ತಿದೆ. ನಮ್ಮ ಹಳ್ಳಿಗಳು ಈಗಿನಷ್ಟು ದಾರಿದ್ರ್ಯ ಮತ್ತು ಸಂಕಟಗಳಿಗೆ ಹಿಂದೆಂದೂ ಗುರಿಯಾಗಿರಲಿಲ್ಲ. ಬಳಸಿ ಬಿಸಾಡುವ ಸಂಸ್ಕೃತಿಯ ನಗರಗಳು, ಉಳಿಸಿ ಬೆಳೆಸುವ ಸಂಸ್ಕೃತಿಯಿಂದ ಕೂಡಿರುವ ಗ್ರಾಮಗಳ ರಕ್ತ ಹೀರುತ್ತಿರುವ ಜಿಗಣೆಗಳಾಗಿ ಮೆರೆಯುತ್ತಿವೆ. ನಗರೀಕರಣದ ಪ್ರಕ್ರಿಯೆಯಿಂದಾಗಿ ಫಲವತ್ತಾದ ಕೃಷಿಯೋಗ್ಯವಾದ ಸುವಿಸ್ತಾರ ಭೂ ಪ್ರದೇಶಗಳೆಲ್ಲ ಡಾಂಬರು ರಸ್ತೆಗಳು, ಕಾಂಕ್ರೀಟುಹಾಸುಗಳು ಮತ್ತು ಕಟ್ಟಡ ಸಾಲುಗಳಿಂದ ಮೈದುಂಬಿಕೊಂಡು ಆ ಭೂಪ್ರದೇಶಗಳು ಮತ್ತೆಂದಿಗೂ ಕೃಷಿಗೆ ಲಭ್ಯವಾಗದಂತೆ ಶಾಶ್ವತವಾಗಿ ಕಣ್ಮರೆಯಾಗುತ್ತಿವೆ. ಫಲವತ್ತಾದ ಕೃಷಿಯೋಗ್ಯ ಭೂಪ್ರದೇಶಗಳೆಲ್ಲ ನಗರೀಕರಣದ ದಾಹಕ್ಕೆ ಬಲಿಪಶುಗಳಾಗುತ್ತಾ ಸಾಗುತ್ತಿದ್ದರೆ ಅನುಕ್ಷಣವೂ ಹೆಚ್ಚುತ್ತಿರುವ ಜನಸಂಖ್ಯಾ ಸ್ಫೋಟಕ್ಕೆ ಮುಂಬರುವ ದಿನಗಳಲ್ಲಿ ಆಹಾರವನ್ನು ಪೂರೈಸುವುದು ಹೇಗೆ ? ಯಂತ್ರನಾಗರಿಕತೆ ಮತ್ತು ಔದ್ಯೋಗೀಕರಣದಿಂದ ಬೀಗುತ್ತಿರುವ ನಗರಗಳು ಏನನ್ನೂ ಬೆಳೆಯಲಾರವು. ಹಸಿರನ್ನು ಉಳಿಸಿ ಬೆಳೆಸುತ್ತಿರುವ ಹಳ್ಳಿಗಳಿಂದ ಆಹಾರ ಪದಾರ್ಥಗಳನ್ನು ಪಡೆಯುವ ನಗರಗಳು, ಕಲುಷಿತ ಚರಂಡಿ ನೀರು ಮತ್ತು ವಿಷಪೂರಿತ ಕಸದ ರಾಶಿಯನ್ನು ಹಳ್ಳಿಗಳಿಗೆ ದೇಣಿಗೆಯಾಗಿ ನೀಡುತ್ತಿವೆ. ಇದು ಸರಿಯಲ್ಲ. ಗಾಂಧೀಜಿ ಒತ್ತಿ ಹೇಳಿದ್ದಿದು : **''ನಾನೇನೂ ಯಂತ್ರ ವಿರೋಧಿಯಲ್ಲ. ಆದರೆ ಅದು ನಮ್ಮ ಮೇಲೆ ಸವಾರಿ ಮಾಡುವುದಕ್ಕೆ ನಾನು ಪೂರಾ ವಿರೋಧಿ. ಯಂತ್ರೋದ್ಯಮದಿಂದ ಒಂದು ಹಿಡಿಯಷ್ಟು ಜನ ಲಕ್ಷಾಂತರ ಜನರ ಬೆನ್ನಿನ ಮೇಲೆ ಸವಾರಿ ಮಾಡುವಂತಾಗಿದೆ. ಇದೆಲ್ಲದರ ಹಿಂದೆ ದುಡಿತ ಕಡಿಮೆಮಾಡುವ ಔದಾರ್ಯವೇನೂ ಇಲ್ಲ. ಅದರ ಉದ್ದೇಶ ಲೋಭ. ಇದನ್ನು ನಾನು ಸಹಿಸಲಾರೆ. ನನ್ನ ಸರ್ವಶಕ್ತಿಯನ್ನು ಉಪಯೋಗಿಸಿ ನಾನು ವಿರೋಧಿಸುತ್ತಿರುವುದು ಈ ರೀತಿಯ ಉತ್ಪಾದನಾ ವಿಧಾನವನ್ನು. ಯಂತ್ರವೆಂಬುದೆಲ್ಲ ನಾಶವಾಗಲಿ ಎಂಬುದಲ್ಲ, ಅದಕ್ಕೊಂದು ಪರಿಮಿತಿ ಇರಲಿ ಎನ್ನುವುದು ನನ್ನ ಗುರಿ. ಬಟ್ಟೆ ಹೊಲಿಯುವ ಸಿಂಗರ್ ಯಂತ್ರವನ್ನು ನಾನು ಬಹಳವಾಗಿ ಮೆಚ್ಚುತ್ತೇನೆ... 'ಹಳ್ಳಿಗೆ ಮರಳಿ' ಎಂಬ ಕೂಗು ಪ್ರಗತಿ ಚಕ್ರವನ್ನು ಹಿಂತಿರುಗಿಸುತ್ತದೆ ಎನ್ನುತ್ತಾರೆ ಕೆಲವರು. ಪಟ್ಟಣಿಗರು ಹೋಗಿ ಅಲ್ಲಿ ನೆಲಸಿ ಎಂದು ನಾನು ಹೇಳುತ್ತಿಲ್ಲ. ಹಳ್ಳಿಗರಿಗೆ ನ್ಯಾಯವಾಗಿ ಸಲ್ಲಬೇಕಾದುದನ್ನು ಅವರಿಗೆ ಸಲ್ಲಿಸಿ ಎನ್ನುತ್ತಿದ್ದೇನೆ. ಗ್ರಾಮಜೀವನ ನಗರದ**

**ಬಾಲಂಗೋಚಿಯಲ್ಲ, ಗ್ರಾಮಜೀವನದ ಮೌಲ್ಯಗಳನ್ನೇ ನಗರವು ಅಂಗೀಕರಿಸಿ ಅದಕ್ಕೆ ಪೋಷಕವಾಗಿ ಬಾಳಬೇಕು.''** ನಗರೀಕರಣ, ಬೃಹತ್ ಯಂತ್ರೋದ್ಯಮ, ಸಂಪತ್ತಿನ ಕೇಂದ್ರೀಕರಣ, ಶ್ರಮಜೀವಿಗಳ ಶೋಷಣೆ, ಹಿಂಸೆ-ಇವೆಲ್ಲವೂ ಅಂತರ್ ಸಂಬಂಧಿಯಾದ ಹೆಣಿಗೆಗಳೆಂಬ ಸಂಗತಿ ಮೇಲಿನ ಮಾತುಗಳಲ್ಲಿ ಸುಸ್ಪಷ್ಟ. ಗಾಂಧಿಯವರ ಅಹಿಂಸಾ ತತ್ವದ ಗರ್ಭದಲ್ಲಿ ಅಡಗಿರುವ ಬಹುಮುಖ ದೃಷ್ಟಿಯನ್ನು ಗ್ರಹಿಸಲಾರದವರು 'ಅಹಿಂಸೆ' ಎಂದರೆ ರಕ್ತರಹಿತ ಹೋರಾಟವೆಂಬ ಸರಳ ಸೂತ್ರಕ್ಕಿಳಿಸಿ ಮಾಧ್ಯಮಗಳ ಮೂಲಕ ಅಪಪ್ರಚಾರ ಮಾಡುತ್ತಿದ್ದಾರೆ.

ಗಾಂಧಿಯವರ ಚಿಂತನೆಗಳಲ್ಲಿ ಉತ್ಪಾದನೆಯ ಸ್ವರೂಪ ಮತ್ತು ಹಸಿರುಕಾಳಜಿಗಳು ಅಖಂಡವಾಗಿ ಬೆರೆತುಹೋಗಿವೆ. ಹಳ್ಳಿಯನ್ನೇ ರಾಷ್ಟ್ರೀಯ ಉತ್ಪಾದನೆಯ ಕೇಂದ್ರಬಿಂದುವನ್ನಾಗಿ ಮತ್ತು ಸ್ವಯಂಪೂರ್ಣ ಘಟಕವನ್ನಾಗಿ ನೋಡುವ ಗಾಂಧಿಯವರು ನಮ್ಮ ದೇಶದ ಗ್ರಾಮೀಣ ಸಂಸ್ಕೃತಿಗೆ ಪೋಷಕವಾಗುವ ಉತ್ಪಾದನಾ ವಿಧಾನಗಳನ್ನು ಅಳವಡಿಸಿಕೊಳ್ಳಲು ಕರೆ ಕೊಟ್ಟಿದ್ದಾರೆ. ಗಾಂಧಿಯವರ ಪ್ರಕಾರ ಉತ್ಪಾದನೆ ಮತ್ತು ವಿತರಣೆಗಳ ನಡುವೆ ಕಾಲ-ದೇಶಗಳ ಅಂತರ ಇರಬಾರದು. ಒಮ್ಮೆ ಅಂತರವು ಸೃಷ್ಟಿಯಾಯಿತೆಂದರೆ ಸ್ವದೇಶಿ ಮತ್ತು ವಿದೇಶಿ ಬಂಡವಳಿಗರ, ಮಧ್ಯವರ್ತಿಗಳ, ವ್ಯವಸ್ಥಿತ ವಂಚಕ ಜಾಲವೇ ಹರಡಿಕೊಳ್ಳುತ್ತದೆ. ಆದ್ದರಿಂದ, ನಮ್ಮ ಹಳ್ಳಿಯ ಸಂತೆಗಳಲ್ಲಿ ಕಂಡುಬರುವಂತೆ ಸ್ಥಾನಿಕ ಉತ್ಪಾದನೆ ಮತ್ತು ಸ್ಥಾನಿಕ ವಿತರಣೆಗಳೇ ಆದರ್ಶವಾಗಬೇಕು. ನಮ್ಮ ದೇಶದ ನೈಸರ್ಗಿಕ ಸಂಪನ್ಮೂಲಗಳಿಂದ ಲಭಿಸುವ ಕಚ್ಚಾವಸ್ತುಗಳನ್ನು ವಿದೇಶಗಳಿಗೆ ರಫ್ತುಮಾಡಿ, ಅಲ್ಲಿಂದ ದುಬಾರಿ ಬೆಲೆಗೆ ಸಿದ್ಧವಸ್ತುಗಳನ್ನು ತರಿಸಿಕೊಳ್ಳುವ ಪರಾವಲಂಬನೆಗೆ ವಿದಾಯ ಹೇಳಬೇಕು. ಯಂತ್ರೋದ್ಯಮ, ಉತ್ಪಾದನೆ, ಶಕ್ತಿಯೋಜನೆ, ಅರಣ್ಯ ನಾಶ, ಪರಿಸರಮಾಲಿನ್ಯ, ಹಳ್ಳಿಗಳ ಸರ್ವನಾಶ, ಜಾಗತಿಕ ಮಾರುಕಟ್ಟೆ - ಇವೆಲ್ಲ ಇಂದು ಬೃಹತ್ ಪ್ರಮಾಣದವೇ ಆಗಿವೆ. ಅವು ನಗರೀಕರಣವೆಂಬ ಸರಪಳಿಯ ಕೊಂಡಿಗಳೆಂಬುದನ್ನು ಗಾಂಧಿ ಚೆನ್ನಾಗಿ ಮನಗಂಡಿದ್ದರು.

### ಜಲಮಾಲಿನ್ಯ

ಗಾಂಧಿಯವರು 1918ರಲ್ಲೇ 'ಜಲಮಾಲಿನ್ಯ'ದ ಬಗ್ಗೆ ಜನತೆಯನ್ನು ಎಚ್ಚರಿಸಿದ್ದಾರೆ : **''ಸಾರ್ವಜನಿಕ ಉಪಯೋಗದ ನೀರನ್ನಾದರೂ ಎಲ್ಲರೂ ತಮ್ಮ ಸೊತ್ತಿನಂತೆ ಕಾಯ್ದು, ಅದು**

> ನೈತಿಕತೆಯಿಂದ ದೂರವಾದ ಯಾವುದೇ ಪರಂಪರೆ ಇದ್ದರೂ ಅದನ್ನು ಹೊಡೆದೋಡಿಸುವುದು ಅಗತ್ಯವಾಗುತ್ತದೆ.
>
> ಹೇಡಿತನ ಮತ್ತು ಹಿಂಸೆ ಎಂಬಿವೆರಡರಿಂದಲೇ ಆರಿಸಿಕೊಳ್ಳಬೇಕಾದಲ್ಲಿ ಹಿಂಸೆಯೇ ಮೇಲೆಂಬುದು ನನ್ನ ನಂಬಿಕೆ.
>
> ಹಿಂಸೆಯ ತಳಹದಿಯ ಮೇಲೆ ಬಹುಕಾಲ ಬಾಳುವಂತಹುದೇನನ್ನೂ ಕಟ್ಟಲಾಗುವುದಿಲ್ಲ ಎಂಬುದು ನನ್ನ ವಿಶ್ವಾಸ.
>
> ಸತ್ಯಶೋಧನೆಯಲ್ಲಿ ತೊಡಗುವವನು ಧೂಳಿಗಿಂತಲೂ ಹೆಚ್ಚು ನಮ್ರತೆ ಉಳ್ಳವನಾಗಿರಬೇಕು.
>
> *- ಗಾಂಧೀಜಿ*



**ಕೆಡದಂತೆ ಕಾಪಾಡತಕ್ಕದ್ದು. ಕುಡಿಯುವ ನೀರಿನ ಸಂಚಯಗಳಲ್ಲಿ ಒಗೆಯುವುದೂ, ಸ್ನಾನ ಮಾಡುವುದೂ ಹೊಳೆಯ ದಂಡೆಯ ಮೇಲೆ ಮಲ ಮೂತ್ರ ವಿಸರ್ಜನೆಮಾಡುವುದೂ, ಹೆಣಗಳನ್ನು ದಹನ ಮಾಡಿ ಬೂದಿಯನ್ನು ಹೊಳೆಯಲ್ಲಿ ಒಗೆಯು ವುದೂ ಇವೇ ಮೊದಲಾದ ಅನೇಕ ಅನಾಚಾರಗಳಿಂದ ನೀರು ಕೆಟ್ಟು ಅಪರಿಮಿತ ಹಾನಿಯಾಗುವುದು.''** ಈ ಮಾತುಗಳು ಮತ್ತಷ್ಟು ಪರಿಪಕ್ವತೆ ಮತ್ತು ಪ್ರತ್ಯಕ್ಷಾನುಭವಗಳಿಂದ ಹರಳುಗಟ್ಟಿರುವುದು ಗಾಂಧಿಯವರ ನಿಷ್ಠುರ ವಿಮರ್ಶಕ ಮತ್ತು ಮಾನಸಪುತ್ರರೆಂದು ಖ್ಯಾತರಾದ ಲೋಹಿಯಾ ಚಿಂತನೆಯಲ್ಲಿ.

'ಇಂಡಿಯಾದ ನದಿಗಳು' ಎಂಬ ಅವರ ಪ್ರಬಂಧದಲ್ಲಿ ಈ ಮಾತುಗಳಿವೆ : **''ನಮ್ಮ ದೇಶದ (ಜನತೆಯ) ಮನಸ್ಸು, ಹೃದಯಗಳು ನದಿಗಳ ಸಂಗಡ ಬೆಸೆದು ಹೋಗಿದ್ದಾವೆ. ಆದರೆ ನದಿಗಳೋ ನಗರಗಳಿಂದ ಹರಿದು ಬರುವ ಕೊಳಚೆನೀರು ಮತ್ತು ವಿಸರ್ಜನೆಗಳು ಬಿದ್ದು ಕಲುಷಿತವಾಗಿಬಿಟ್ಟಿರುತ್ತವೆ. ಕೊಳಚೆ ನೀರಿನಲ್ಲಿ ಹೆಚ್ಚು ಭಾಗ ಕಾರ್ಖಾನೆಗಳಿಂದ ಬರುತ್ತದೆ. ಹೀಗೆ ನದೀ ನೀರನ್ನು ಕಲುಷಿತ ಮಾಡುವುದರ ವಿರುದ್ಧ ನಾವು ಒಂದು ಚಳುವಳಿಯನ್ನೇ ಪ್ರಾರಂಭಿಸಬೇಕೆ ? ಕೊಳಚೆ ನೀರನ್ನು ಗಂಗಾಕ್ಕೋ ಕಾವೇರಿಗೋ ನಾಲೆ ತೆಗೆದು ಬಿಡುವುದಕ್ಕೆ ಬದಲಾಗಿ ಕಾಲುವೆಗಳ ಮೂಲಕ ಹತ್ತು ಇಪ್ಪತ್ತು ಮೈಲಿ ದೂರ ಸಾಗಿಸಿ ಅಲ್ಲಿ ಹೊಲಗಳಿಗೆ ಬಿಡಬೇಕು. ಅಲ್ಲಿ ಗೊಬ್ಬರದ ಕಾರ್ಖಾನೆಗಳನ್ನೂ ನಿರ್ಮಿಸಬಹುದು.''** ಗಾಂಧಿಯವರು ಹೇಳುವಂತೆ ನಗರಗಳು ನಿರ್ವಹಿಸಬೇಕಾದ ಗ್ರಾಮಜೀವನ ಪೋಷಕ ಪಾತ್ರವನ್ನು ಇಲ್ಲಿ ಗುರುತಿಸಬಹುದು.

### ಕಾಲ್ನಡಿಗೆಗೆ ಪ್ರಾಮುಖ್ಯತೆ

ನಗರಗಳಲ್ಲಿ ಹುಟ್ಟಿ ಬೆಳೆದು ವಿದ್ಯಾರ್ಜನೆಯ ಲಾಭ ಪಡೆದವರು ಕೂಡ, ನಗರೀಕರಣದ ದುಷ್ಪರಿಣಾಮಗಳಿಂದ ಪಾರಾಗಲು ತಮ್ಮ ದೇಹ ಮತ್ತು ಮನಸ್ಸುಗಳನ್ನು ಪುನರ್ ನವೀಕರಿಸಲು ಕಾಡು-ಮೇಡು, ಬೆಟ್ಟ-ಗುಡ್ಡ, ಗವಿ-ಗಹ್ವರ, ನದಿ-ಜಲಪಾತ ಪ್ರದೇಶಗಳಲ್ಲಿ ಕಾಲ್ನಡಿಗೆಯಿಂದ ಅಲೆದಾಡುವ 'ಚಾರಣ' ಮಾರ್ಗವನ್ನು ಕಂಡುಕೊಂಡಿದ್ದಾರೆ. ಈ ದಿಕ್ಕಿನಲ್ಲೂ ಗಾಂಧಿಯವರ ಚಿಂತನೆ ಹರಿದಾಡಿದೆ. ಸತ್ಯಾಗ್ರಹದ ಸಮರಕ್ಕೆ ಕಾಲ್ನಡಿಗೆಯನ್ನು ಒಂದು ಅಸ್ತ್ರವನ್ನಾಗಿ ಬಳಸಿದ ಗಾಂಧಿಯವರ ಮಾತುಗಳಿವು :

**''ಭೂಮಿಯನ್ನು ಸಾಗುವಳಿ ಮಾಡುವ ಉತ್ಕೃಷ್ಟವಾದ ಕೆಲಸದ ತರುವಾಯ ಅಡ್ಡಾಡಲಿಕ್ಕೆ ಹೋಗುವುದು ಸರ್ವೋತ್ತಮವಾದ ವ್ಯಾಯಾಮವಾಗಿದೆ. ಇದು ಎಲ್ಲ ವ್ಯಾಯಾಮಗಳ ಅರಸನಂತಿರುವುದು. ಥೋರೋ ನಾಮಕ ಪ್ರಸಿದ್ಧ ಅಮೇರಿಕನ್ನನು ಅಡ್ಡಾಡುವುದರಿಂದಾಗುವ ವ್ಯಾಯಾಮದ ವಿಷಯಕ್ಕೆ ಬಹುಯೋಗ್ಯ ವಿಚಾರ ಸರಣಿಗಳಿಂದ ಯುಕ್ತವಾದ ಒಂದು ಗ್ರಂಥವನ್ನು ಬರೆದಿರುವನು. ಸಮಯವು ಸಿಗುವುದಿಲ್ಲವೆಂಬ ನೆವದಿಂದ ಹೊರಗೆ ಹೋಗಿ ಚೆನ್ನಾಗಿ ಅಡ್ಡಾಡದೆ, ಯಾವಾಗಲೂ ಕುಳಿತಲ್ಲಿಯೇ ಕುಳಿತು ಓದು-ಬರೆಯುವ ಲೇಖಕನ ಲೇಖನಗಳು ಆತನ ಶರೀರದಷ್ಟೆ ನಿಸ್ಸಾರವಾಗಿರುವುದೆಂದು ಆತನು ವರ್ಣಿಸಿರುವನು.**

**''ಸಾಕಷ್ಟು ಶಾರೀರಿಕ ವ್ಯಾಯಾಮವಿಲ್ಲದೆ ಮಾಡಿದ ಮಾನಸಿಕ ಕೆಲಸಗಳು ನೀರಸವಾಗಿಯೂ ನಿಸ್ಸತ್ವವಾಗಿಯೂ ಆಗುವವೆಂಬುದು ನಮಗೆ ಗೊತ್ತಾಗುವುದಿಲ್ಲ. ನಾವು ಒತ್ತರದಿಂದ ನಡೆಯುವಾಗ ಹೊರಗಿನ ಶುದ್ಧ ಹವೆಯು ಶ್ವಾಸಕೋಶಗಳಲ್ಲಿ ಬಹಳವಾಗಿ ಸೇರಿಕೊಳ್ಳುವುದು. ಹಾಗೆಂದು ಊರಲ್ಲಿ ಓಣಿಯೊಳಗೆ ತಿರುಗಾಡುವುದೂ ಅಥವಾ ದಿನಾಲು ಒಂದೇ ಕಡೆಗೆ ಅಡ್ಡಾಡಲಿಕ್ಕೆ ಹೋಗುವುದೂ ತಕ್ಕದ್ದಲ್ಲ. ಇದರ ಬದಲಾಗಿ ಅಡವಿಗಳಲ್ಲಿಯೂ ಹೊಲಗಳಲ್ಲಿಯೂ ಅಡ್ಡಾಡಲಿಕ್ಕೆ ಹೊರಟರೆ ಸೃಷ್ಟಿ ನಿರ್ಮಾಣದ ವೈಚಿತ್ರ್ಯವು ಗೋಚರವಾಗಿ ನಮಗೆ ಆನಂದವಾಗುವುದು.''**

ಭೂಮಿಯನ್ನು ಪುನರ್ ನವೀಕರಣಗೊಳಿಸಬಲ್ಲ ಚಲನಶೀಲವಾದ ಗ್ರಾಮೀಣ ಸಂಸ್ಕೃತಿಯಲ್ಲಿ ಕೃಷಿ ಮತ್ತು ಸಂಬಂಧಿತ ಉಪಕಸುಬುಗಳು ಪುನರುಜ್ಜೀವನಗೊಳ್ಳಬೇಕೆಂದು ಹೇಳುತ್ತಿದ್ದ ಗಾಂಧಿಯವರು ಸಹಜವಾಗಿಯೇ ಜಲಕೇಂದ್ರಿತ ಹಸಿರು ಕಾಳಜಿಯನ್ನು ಎತ್ತಿಹಿಡಿದಿದ್ದಾರೆ. ಇದಕ್ಕೆ ವ್ಯತಿರಿಕ್ತವಾಗಿ ಅಗ್ನಿಕೇಂದ್ರಿತವಾದ ಅಣುಶಕ್ತಿ ಮತ್ತು ಅಣುಸ್ಥಾವರ ನಿರ್ಮಾಣದ ಭ್ರಾಂತಿಯಲ್ಲಿರುವ ನಗರ ಭಾರತದ ವಿಜೃಂಭಣೆಯನ್ನು ಗಾಂಧಿ ಸ್ಪಷ್ಟವಾಗಿ ಖಂಡಿಸಿದ್ದಾರೆ. ಲಕ್ಷಾಂತರ ವರ್ಷಗಳವರೆಗೆ ಜೀವಕೋಶಗಳ ಮೇಲೆ ಧಾಳಿಯಿಟ್ಟು ಡಿ.ಎನ್.ಎ. ಜಾಲವನ್ನು ನುಗ್ಗುನುರಿ ಮಾಡುವ ಅಣುಸಂಸ್ಕೃತಿಯ ಅಪಾಯಗಳೇನೆಂಬುದನ್ನು ಮನಗಂಡಿದ್ದ ಗಾಂಧಿ ಅಣ್ವಸ್ತ್ರಮುಕ್ತ ವಿಶ್ವದ ಅನಿವಾರ್ಯತೆಯನ್ನು ಬಹು ಹಿಂದೆಯೇ ಪ್ರತಿಪಾದಿಸಿದ್ದಾರೆ : **''ಈ ಯುಗದಲ್ಲಿ ಏಷ್ಯಾದ ಮಹಾಜ್ಞಾನಿಗಳ ಶಾಂತಿ ಸಂದೇಶ ಪ್ರತಿಧ್ವನಿತವಾಗಬೇಕು. ಪಾಶ್ಚಾತ್ಯರು ಅಂತಹ ಹೊಸ ಬೆಳಕಿಗಾಗಿ ಹಂಬಲಿಸುತ್ತಿದ್ದಾರೆ; ಅತಿ ಸಂಖ್ಯೆಯ ಅಣ್ವಸ್ತ್ರಗಳಿಂದ ಹತಾಶ ರಾಗುತ್ತಿದ್ದಾರೆ. ಕೇವಲ ಪಾಶ್ಚಾತ್ಯ ರಾಷ್ಟ್ರಗಳಷ್ಟೇ ಅಲ್ಲದೆ ಇಡಿಯ ಜಗತ್ತೇ ಈ ಅಣ್ವಸ್ತ್ರಗಳಿಂದ ನಾಶವಾದೀತು.''**

ಗಾಂಧಿಯವರ 'ಗ್ರಾಮಸ್ವರಾಜ್ಯ'ವೆಂಬ ಚಿಂತನೆಯ ಶರೀರಕ್ಕೆ ಹಸಿರು ಕಾಳಜಿಯು ಆತ್ಮದಂತೆ ನಿಲ್ಲುವುದನ್ನು [illegible] ವಿಶದೀಕರಿಸಲಾಗಿದೆ. ಗಾಂಧಿ ಬರಹಗಳ ಪುನರ್ ಮನನ ಮಾಡಿಕೊಳ್ಳುತ್ತಾ ಹೊಸದೃಷ್ಟಿಯಿಂದ ಹಳೆಯ ವಸ್ತುವಿಚಾರಗಳನ್ನು ವಿಮರ್ಶೆ ಮಾಡಿಕೊಳ್ಳುವ ಅಗತ್ಯ ಇಷ್ಟಾಗಿದೆ

# ಗಾಂಧಿವಾದ : ಆದರ್ಶ ಮತ್ತು ಸೋಗಲಾಡಿತನ

ಜಿ. ರಾಜಶೇಖರ

ಒಂದು ರಾಜಕೀಯ ಆದರ್ಶಕ್ಕೂ ಅದು ಹುಟ್ಟಿಸುವ ಸೋಗಲಾಡಿತನಕ್ಕೂ ಯಾವ ಸಂಬಂಧವೂ ಇಲ್ಲವೆ ? ಆದರ್ಶ ದೊಡ್ಡದಾದಷ್ಟೂ ಮತ್ತು ವಾಸ್ತವಿಕತೆಯಿಂದ ದೂರವಾದಷ್ಟೂ, ಅದು ಅನುಷ್ಠಾನಗೊಳ್ಳುವ ಸಾಧ್ಯತೆಯೂ ಅಷ್ಟೇ ಕಡಿಮೆಯಾಗುತ್ತದೆ. ಸೋಗಲಾಡಿತನದ ಮೂಲವನ್ನು ಆದರ್ಶ ಮತ್ತು ವಾಸ್ತವಗಳ ಈ ಅಂತರದಲ್ಲಿಯೇ ಹುಡುಕಬೇಕು. ಈ ನಿಟ್ಟಿನಲ್ಲಿ ಗಾಂಧೀಜಿಯವರ ಕಿರಿದಾದರೂ ಒಂದು ಮಹತ್ವದ ಕೃತಿಯಾದ 'ಹಿಂದ್ ಸ್ವರಾಜ್'ನ್ನು ವಿಶ್ಲೇಷಿಸುವುದು ನಮಗೆ ಸಹಾಯಮಾಡಬಹುದು. *Hind Swaraj or Indian Home Rule* ಗಾಂಧೀಜಿ ೧೯೦೯ರಲ್ಲಿ ಪ್ರಕಟಿಸಿದ ಒಂದು ಕಿರು ಪುಸ್ತಕ. ಅದರ ಗದ್ಯ, ಕೆಲವು ಧಾರ್ಮಿಕ ಪ್ರವಚನದ ಪುಸ್ತಕಗಳಲ್ಲಿ ಇರುವ ಹಾಗೆ ಪ್ರಶ್ನೋತ್ತರ ರೂಪದಲ್ಲಿದೆ. ಈ ಬಗೆಯ ಶೈಲಿಯ ಒಂದು ಅನುಕೂಲವೆಂದರೆ ನಿಮ್ಮ ಉತ್ತರಗಳಿಗೆ ಅನುಕೂಲವಾಗುವ ಹಾಗೆ ನೀವೇ ಪ್ರಶ್ನೆಗಳನ್ನು ರೂಪಿಸಿಕೊಳ್ಳಬಹುದು. ಕುಸ್ತಿಯಲ್ಲಿ ಎದುರಾಳಿಯ ಪಟ್ಟುಗಳನ್ನು ನೀವೇ ನಿರ್ಧರಿಸಿದರೆ ಹೇಗೆ ಇರುತ್ತದೆ ? ಪ್ರಶ್ನೆ ಕೇಳುವವನು ಮತ್ತು ಪ್ರಶ್ನೆಗೆ ಉತ್ತರಿಸುವವನು ಇಬ್ಬರೂ ಒಂದೇ ತರ್ಕವನ್ನು ನೆಚ್ಚಿಕೊಂಡಾಗ ಅಲ್ಲಿ ನಿಜವಾದ ಸಂವಾದ ಇರುವುದಿಲ್ಲ. ಈ ಕಾರಣಕ್ಕೇನೆ ಧರ್ಮಬೋಧೆಯ ಪುಸ್ತಕಗಳಲ್ಲಿ ಸಂವಾದವಿರುವುದಿಲ್ಲ. ಅಲ್ಲಿ ಇರುವುದು ಪ್ರಶ್ನೋತ್ತರ ರೂಪದ ಉಪದೇಶ. 'ಹಿಂದ್ ಸ್ವರಾಜ್'ನ ಗದ್ಯಕ್ಕೆ ಕೂಡ ಈ ಗುಣವಿದೆ. ಅದು ಕಣ್ಣು ಪಟ್ಟಿ ಕಟ್ಟಿಕೊಂಡ ಕುದುರೆಯ ಓಟವನ್ನು ನೆನಪಿಸುತ್ತದೆ. ಹಿಂದ್ ಸ್ವರಾಜ್, ಈಗ ನಮ್ಮ ನವ್ಯೋತ್ತರ ಕಾಲಕ್ಕೆ ಆಸರೆಯಾಗಿ ನಿಲ್ಲಬಲ್ಲ, ಅಂದರೆ ಪೋಸ್ಟ್ ಮಾಡರ್ನಿಸ್ಟ್ ಆಶಯಗಳುಳ್ಳ ಒಂದು ಕೃತಿ ಎಂದು ನಮ್ಮ ಕೆಲವು ಬುದ್ಧಿಜೀವಿಗಳು ಕೊಂಡಾಡುತ್ತಿದ್ದಾರೆ. ಆಧುನಿಕತೆಯ ಕನಸುಗಳೆಲ್ಲ ಮುಕ್ಕುಗೊಂಡು, ಸಮಾಜವಾದ ಸೋತು, ಯುದ್ಧ, ಪರಿಸರ ನಾಶ, ಸಂಸ್ಕೃತಿಗಳ ನಾಶ ಮುಂತಾದವುಗಳೇ ನಮ್ಮ ವಸ್ತುಸ್ಥಿತಿಯಾಗಿರುವ ಈ

## 'ಹಿಂದ್ ಸ್ವರಾಜ್'ನ ಒಂದು ವಿಶ್ಲೇಷಣೆ

ನವ್ಯೋತ್ತರ ಸಮಾಜದ ಸವಾಲುಗಳಿಗೆ, ೧೯೦೯ರಲ್ಲಿ ಪ್ರಕಟವಾದ ಈ ಕಿರುಹೊತ್ತಗೆಯಲ್ಲಿ ಪರಿಹಾರಗಳಿವೆ ಎಂದು ಅವರು ವಾದಿಸುತ್ತಿದ್ದಾರೆ.

ಆಧುನಿಕತೆ ಮತ್ತು ಸಮಾಜವಾದ ಈಗ ಮುಗಿದ ಕತೆ ಎನ್ನುವ ಈ ಬುದ್ಧಿಜೀವಿಗಳ ತೀರ್ಮಾನಗಳ ಹಿಂದೆ ಇರುವ ಬಲಪಂಥೀಯ ರಾಜಕೀಯ ಒತ್ತಾಸೆಗಳನ್ನು ವಿಶ್ಲೇಷಿಸುವುದು ಬೇರೆಯೇ ಒಂದು ಪ್ರಬಂಧವಾಗಬಹುದು. ಆದರೆ ಹಿಂದ್ ಸ್ವರಾಜ್ ಕೃತಿಯನ್ನಷ್ಟೇ ಗಮನದಲ್ಲಿರಿಸಿಕೊಂಡು ಹೇಳುವುದಾದರೆ, ೧೯೯೯ರ ಹಿನ್ನೋಟದಲ್ಲಿ ಅದರ ಚಿಂತನೆಯ ದೌರ್ಬಲ್ಯಗಳು ಸ್ಪಷ್ಟವಾಗಿ ಕಾಣುತ್ತವೆ. ಹಿಂದ್ ಸ್ವರಾಜ್‌ನಲ್ಲಿ ಅನೇಕ ವಿಷಯಗಳು ಪ್ರಾಸಂಗಿಕವಾಗಿ ಪ್ರಸ್ತಾಪಿತವಾಗಿವೆ. ಆದರೆ ಪ್ರಧಾನವಾಗಿ ಪಶ್ಚಿಮದ ಆಧುನಿಕ ನಾಗರೀಕತೆಯನ್ನು, ತನ್ನ ಕೃತಿಯಲ್ಲಿ ಗಾಂಧೀಜಿ ಬಲವಾಗಿ ವಿರೋಧಿಸುತ್ತಾರೆ. ಈ ನಾಗರಿಕತೆಯನ್ನು ಅವರು ಕೈಗಾರಿಕಾಕ್ರಾಂತಿ ಮತ್ತು ಅದರ ಫಲವಾಗಿ ಮೂಡಿಬಂದ ವಸ್ತುಗಳ ಉತ್ಪಾದನೆ ಹಾಗೂ ಅವುಗಳ ನಿರಂತರ ಉಪಭೋಗದ ಜೊತೆ ಸಮೀಕರಿಸುತ್ತಾರೆ. ಈ ಕೈಗಾರಿಕಾ ಕ್ರಾಂತಿಯ ಇನ್ನೊಂದು ಪರಿಣಾಮವಾದ ರೈತಾಪಿ ವರ್ಗಗಳ ನಾಶ ಮತ್ತು ಕಾರ್ಮಿಕರ ಶೋಷಣೆಗಳತ್ತ ಅವರು ಗಮನಹರಿಸುವುದಿಲ್ಲ. ನಮ್ಮ ದೇಶದ ಧರ್ಮಗಳ ಕ್ರೌರ್ಯಕ್ಕಿಂತ ಆಧುನಿಕ ನಾಗರಿಕತೆಯ ಕ್ರೌರ್ಯ ಹೆಚ್ಚು ತೀಕ್ಷ್ಣವಾದದ್ದು ಎಂದು ಗಾಂಧೀಜಿ ವಾದಿಸುತ್ತಾರೆ (ಪುಟ ೩೦-೩೧). ಧರ್ಮದ ಹೆಸರಿನಲ್ಲಿ ನಡೆದ ಕೊಲೆಗಳು ನಿಜವಾದ ಧಾರ್ಮಿಕ ಕಾರಣಗಳಿಗಾಗಿ ನಡೆದದ್ದಲ್ಲವೆಂದೂ ನಾಗರಿಕತೆಯ ಮೋಸಕ್ಕಿಂತ ಧರ್ಮದ ಆಷಾಢಭೂತಿತನ ಮೊತ್ತದಲ್ಲಿ [illegible] ಎಂದೂ ಸಹ ಅವರು ಅಭಿಪ್ರಾಯ ಪಡುತ್ತಾರೆ. ಗಾಂಧೀಜಿ **ಹಿಂದ್ ಸ್ವರಾಜ್**‌ನಲ್ಲಿ ಧರ್ಮ ಮತ್ತು ನಾಗರಿಕತೆಗಳನ್ನು ಎರಡು ಬೇರೆ ಬೇರೆ ಕಂಪಾರ್ಟ್‌ಮೆಂಟುಗಳಲ್ಲಿ ಇರಿಸುತ್ತಾರೆ. ಅವರ ಪ್ರಕಾರ ಧರ್ಮ, ಬದಲಾಗದ ಒಂದು ಶಾಶ್ವತ ಸತ್ಯ ಮತ್ತು ಅದು ಎಲ್ಲ ಜನರಿಗೂ ಒಂದೇ. ಧರ್ಮ ಕೂಡ ಆಧುನಿಕಗೊಳ್ಳುವ, ಅಂದರೆ ಆಧುನಿಕ ರಾಜಕೀಯ ಸಂಘಟನೆಗಳಿಗೆ [illegible] ಮತ್ತು ಆಧುನಿಕ [illegible] ವಾಸ್ತವದ ಬಗ್ಗೆ ಗಾಂಧೀಜಿ [illegible]. ಧರ್ಮ ಅವರ ಪ್ರಕಾರ [illegible] ಮತ್ತು ನ್ಯಾಯಯುತವಾದ ಒಂದು ಸತ್ಯ. [illegible] ಮಲಿನವಾಗುವ ಸಾಧ್ಯತೆ ಗಾಂಧೀಜಿಗೆ

ಕಂಡಿಲ್ಲ. ನಿರ್ದಿಷ್ಟ ಉದಾಹರಣೆ ಕೊಡುವುದಾದರೆ ಸಂಘ ಪರಿವಾರದ ಹಿಂದುತ್ವ ಈ ಬಗೆಯ ಧರ್ಮ ಮತ್ತು ಆಧುನಿಕತೆಗಳ ಒಂದು ಮಿಶ್ರಣ. ಯುರೋಪ್‌ನ ಫ್ಯಾಸಿಸಂ ಇದಕ್ಕೆ ಇನ್ನೊಂದು ಉದಾಹರಣೆ. ಹಿಂದ್ ಸ್ವರಾಜ್ ಪ್ರಕಟವಾಗುವ ಕಾಲಕ್ಕೆ ಈ ಎರಡೂ ಚಳುವಳಿಗಳೂ ಏರುಗತಿಯಲ್ಲಿದ್ದವು. ಫ್ಯಾಸಿಸಂನ ಸ್ವದೇಶೀ ಆವೃತ್ತಿಗೆ ಸ್ವತಃ ಗಾಂಧೀಜಿಯವರೇ ಬಲಿಯಾದರು. ಆದರೆ ಹಿಂದ್ ಸ್ವರಾಜ್‌ನಲ್ಲಿ ಧರ್ಮದ ಸಾಂಸ್ಥಿಕ ರೂಪಗಳಿಗೆ ಇರುವ ಈ ಸಾಧ್ಯತೆ, ಗಾಂಧೀಜಿಯವರ ಕಣ್ಣು ತಪ್ಪಿಸಿಕೊಂಡಿದೆ.

ಗಾಂಧೀಜಿ ಆಧುನಿಕ ನಾಗರಿಕತೆಯನ್ನು ಅರ್ಥಹೀನ ಉಪಭೋಗವೆಂದು ಮಾತ್ರ ಭಾವಿಸಿದರು. ಬೃಹತ್ ಯಂತ್ರಗಳು ಮತ್ತು ಕೈಗಾರಿಕೆಗಳಿಂದ ತಯಾರಾಗುವ ವಸ್ತುಗಳನ್ನು, ನಮ್ಮ ಜೀವನಕ್ಕೆ ಅವು ಅವಶ್ಯವಿಲ್ಲದಾಗಲೂ ಬಳಸುತ್ತ ಹೋಗುವ ಜೀವನ ಪದ್ಧತಿ ಮಾತ್ರ ಆಧುನಿಕ ನಾಗರಿಕತೆ ಅಲ್ಲ. ಪ್ರಜಾಪ್ರಭುತ್ವ, ಸೆಕ್ಯೂಲರಿಸಂ, ಕಾನೂನಿನ ಆಳ್ವಿಕೆ, ಲಿಂಗ ಸಮಾನತೆ, ಫ್ರೆಂಚ್ ಮಹಾಕ್ರಾಂತಿಯ ಮಹಾ ಆದರ್ಶಗಳಾದ ಸ್ವಾತಂತ್ರ್ಯ, ಭ್ರಾತೃತ್ವ ಮತ್ತು ಸಮಾನತೆ- ಇವು ಕೂಡ ಆಧುನಿಕ ನಾಗರಿಕತೆಯ ಅವಿಭಾಜ್ಯ ಅಂಗಗಳೇ.

ಆದರೆ ಗಾಂಧೀಜಿ ಈ ಮೌಲ್ಯಗಳೆಲ್ಲ ನಮ್ಮ ಪರಂಪರಾಗತ ಸಮಾಜದಲ್ಲೇ ಇದ್ದವು ಎಂದು ವಾದಿಸುತ್ತಾರೆ. ಅವರು ಕೂಡ, ಅವರ ಕಾಲದ ಇತರ ಸ್ವಾತಂತ್ರ್ಯ ಹೋರಾಟಗಾರರಂತೆ, ನಮ್ಮ ಚರಿತ್ರೆಯ ಸಂದುಹೋದ ಒಂದು ಸ್ವರ್ಣ ಯುಗದಲ್ಲಿ ನಂಬಿಕೆ ಇರಿಸಿದ್ದರು. ಅವರ ಗ್ರಾಮ ಸ್ವರಾಜ್ಯದ ಕಲ್ಪನೆ ಈ ನಂಬಿಕೆಯಿಂದಲೇ ಹುಟ್ಟಿಕೊಂಡಿರುವಂತಹದ್ದು (ಪುಟ ೪೫). ಗಾಂಧೀಜಿಯವರ ಈ ವಾದಗಳಿಗೆ ಉತ್ತರವಾಗಿ ನಾವು ಈಗ ನಮ್ಮ ಗತಕಾಲದ ಹುಳುಕುಗಳನ್ನೆಲ್ಲ ಕೆದಕಿಹಾಕುವ ಅಗತ್ಯವಿಲ್ಲ. ಗಾಂಧೀಜಿಯವರ ಕಾಲದಲ್ಲೇ ಅಂಬೇಡ್ಕರ್, ಗಾಂಧೀಜಿಯವರ ಈ ಆಧುನಿಕತೆಯ ವ್ಯಾಖ್ಯಾನವನ್ನೂ, ನಮ್ಮ ಚರಿತ್ರೆಯನ್ನು ಅವರು ಓದಿಕೊಂಡ ರೀತಿಯನ್ನೂ ತಿರಸ್ಕರಿಸಿದ್ದರು. ಅಂಬೇಡ್ಕರ್ ಆಧುನಿಕತೆಯನ್ನು ಕೇವಲ ವಸ್ತುಗಳ ಉಪಭೋಗ ಮಾತ್ರವೆಂದು ತಿಳಿಯಲಿಲ್ಲ. ಜಾತಿ ಪದ್ಧತಿಯನ್ನು ತಿರಸ್ಕರಿಸುವುದು ಕೂಡ ಒಂದು ಆಧುನಿಕ ವಿಚಾರವಾಗಿ ಅವರಿಗೆ ಕಂಡಿತು. ಗಾಂಧೀಜಿ ತುಂಬ ಗೌರವಿಸುತ್ತಿದ್ದ ಭಾರತದ ಭಕ್ತಿ ಪಂಥದ ಸುಧಾರಕರನ್ನು ಅಂಬೇಡ್ಕರ್

*(೩೮ನೇ ಪುಟ ನೋಡಿ)*



# ಅಹಿಂಸೆಯ ಪ್ರವಾದಿ

## ವ್ಯಾಸರಾಯ ಬಲ್ಲಾಳ

ಅಮೆರಿಕದ 'ನ್ಯೂಯಾರ್ಕ್ ಟೈಮ್ಸ್' ಪತ್ರಿಕೆ ಈ ಸಹಸ್ರಮಾನದ ಸಾಧನೆ, ಸಂಶೋಧನೆ, ವೈಚಾರಿಕತೆ, ವಿಪ್ಲವ ವಿಶೇಷಗಳ ಕುರಿತು ಹೊರಡಿಸುತ್ತಿರುವ ಹಲವಾರು ಪುರವಣಿಗಳೊಂದರಲ್ಲಿ, ಗಾಂಧೀಜಿಯವರ ಸತ್ಯ ಅಹಿಂಸೆಗಳ ಆದರ್ಶದ ವಿಚಾರ, ಕೊಲಂಬಿಯಾ ವಿಶ್ವವಿದ್ಯಾಲಯದ ಇತಿಹಾಸ ಪ್ರಾಧ್ಯಾಪಕರಾಗಿರುವ ಎಲನ್ ಬ್ರಿಂಕ್ಲೆ ಎಂಬವರು, ಬರೆಯುತ್ತ ''ಆಧುನಿಕ ಇತಿಹಾಸದಲ್ಲಿ ವಸಾಹತುಶಾಹಿಯ ವಿರುದ್ಧ ಹಾಗೂ ವೈಯಕ್ತಿಕ ಸ್ವಾತಂತ್ರ್ಯದ ಮೇಲೆ ದಬ್ಬಾಳಿಕೆ ನಡೆಸುವುದರ ವಿರುದ್ಧ ಹೋರಾಡಿ ಇಪ್ಪತ್ತನೆಯ ಶತಮಾನದ ವಿಶ್ವದ ಸ್ವರೂಪವನ್ನೆ ಬದಲಿಸಿದ ಅತ್ಯಂತ ಮಹತ್ವದ ವ್ಯಕ್ತಿಯೆನಿಸಿದ ಗಾಂಧೀಜಿಯ ಸ್ಥಾನವನ್ನು ನಾವು ನಿರ್ಧರಿಸಬೇಕಾಗಿದೆ'' ಎಂದಿದ್ದಾರೆ. ಈ ಶತಮಾನದ ಮಹತ್ವದ ಸಾಧನೆಗಳನ್ನು ವಿವರಿಸಿಕೊಳ್ಳುವಾಗಲೂ ಅಮೆರಿಕಾದ ಟಿ.ವಿ. ಜಾಲಗಳು ಆಗಾಗ ಗಾಂಧೀಜಿಯ ಸ್ವಾತಂತ್ರ್ಯ ಹೋರಾಟದ ಚಿತ್ರಗಳ ಭಾಗಗಳನ್ನು ತೋರಿಸುವುದಿದೆ.

ಗಾಂಧೀಜಿಯ ಹತ್ಯೆ 1948 ಜನವರಿಯಲ್ಲಾದರೂ ಸಮಗ್ರ ವಿಶ್ವ ದುಃಖಿಸಿದಂತೆ ಬೇರೆ ಯಾವ ವಿಶ್ವಮಾನ್ಯ ನಾಯಕನ ಸಾವಿನ ಕುರಿತು ಪ್ರತಿಕ್ರಿಯಿಸಿದೆಯೇ ಎಂದು ಕೇಳುವುದು ಅನುಚಿತವಾಗಲಾರದು. ಸ್ವಾತಂತ್ರ್ಯ ಬಂದು ಐವತ್ತು ವರ್ಷಗಳಾದ ಮೇಲೂ ಬದ್ಧವೈರಿಗಳಂತೆ ವರ್ತಿಸುತ್ತಿರುವ ಭಾರತ-ಪಾಕಿಸ್ತಾನಗಳೆರಡು ದೇಶಗಳಲ್ಲೂ ಗಾಂಧೀಜಿಯ ಹತ್ಯೆ ಕಂಡದ್ದು ಸಮಾನ ದುಃಖದ ಕಣ್ಣೀರನ್ನೆ. ಈ ಶತಮಾನದ ಮಹಾನ್ ಚಿಂತಕ ವಿಜ್ಞಾನಿ ಐನ್‌ಸ್ಟೈನ್ ಅವರು ಗಾಂಧೀಜಿಯ ಸಾವಿನ ಸಂದರ್ಭದಲ್ಲಿ ಹೇಳಿದ್ದು 'ಇಂಥದೊಂದು ವ್ಯಕ್ತಿ ನಮ್ಮೊಡನೆ ನಡೆದಾಡಿಕೊಂಡಿದ್ದರೆಂಬುದನ್ನು ನಂಬುವುದೇ ಕಷ್ಟ' ಎಂದು. ಸುಪ್ರಸಿದ್ಧ ಲೇಖಕ ಬರ್ನಾರ್ಡ್ ಶಾ ಅವರು ಅದೇ ಸಂದರ್ಭದಲ್ಲಿ ಹೇಳಿದ್ದು 'ತುಂಬ ಒಳ್ಳೆಯವರಾಗುವುದು ಅಪಾಯಕಾರಿ' ಎಂದು.

ಇತ್ತೀಚೆಗೆ ಅಮೆರಿಕದಲ್ಲಿ ನಡೆದ ಕೆಲವು ಹಿಂಸೆಯ ಪ್ರಕರಣಗಳನ್ನು ವಿಶ್ಲೇಷಣೆಗೊಳಪಡಿಸಿದ ಟಿ. ವಿ. ಚರ್ಚಾಕೂಟಗಳಲ್ಲಿ ಪ್ರಸಿದ್ಧ ಚಿಂತಕರು, ನ್ಯಾಯವಾದಿಗಳು, ವರ್ತಮಾನದ ಸನ್ನಿವೇಶಗಳಲ್ಲಿ ನಾವು ಗಾಂಧಿ, ಮಾರ್ಟಿನ್ ಲೂಥರ್ ಕಿಂಗ್‌ರಂಥವರನ್ನು ಕಾಣುತ್ತಿಲ್ಲವೆಂಬ ಕೊರಗನ್ನು ವ್ಯಕ್ತಪಡಿಸಿದ್ದಿದೆ. ಪ್ರತ್ಯಕ್ಷ ಹಾಗೂ ಅಪ್ರತ್ಯಕ್ಷ ಹಿಂಸೆ, ವಿಶ್ವದ ಎಲ್ಲ ಕಡೆಗಳಲ್ಲೂ ವ್ಯಾಪಕವಾಗಿ, ಒಂದು ಶೋಷಣೆಯ ಅಸ್ತ್ರವಾಗಿ ಬಳಕೆಯಾಗುತ್ತಿರುವಂತೆ ಕಂಡುಬರುತ್ತಿರುವ ಇಂದಿನ ಸಾಮಾಜಿಕ ಸಂದರ್ಭದಲ್ಲಿ, ಅದೂ ಭಾರತದಲ್ಲಿ, ಇಂಥ ಹಿಂಸೆಯನ್ನು ಪ್ರಚೋದಿಸುವ ನಾಯಕರೇ ರಾಜಕೀಯ ಪರಿಸರ ಮಾಲಿನ್ಯಕ್ಕೆ ಕಾರಣರಾಗುತ್ತಿದ್ದಾರೆಯೇ ಎಂಬ ಅನುಮಾನ ಮೂಡುವಂತಹ ಪರಿಸ್ಥಿತಿಯಲ್ಲಿ, ಗಾಂಧಿ ಕಳೆದುಹೋದ ಒಂದು ನೈತಿಕ ಮೌಲ್ಯದ ಸಂಕೇತವಾಗಿದ್ದರಷ್ಟೆಯೇ ಎಂದು ಯೋಚಿಸುವಂತಾಗಿದೆ. ಸತ್ಯ, ಅಹಿಂಸೆಗಳು ಅವರ ಉಸಿರಿನಂತಿದ್ದವು.

ಮಾನವೀಯವೆನಿಸುವ ಸಂವೇದನೆಗಳಲ್ಲಿ ನೈತಿಕತೆ ಅರಳಬೇಕು ಎನ್ನುವ ತಿಳಿವಳಿಕೆ ಸಾರ್ವತ್ರಿಕ ಹಾಗೂ ಸರ್ವಕಾಲಿಕ ಎಂಬ ನಂಬಿಕೆಯನ್ನು ಈಗ ಬದಲಿಸಬೇಕಾಗಿದೆಯೇ ಎಂಬ ಚಿಂತನೆಗೆ ಕಾರಣವಾಗಿರುವುದು. ಇಂದು ನಾವೆಲ್ಲ ನೈತಿಕತೆಯನ್ನು ರಾಜಕೀಯ ಸಂದರ್ಭಗಳಿಗೆ ಅನ್ವಯಿಸಿ ದುರುಪಯೋಗಪಡಿಸಿಕೊಳ್ಳುತ್ತಿರುವಾಗ ಗಾಂಧಿ ವಿಶ್ವಕ್ಕೆ ಈ ಶತಮಾನದ ಇತಿಹಾಸದಲ್ಲಿ ಕಾಣಿಸಿಕೊಂಡ ಮಹತ್ವದ ನೈತಿಕ ಸಂಕೇತವೆನಿಸಿರಬಹುದು. ಆದರೆ ಉಪ್ಪಿನ ಸತ್ಯಾಗ್ರಹದ 1930ರ ದಾಂಡಿ ಯಾತ್ರೆಯಿಂದ ಆರಂಭಿಸಿದ ಅಹಿಂಸಾತ್ಮಕ ಚಳವಳ ಸೂರ್ಯ ಕಂತದ ಸಾಮ್ರಾಜ್ಯವೆಂದು ನಂಬಲಾಗಿದ್ದ ಬ್ರಿಟಿಷ್ ಸಾಮ್ರಾಜ್ಯದ ಕೊನೆಗಾಣುವಂತಾದ ರೀತಿಗೆ ನಮ್ಮ ಸ್ವಾತಂತ್ರ್ಯ ಹೋರಾಟದ ನಾಯಕತ್ವ ವಹಿಸಿದ್ದ ಗಾಂಧೀಜಿಯ ಅಹಿಂಸೆಯ ಆದರ್ಶ ಎಷ್ಟರಮಟ್ಟಿಗೆ ಸಹಕರಿಸಿತು ಎಂಬ ವಿಚಾರ ಸಾಕಷ್ಟು ಅಧ್ಯಯನ ನಡೆದಿಲ್ಲವೇನೋ. ಆದರೆ ಅಹಿಂಸೆಯ ವ್ರತಕ್ಕೆ, ಅದರ ಹಿಂದಿರುವ ನೈತಿಕವೆನಿಸುವ ಮಾನವೀಯ ಕಾಳಜಿಗಳಿಗೆ ತಾನು ಬದ್ಧ ಎಂಬ ಸಂಕಲ್ಪ ಶಕ್ತಿಯನ್ನು, ದಕ್ಷಿಣ ಆಫ್ರಿಕಾದ ಜನಾಂಗ ದ್ವೇಷದ ಅನುಭವದಿಂದ ತಾನು ಕಂಡುಕೊಂಡು ನೆಚ್ಚಿಕೊಂಡ ಸಂಕಲ್ಪ ಶಕ್ತಿಯನ್ನು ತನ್ನ ಜೀವನದುದ್ದಕ್ಕೂ ಪಾಲಿಸಿಕೊಂಡು ಬಂದ ಗಾಂಧೀಜಿಯಂಥ ವ್ಯಕ್ತಿಯನ್ನು ಇತಿಹಾಸ ಕಾಣುವುದು ತೀರ ಅಪರೂಪವಾಗಿ.

ಗಾಂಧೀಜಿ ತನ್ನ 'ಸತ್ಯ ಶೋಧನೆ'ಯ ಆತ್ಮಕಥನದಲ್ಲಿ ಬರೆದಿದ್ದ ಮಾತು ಹೀಗಿದೆ: ''ನನ್ನ ಅಹಿಂಸೆ ಅತ್ಯಂತ ತೀಕ್ಷ್ಣವಾಗಿ ಪರೀಕ್ಷಿಸಲ್ಪಡುವುದು ಹಿಂದೂ ಮುಸ್ಲಿಂ ಐಕ್ಯದ ಪ್ರಶ್ನೆಯ ಮೇಲೆಂದೂ, ಅಹಿಂಸೆಯ ಕುರಿತಾದ ನನ್ನ ಪರೀಕ್ಷೆಗೆ ಆ ಪ್ರಶ್ನೆ ಅತ್ಯಂತ ವಿಸ್ತಾರವಾದ ಕಾರ್ಯಕ್ಷೇತ್ರವನ್ನು ಒದಗಿಸಿಕೊಟ್ಟಿದೆಯೆಂದೂ, ದಕ್ಷಿಣ ಆಫ್ರಿಕಾದ ನನ್ನ ಅನುಭವ ನನಗೆ ತಿಳಿಸಿತ್ತು'' ಹಾಗೆಯೇ ಆ ಗ್ರಂಥದಲ್ಲಿ ಓದುಗನನ್ನು ಬೀಳ್ಕೊಡುವಾಗ ''ಓದುಗನನ್ನು ಸದ್ಯಕ್ಕಾದರೂ ಬೀಳ್ಕೊಡುವಾಗ ಕಾಯಾ, ವಾಚಾ, ಮನಸಾ ಅಹಿಂಸೆಯ ವರವನ್ನೆ ನನಗೆ ಪಾಲಿಸೆಂದು ಸತ್ಯದ ದೇವನಿಗೆ ಮಾಡುವ ಪ್ರಾರ್ಥನೆಯಲ್ಲಿ ಜೊತೆಗೂಡಲು ಕೇಳಿಕೊಳ್ಳುತ್ತೇನೆ'' ಎಂದು ಬರೆದಿದ್ದರು.

ಪಂಜಾಬದಲ್ಲಿ ಆತಂಕವಾದಿಗಳ ಹತ್ಯಾಕಾಂಡ ಭಯ ತರಿಸುವ ಪ್ರಮಾಣದಲ್ಲಿದ್ದ ಕಾಲದಲ್ಲಿ ಈ ಲೇಖಕನನ್ನು ಒಬ್ಬರು ಪ್ರಶ್ನಿಸಿದ್ದಿದೆ : ''ನಿಮ್ಮ ಗಾಂಧಿಗೆ ಇದೆಲ್ಲವನ್ನು ನಿಲ್ಲಿಸುವುದು ಸಾಧ್ಯವಿತ್ತೇ'' ಎಂದು. 'ನಿಮ್ಮ ಗಾಂಧಿ' ಎಂದು ತಮ್ಮನ್ನು ದೂರವಿರಿಸಿಯೇ ಈ ಪ್ರಶ್ನೆಯನ್ನು ಕೇಳಿದ್ದರು. ''ನಮ್ಮ ಸ್ವಾತಂತ್ರ್ಯ ಬಂದ ಸಂದರ್ಭದಲ್ಲಿ ಹಾಗೂ ಮುಂದಿನ ಕೆಲವು ತಿಂಗಳುಗಳಲ್ಲಿ ಗಾಂಧಿ ನಡೆದುಕೊಂಡ ರೀತಿಯ ಸ್ಪಷ್ಟ ಚಿತ್ರ ತಂದುಕೊಳ್ಳಲು ನೀವು ಸಮರ್ಥರಾದರೆ, ಪಂಜಾಬದ ಹತ್ಯಾಕಾಂಡವನ್ನು ನಿಲ್ಲಿಸುವುದು ಸಾಧ್ಯವಿತ್ತು'' ಎಂದು ನಾನು ಉತ್ತರಿಸಿದ್ದೆ. ಕಾರಣ ಗಾಂಧೀಜಿಯ ಅಹಿಂಸೆಯ ಆದರ್ಶದ ಕುರಿತ ಪ್ರಚಂಡ ಆತ್ಮವಿಶ್ವಾಸದ ಪ್ರಾಮಾಣಿಕವಾದ ಸಂಕಲ್ಪಶಕ್ತಿ ನಮ್ಮ ಸ್ವಾತಂತ್ರ್ಯ ಹೋರಾಟದಲ್ಲೆ ಒಂದೆರಡು ಪವಾಡಗಳನ್ನು ಸೃಷ್ಟಿಸಿದ್ದಿದೆ.

ನಮ್ಮ ಸ್ವಾತಂತ್ರ್ಯ ಬರುವುದಕ್ಕೆ ಕೆಲವೇ ತಿಂಗಳುಗಳ ಹಿಂದೆ ಪಾಕಿಸ್ತಾನದ ಸಮರ್ಥನೆಗೆಂದು ಜಿನ್ನಾರವರು ಕೊಟ್ಟ 'ಡೈರೆಕ್ಟ್ ಆಕ್ಷನ್' ಹೋರಾಟದ ಕರೆ ಅಸಂಖ್ಯಾತ ಜನರ ಕೋಮುವಾರು ಹತ್ಯೆಗೆ ಕಾರಣವಾದದ್ದು ಈಗ ಇತಿಹಾಸ. ಜಿನ್ನಾರ ಅನುಯಾಯಿ, ಎಚ್. ಎಸ್. ಸುಹ್ರಾವರ್ದಿ ಬಂಗಾಳದಲ್ಲಿ ಅಧಿಕಾರ ನಡೆಸುತ್ತಿದ್ದು ಈ ಹತ್ಯಾಕಾಂಡವನ್ನು ನಿಲ್ಲಿಸುವ ಬಗೆ ಹೇಗೆಂದು ಚಿಂತಿಸುತ್ತಿದ್ದಾಗ, ಕಲ್ಕತ್ತಾಕ್ಕೆ ಧಾವಿಸಿ ಉಪವಾಸ ಸತ್ಯಾಗ್ರಹದ ತನ್ನ ನಿರ್ಧಾರವನ್ನು ಕಾರ್ಯರೂಪಕ್ಕೆ ತಂದು ಈ ನರಮೇಧವನ್ನು ನಿಲ್ಲಿಸಿ ಸುಹ್ರಾವರ್ದಿಯವರ ಮನಃಪರಿವರ್ತನೆಗೆ ಕಾರಣರಾದವರು ಗಾಂಧೀಜಿ. ಅಷ್ಟೇಯೇ ಅವರ ಬಂಗಾಳದ ನೌಖಾಲಿ ಯಾತ್ರೆ ನಡೆದ ಸಂದರ್ಭವನ್ನು ನಾವು ನೆನಪಿಗೆ ತಂದುಕೊಂಡಾಗಲೂ ಗಾಂಧೀಜಿಯ ಅಹಿಂಸೆಯ ಆದರ್ಶದ ಹಿಂದಿನ ಸಂಕಲ್ಪ ಶಕ್ತಿಯ ವ್ಯಕ್ತಿತ್ವ ಕಣ್ಣ ಮುಂದೆ ಬರುತ್ತದೆ. ಮತಾಂಧತೆ ಪರಾಕಾಷ್ಠೆಗೇರಿದ್ದ ಕಾಲ. ಜಾತೀಯ ವೈಷಮ್ಯ ಹಿಂಸೆಯೇ ಧರ್ಮವೆಂದು ತಿಳಿದಿದ್ದ ಕಾಲ. ಆಗ ಜೀವದ ಭಯ ತೊರೆದು ಶಾಂತಿ ತಂದೇ ತೀರುತ್ತೇನೆ, ಹಿಂದೂ ಮುಸ್ಲಿಂ ವೈಷಮ್ಯವನ್ನು ನಿವಾರಿಸುವುದೇ ನನ್ನ ಸಂಕಲ್ಪವೆಂದು ನೌಖಾಲಿಗೆ ತೆರಳಿದ ಗಾಂಧಿ ಅಲ್ಲಿ ಯಶಸ್ವಿಯಾದಂತೆ ಪಂಜಾಬದಲ್ಲೂ ಯಶಸ್ವಿಯಾಗಬಹುದಿತ್ತು. ಸ್ವಾತಂತ್ರ್ಯ ಹೋರಾಟದ ನಾಯಕತ್ವ ವಹಿಸಿದ್ದ ಗಾಂಧೀಜಿ ಸ್ವಾತಂತ್ರ್ಯ ಬಂದಾಗ ನಡೆದ ಮಿಲಿಯಗಟ್ಟಲೆ ಜನರ ಸ್ಥಳಾಂತರ, ಅಪಹರಣ, ಬಲಾತ್ಕಾರ, ಮತಾಂತರ ಇವೆಲ್ಲವುಗಳಿಂದ ಅತ್ಯಂತ ದುಃಖಿಯಾಗಿದ್ದರೂ ತನ್ನ ಕೊನೆಯ ಉಸಿರಿನತನಕವೂ, ಅಹಿಂಸೆಯ ಕುರಿತ ತನ್ನ ನಂಬಿಕೆಯನ್ನಾಗಲೀ, ಕೋಮುಸೌಹಾರ್ದದ ವಿಚಾರದ ತನ್ನ ಪ್ರಯತ್ನಗಳು ಫಲಕಾರಿಯಾಗಬಹುದು ಎನ್ನುವ ಆಸೆಯನ್ನಾಗಲೀ ಕಳೆದುಕೊಂಡಿರಲಿಲ್ಲ. ತನ್ನ ಶಾಂತಿ ಸ್ಥಾಪನೆಯ ಪ್ರಯತ್ನಗಳು ಮುಂದುವರಿದು ತಾನು ಪಾಕಿಸ್ತಾನಕ್ಕೂ ಹೋಗಿ ಅದೇ ಕಾಯಕವನ್ನು ಮುಂದುವರಿಸುತ್ತೇನೆ ಎಂದು ಅವರು ಹೇಳಿಕೊಂಡಿದ್ದುದು ತನ್ನ ಸಂಕಲ್ಪಶಕ್ತಿಯ ಹಿಂದೆ ಮಾನವೀಯವೆನಿಸುವ ನೈತಿಕತೆ ಇದೆಯೆಂಬ ತಿಳಿವಳಿಕೆಯಿಂದಲೇ. ಈ ಶತಮಾನದಲ್ಲಿ ಸಮಗ್ರ ವಿಶ್ವವನ್ನು ಪ್ರಭಾವಿಸಿದ್ದ ಗಾಂಧೀಜಿಯ ಅಹಿಂಸೆಯ ಆದರ್ಶದ ಹಿಂದಿದ್ದ ಆತ್ಮವಿಶ್ವಾಸ ಹಾಗೂ ಸಂಕಲ್ಪ ಶಕ್ತಿ. ಇಂದಿನ ಹೊಲೆಗೆಟ್ಟ ರಾಜಕೀಯ ವಾತಾವರಣದಲ್ಲಿ, ಗಾಂಧಿಯ ಹೆಸರನ್ನು ರಾಜಕೀಯ ಸ್ವಾರ್ಥಕ್ಕಾಗಿ ಬಳಸಿಕೊಳ್ಳುತ್ತಿರುವಾಗ, ಗಾಂಧೀಜಿ ನೆಚ್ಚಿಕೊಂಡಿದ್ದ ಅಹಿಂಸೆಯ ಆದರ್ಶ ನಮಗೆ ಉಳಿದಿರುವುದು ನೆನಪಾಗಿ ಮಾತ್ರ.

ವ್ಯಾಸರಾಯ ಬಲ್ಲಾಳ
[illegible]

'ಹೊಸತು' ಕುರಿತ ನಿಮ್ಮ ಅನಿಸಿಕೆಗಳು ಪೋಸ್ಟ್ ಕಾರ್ಡ್‌ನಲ್ಲಿ ಅಡಕವಾಗುವಷ್ಟು ಮಾಹಿತಿಯನ್ನು ಒಳಗೊಂಡಿರಲಿ

- ಸಂಪಾದಕ

## ನಮ್ಮ ಬಾಪೂ

ಒಂದೆ ಹಿಡಿಮೂಳೆ ಚಕ್ಕಳ ಅಷ್ಟೆ ; ಅದಕೆ ಸುರಿ
ಮೂರುನಾಲ್ಕೋ ಚಮಚ ರಕ್ತ ಮಾಂಸ ; ಜೊತೆಗಿರಿಸು
ಪಾಪವಂ ನೆರೆತೊರೆದ ಕಡಲಿನಾಳದ ಮನಸ,
ನೆರೆಬಂದ ಕಡಲಿನೊಲ್ ಪ್ರೇಮವಂ ತುಂಬಿದೆದೆಯ ;
ಹಚ್ಚು-ಮೊರಕಿವಿಯೆರಡ, ಎರಡು ಪಿಳಿಪಿಳಿ ಕಣ್ಣ ;
ಹಾಲುಹಸುಳೆಯ ಮಂದಹಾಸವನು ಲೇಪಿಸದಕೆ ;
ಒಳಗಿರಿಸು, ಜೇನು ನಗುವವೊಲಿನಿಯ ನಾಲಿಗೆಯ
ಮೇಣ್ ಹಿಮಗಿರಿಯ ಮೀರಿಸಿ ನಿಮಿರ್ದ ಹಿರಿಯಾತ್ಮವ.
ಪೂರಣವೋ ? ಸೋಯಬೀನ್ಸ್, ಖರ್ಜೂರ, ಮೇಕೆ ಹಾಲು !
ಮೇಲಿನಂಚಿನವರೆಗು ದುಃಖಿಗಳ ಕಣ್ಣೀರು ತುಂಬಿ
ಪಕ್ವಮಾಡೀ ಇದನು ಸೆರೆಮನೆಯೊಳೊಂದಿನಿತು ವರುಷ
ಹೊರಗೆ ತೆಗೆ ಪರಯ ಪರಿವಾರದಿಂ ಗಮಗಮಿಸಗೊಳಿಸಿ,
ಚಿಂದಿಯಂ ಸುತ್ತಿ, ಸೆಳಬೊಂಬಿನಾಲಂಬವನಿತ್ತು
ಬಡಿಸು ತಾ ! ಅವನೆ ಕಾಣ್ ! **ಲೋಕತಾರಕ ! ನಮ್ಮ ಬಾಪೂ !**

***- ಟಿ. ಪಿ. ಕೈಲಾಸಂ, ಅನು - ಜಿ. ಪಿ. ರಾಜರತ್ನಂ***

---

## ಗಾಂಧೀಜಿಯ ಪಾದಕ್ಕೆ

ಆಫ್ರಿಕದ ಕತ್ತಲೆಗೆ ಬೆಳಕ ಬೀರಿದೆ ನೀನು ;
ಆಂಗ್ಲರಧಿಕಾರ ಮೋಹವನು ಮುರಿದೆ.
ಅವರಿವರ ದುಷ್ಕೃತಿಗೆ ಕುದಿದು ಕಂಬನಿಗರೆದು
ಉಪವಾಸದಗ್ನಿಯಲಿ ನಡೆದುಬಂದೆ.

ನೊಂದವರ ತಾಯಾಗಿ ಸೇವೆಯನು ಸಲ್ಲಿಸಿದೆ ;
ದೀನರಿಗೆ ನೆರಳಾದ ತಂದೆಯಾದೆ.
ಕೊಲ್ಲಬಂದವನೆದೆಗೆ ಕ್ರಿಸ್ತನೊಲು ಕೈಮುಗಿದೆ ;
– ಸಾಕ್ರೆಟೀಸ್ ! – ಮತ್ತೊಮ್ಮೆ ವಿಷವ ಕುಡಿದೆ.

ಪ್ರೊಢವಿಯನಹಿಂಸೆಯಲಿ ಕಂಡು ಹರಸಿದೆ, ಗುರುವೆ,
ಚರಕದಲಿ ಸರಳತೆಯ ಇಂಪ ಬೆಳೆದೆ ;
ಭಾರತದ ಬಿಡುಗಡೆಗೆ ದುಡಿದು ತಾರಗೆಯಾದೆ.
ಎಲ್ಲರೆದೆಗೂಡಿನಲಿ ನಿನ್ನ ಬೆಳಕೆ.

ರಾಮ ಅಲ್ಲಾ ಎಲ್ಲ ಒಬ್ಬನೇ ಎಂದಲೆದು
ನವಖಲಿಯ ನೆತ್ತರಿನ ಕಣ್ಣ ತೊಳೆದು,
ಸೌಹಾರ್ದ ಸೇತುವಿನ ಶಾಂತಿ ಬಾವುಟದಂತೆ
ಜೀವಕೋಟಿಯ ಕರೆದ ಲೋಕಗುರುವೇ,

ಸುಳಿದ ಬಳಿ ಸ್ವರ್ಗವನು ಸುರಿದ ಸಿರಿಪಾದವೇ,
ಪಾರ್ಥಿವ ಪರಂಜ್ಯೋತಿಯಾದ ಬದುಕೇ,
ಮಾನವತೆಯಿಂದ ಅಂಬರ ತುಂಬಿದ ಉಸಿರೆ,
ಇಹವೆಲ್ಲ ತನ್ನದೆಂದಾಳಿದೊಲವೇ,

ಕಂಬನಿಯ ಅರ್ಘ್ಯದಲಿ ನಾಡೆಲ್ಲ ತಲೆಬಾಗಿ
ಕಣ್ಮುಚ್ಚಿ, ಸದ್ಗತಿಯ ತೋರು, ತಂದೆ !
ಕತ್ತಲು, ಕತ್ತಲೆ ; ಹಡಗು ಒಡೆದೀತು ! – ಬೆಳಕಾಗಿ
ಭಾರತವ ಕೈಹಿಡಿದು ನಡೆಸು ಬಾ, ತಂದೆ !

– ಕೆ. ಎಸ್. ನರಸಿಂಹಸ್ವಾಮಿ

## ಸಾಕು ಬಿಡು

ಅಲ್ಲಾ ಗೋಡ್ಸೆ,
ನೀ ಹತ್ಯಾರಾ ಅಲ್ಲವೆ ಅಲ್ಲ
ಪಶ್ಚಾತ್ತಾಪ ಯಾವ ಕಾರಣಕ್ಕೆ ಹೇಳು ?

ಅಂದು
ಮಂದಿ ಮಧ್ಯದಿಂದ ನುಗ್ಗಿದ್ದೂ ನೀನೆ
ಪಿಸ್ತೂಲಿನಿಂದ ಗುಂಡು ಹಾರಿಸಿದ್ದೂ ನೀನೇ
ಇದಂತೂ ಸುಳ್ಳಲ್ಲ

ಆದರೂ ನೀ ನಿರಪರಾಧಿ !

ಈ ಮಾತಿನಿಂದ ನೀ ತಬ್ಬಿಬ್ಬು ಆಗುವುದೂ ಸಹಜ
ನನ್ನ ಮಾತನ್ನು ಸಾರಾಸಗಟಾಗಿ ಅಲ್ಲಗಳೆಯುವುದೂ
ಅಷ್ಟೆ ಸ್ವಾಭಾವಿಕ



ನಾನೀಗ ನಿಗೂಢ ರಹಸ್ಯವೊಂದನ್ನು
ಬಿಚ್ಚಿಡುತ್ತೇನೆ ಕೇಳು -

ಗಾಂಧಿ ಬಗ್ಗೆ ನನಗೆ ಎಷ್ಟೇ ಸಿಟ್ಟು ದ್ವೇಷ ಇದ್ದರೂ
ಆತ
ಗಾಂಧಿಯಿಂದ ಮಹಾತ್ಮನಾದದ್ದನ್ನಾದರೂ
ನೀ ಒಪ್ಪಲೇಬೇಕಾಗುತ್ತದೆ

ಗಾಂಧಿಗೆ 'ಮಹಾತ್ಮಾ' ಬಿರುದು
ಬರುತ್ತಿದ್ದಂತೆ
ವಿಚಾರ ಉಚ್ಚಾರ ಆಚಾರಗಳ
ಸಮಂಜಸ ಸಾಮರಸ್ಯಕ್ಕೆ
ಅಂತೂ ತಕ್ಕ ಪ್ರತಿಫಲ ಬಂತೆಂದು
ರೋಮಾಂಚನಗೊಂಡಿರಬೇಕು
ಪುಳಕಗೊಂಡಿರಬೇಕು
ಶೀತಲ ಸಾಮ್ರಾಜ್ಯ 'ಬಾ'ಳ ಮನವನ್ನೂ
ಗೆದ್ದುಕೊಂಡಿರಬೇಕು

ಆದರೆ ಕ್ರಮೇಣ
ಮಹಾತ್ಮನ ವರ್ಚಸ್ಸು
ಇಮ್ಮಡಿ ಮುಮ್ಮಡಿಯಾಗುತ್ತ
ಬುವಿ-ಬಾನ ವ್ಯಾಪಿಸಿದಂತೆ

ಕಿವಿಗಳನ್ನೇ ಕಿತ್ತೊಗೆಯುವಷ್ಟು
ಕೀಸರು-ಬ್ಯಾಸರು ಹಿಡಿಸಿದಾಗ
ಗಾಂಧಿಗೆ
ತನ್ನ ಅಸ್ತಿತ್ವವೇ ಇಲ್ಲದಂತಾಗಿ
ಮೋಹನದಾಸನ ಟಾಕು-ಟೀಕಿನ ಯೌವನ
ಹೆಜ್ಜೆ ಹೆಜ್ಜೆಗೂ ಮೂದಲಿಸಿದಂತಾಗಿ
ಕೂತಲ್ಲಾದರೂ ನಿಂತಲ್ಲಾದರೂ ಇರುತ್ತಿದ್ದ
ಚೂರು-ಚಾರು ಮಂಪರಿಗೂ
ದಾಳಿ ಇಟ್ಟಾಗಲಂತೂ
ಆತನ ಅವಸ್ಥೆ ಯಾರಿಗೂ ಬೇಡ

ಮಹಾತ್ಮಾನನ್ನು ಹ್ಯಾಗಾದರೂ ಮುಗಿಸಲೇಬೇಕೆಂದು
ಸಂಧಿ ಕಾಯುತ್ತಿದ್ದ

ಅಂತೂ ಇಂತೂ ಆ ದಿನದ ಆ ಗಳಿಗೆ ಬಂದೇ ಬಿಟ್ಟಿತ್ತು

ಕಾಕತಾಳೀಯದಂತೆ
ನಿನಗೆ ಅವಕಾಶವಾಗುವುದೇ ತಡ
ನಿನ್ನ ಕಾಯಕ ನೀ ಮಾಡಿ ಬಿಟ್ಟೆ

ಗಾಂಧಿಗೂ ಇದೇ
ಇದೇ ಬೇಕಿತ್ತು

ಇಷ್ಟೇ
ನಿನ್ನ ಮೂಲಕ ಗಾಂಧಿ
ಆಗಿಬರದಾಗಿದ್ದ ಮಹಾತ್ಮಾನನ್ನು
ಬಲಿ ತೆಗೆದುಕೊಂಡ
ತನ್ನನ್ನು ತಾನೇ ಗೆದ್ದುಕೊಂಡ

ಈಗಲಾದರೂ ಹೊಳೆಯಿತಲ್ಲಾ
ನೀ ನಿರಪರಾಧಿ ಎಂಬುದು

ಸಾಕು ಬಿಡು
ಖುಲ್ಲಂ ಖುಲ್ಲಾ ಅಡ್ಡಾಡು

ರವಿ ಉಪಾಧ್ಯ
ನಂ. ೫೬೧/೧, ಮಠಗಲ್ಲಿ, ಬೆಳಗಾವಿ - ೨

### ಗಾಂಧೀ ಜಯಂತಿ

ನಾವೆಲ್ಲ
ವರ್ಷಕ್ಕೊಮ್ಮೆ ಆಚರಿಸುತ್ತೇವೆ
ಗಾಂಧೀ ಜಯಂತಿ
ಅಧಿಕಾರದಾಹವುಳ್ಳ
ರಾಜಕಾರಣಿಗಳು
ಪ್ರತಿ ನಿತ್ಯವೂ ಆಚರಿಸುತ್ತಾರೆ
'ಗಾದಿ' ಜಯಂತಿ

***ವೀರೇಶ ಎಸ್. ಸೊಪ್ಪಿಮಠ, ಸುರಪುರ***

*ಅವಳ ಕೃತ್ರಿಮವನ್ನು ಇನ್ನು ಸಹಿಸಲಾಗದೆಂಬ ತೀರ್ಮಾನಕ್ಕೆ ಬಂದಿದ್ದ ಜಾರ್ಜ್ ಆ ಕ್ಷಣದಲ್ಲೇ ಆಕೆಯ ತಾಯಿತನವನ್ನು ನೆನೆಸಿದ. ಅವಳ ರಕ್ಷಣೆ ತನ್ನ ಮಾನವಿಕ ಕರ್ತವ್ಯವೆಂದು ಬಗೆದ. ಘಟಿಸಿದ್ದು ಮಾತ್ರ ಅವನ ನಿರೀಕ್ಷೆಗೆ ಮೀರಿದ್ದು. ಅವನ ಜೀವನವೇ ಒಂದು ಒಗಟು.*

# ಹೃತಾತ್ಮ

ಇಂಗ್ಲಿಷ್ ಮೂಲ : **ಜೇಮ್ಸ್ ಗೂಗಿ**
ಕನ್ನಡಕ್ಕೆ : **ಪ್ರಮೋದ ಮುತಾಲಿಕ**

ಅಜ್ಞಾತ ವಿಧ್ವಂಸಕರ ಗುಂಪೊಂದು ಗ್ಯಾರಸ್ಟೋನ್ ದಂಪತಿಗಳ ಹತ್ಯೆ ಮಾಡಿದಾಗ, ಕೆಲದಿನ ಎಲ್ಲೆಲ್ಲೂ ಅದರ ಕುರಿತಾದ ಚರ್ಚೆಯೆ ! ದಿನ ಪತ್ರಿಕೆಗಳ ಮುಖಪುಟವನ್ನು ಹಿಡಿದು ರೇಡಿಯೋನಲ್ಲಿ ಪ್ರಮುಖ ವಾರ್ತೆಯಾಗುವವರೆಗೆ ಅದೇ ಪ್ರಮುಖ ವಿಷಯ. ಇದಕ್ಕೆ ಕಾರಣವು ಇರದಿರಲಿಲ್ಲ. – ಇತ್ತೀಚಿನ ಪ್ರಮುಖ ರಾಜಕೀಯ ವಾತಾವರಣದಲ್ಲಿ ಹೆಚ್ಚುತ್ತಲೆ ಇದ್ದ ಹಿಂಸೆಯ ಕರಾಳ ಹಸ್ತ ಕೀನ್ಯದಲ್ಲಿ ಬಂದು ನೆಲೆಸಿದ್ದ ಈ ಯುರೋಪ್ ದಂಪತಿಗಳ ಕೊಲೆಯವರೆಗೂ ಹಬ್ಬಿತ್ತು. ಈ ಕೊಲೆಯನ್ನು ಜನ ತಮ್ಮ ಶಕ್ತ್ಯಾನುಸಾರ ಊಹೆಗಳನ್ನು ಹರಿಯ ಬಿಡುವುದರ ಮೂಲಕ ಅರ್ಥೈಸುವ ಪ್ರಯತ್ನದಲ್ಲಿ ತೊಡಗಿದ್ದರು.

ಈ ಕೊಲೆಯ ಚರ್ಚೆ ಶ್ರೀಮತಿ ಹಿಲ್‌ಳ ಮನೆಯಲ್ಲಿ ಆದಷ್ಟು ವಿಸ್ತರವಾಗಿ ಬಹುಶಃ ಎಲ್ಲಿಯೂ ಆಗಿರಲಾರದು. ಗುಡ್ಡದ ತುದಿಯಲ್ಲಿ ತಮ್ಮ ಅನ್ವರ್ಥಕ ನಾಮದಂತೆ ಹಿಲ್ ದಂಪತಿಗಳು ಮನೆಯನ್ನು ಕಟ್ಟಿಕೊಂಡು ಅಲ್ಲಿ ನೆಲೆಸಿ ಆಗಲೆ ಸುಮಾರು ವರುಷಗಳೇ ಆಗಿದ್ದವು. ಕಳೆದ ವರುಷವಷ್ಟೇ ಹಿಲ್‌ಳ ಗಂಡ ಉಗಾಂಡಾಕ್ಕೆ ಹೋದಾಗ ಅಲ್ಲಿ ಚಳಿಜ್ವರ ಪೀಡಿತನಾಗಿ ಅಸುನೀಗಿದ್ದ. ಆಕೆಯ ಒಬ್ಬ ಮಗ ಮತ್ತು ಒಬ್ಬಳು ಮಗಳು ಅವಳ 'ಮನೆ'ಯಲ್ಲಿಯೇ ವಿದ್ಯಾಭ್ಯಾಸ ಮಾಡುತ್ತಿದ್ದರು. 'ಮನೆ' ಅಂದರೆ ಇವರಿಗೆ ಇಂಗ್ಲೆಂಡ್ ಎಂದರ್ಥ. ಆದರೂ, ಇಲ್ಲಿ ಸುಮಾರು ವರ್ಷಗಳಿಂದ ಇದ್ದುದರಿಂದಲೂ ಸಾಕಷ್ಟು ತೋಟ ಗದ್ದೆಗಳ ಒಡೆಯರಾಗಿ ತಮ್ಮ ಸಹಾನುಭೂತಿಪರ ಸ್ವಭಾವದಿಂದಲೂ ಎಲ್ಲರಿಗೂ ಬೇಕಾದವಳಾಗಿದ್ದಳು. ಈ ಕಾರಣಕ್ಕಾಗಿಯೇ ಅಲ್ಲಿಯೇ ನೆಲೆಸಿದ್ದ ಬೇರೆ ಯೂರೋಪಿಯನ್‌ರಿಗೆ ಹಿಲ್ ಸೇರುತ್ತಿರಲಿಲ್ಲ. ಅಲ್ಲಿಯ ಮೂಲನಿವಾಸಿಗಳ ಕುರಿತಾದ ಅವಳ 'ಉದಾರ' ವಾದ ಧೋರಣೆಗಳೆ ಇದಕ್ಕೆ ಕಾರಣವಾಗಿದ್ದವು.

ಗ್ಯಾರಸ್ಟೋನ್ ದಂಪತಿಗಳು ಕೊಲೆಯಾದ ಎರಡು ದಿನಗಳ ನಂತರದ ಒಂದು ಅಪರಾಹ್ನ ಹಿಲ್‌ಳ ಇಬ್ಬರು ಸ್ನೇಹಿತೆಯರು ಹಾರ್ಡಿ ಮತ್ತು ಸ್ಟೈಲ್ಸ್ ಅವಳ ಮನೆಗೆ ಬಂದರು. ಕೊಲೆಯ ಕುರಿತು ಸವಿಸ್ತಾರವಾಗಿ ಮಾತನಾಡುವುದೆ ಅವರ ಭೇಟಿಯ ಉದ್ದೇಶವಾಗಿತ್ತು. ಅವರಿಬ್ಬರ ಮುಖದ ಮೇಲೆ ಒಂದು ತರಹದ ವಿಷಾದ ಮಿಶ್ರಿತ ಗೆಲುವಿನ ಛಾಯೆಯಿತ್ತು. ಗ್ಯಾರಸ್ಟೋನ್ ದಂಪತಿಗಳ ಕೊಲೆಗಾಗಿ ವಿಷಾದವಿತ್ತು ; ಮತ್ತೆ ಗೆಲುವು, ಅವರೆಲ್ಲ ನಂಬಿಕೊಂಡೇ ಬಂದಿದ್ದ ಮೂಲನಿವಾಸಿಗಳ ಇಂಥ ವಿಶ್ವಾಸಘಾತುಕ ಕಾರ್ಯಕ್ಕಾಗಿ. ಇನ್ನು ಮುಂದಾದರೂ ತಮ್ಮ ಸ್ನೇಹಿತೆ ಈ ಜನರ ವಿಷಯ ಹೆಚ್ಚಿನ ಕಕ್ಕುಲತೆ ತೋರಲಾರಳು ಎಂಬುದು ಅವರ ಹೊಸ ವಿಶ್ವಾಸವಾಗಿತ್ತು.

ಶ್ರೀಮತಿ ಸ್ಟೈಲ್ಸ್ ಒಂದು ತರಹದ ವಿಚಿತ್ರ ಹೆಣ್ಣು, ಮಧ್ಯವಯಸ್ಸಿನ ಆಕೆಯಲ್ಲಿ ತನ್ನ ನಂಬುಗೆ ಕುರಿತಾದ ಅಪಾರ ವಿಶ್ವಾಸ. ಇಂಥ ದೇಶವೊಂದರಲ್ಲಿ ತನ್ನಂಥ ಕೆಲಜನ ನೆಲೆಸಿ ಸಂಸ್ಕೃತಿ, ಮೌಲ್ಯಗಳ ಓಯಸಿಸ್ಸನ್ನು ನಿರ್ಮಿಸಿದ್ದು ಎಂಬುದು ಅವಳ ಬಲವಾದ ನಂಬುಗೆ. ಇನ್ನು ಹಾರ್ಡಿ ಸ್ವಲ್ಪ ಬೇರೆ ಸ್ವಭಾವದವಳು. ದಕ್ಷಿಣ ಆಫ್ರಿಕಾದಿಂದ ಇಲ್ಲಿಗೆ ಬಂದು ನೆಲೆಸಿದ್ದ ಆಕೆಗೆ ಸ್ವಂತ ಅಭಿಪ್ರಾಯ ಎನ್ನುವುದು ಇರಲಿಲ್ಲ. ಇಂದೂ ಅಷ್ಟೇ– ಸ್ಟೈಲ್ಸ್ ಹೇಳಿದ್ದಕ್ಕೆಲ್ಲ ಸಮ್ಮತಿ ಸೂಚಿಸುವುದು. ಆದರೆ ಹಿಲ್ ಮಾತ್ರ ತನ್ನ ಅಭಿಪ್ರಾಯವನ್ನೇನೂ ಬದಲಿಸಿರಲಿಲ್ಲ. ಈ ಮೂಲನಿವಾಸಿಗಳನ್ನು ಸ್ವಲ್ಪ ಪ್ರೀತಿ–ವಿಶ್ವಾಸದಿಂದ ನೋಡಿಕೊಂಡರಾಯ್ತು, ಅವರು ಖಂಡಿತವಾಗಿ ಸುಧಾರಿಸುವರು –ಎನ್ನುವುದು ಅವಳ ವಿಚಾರ. ಅದು ಇಂದಿನವರೆಗೂ ಬದಲಾಗದೆ ಉಳಿದುಕೊಂಡು ಬಂದಿದೆ. ಇದು ಬರಿಯ ವಿಚಾರದಲ್ಲಷ್ಟೆ ಇರದೆ ಕಾರ್ಯರೂಪದಲ್ಲಿಯೂ ವ್ಯಕ್ತವಾಗಿತ್ತು. ತನ್ನ ಸುತ್ತಲಿನ ಮೂಲನಿವಾಸಿಗಳಿಗೆ ವಾಸಕ್ಕೆಂದು ಚಿಕ್ಕ ಚಿಕ್ಕ ಗುಡಿಸಲುಗಳನ್ನು ಕಟ್ಟಿಸಿಕೊಟ್ಟು, ಅವರ ಮಕ್ಕಳ ಶಿಕ್ಷಣದ ಏರ್ಪಾಡನ್ನು ಮಾಡಿದ್ದಳು. ಯಾವ ಬಿಳಿಯನೂ ಮಾಡದಷ್ಟು ಧೈರ್ಯವನ್ನು ಇವಳು ಮಾಡಿದ್ದಳು!

'ಓಹ್ – ಎಂಥ ಅಮಾನುಷ ಕೃತ್ಯ – ಕಲ್ಪನೆಗೂ ಮೀರಿದ್ದು! ಅದಕ್ಕೇ ನಾನು ಹೇಳುವುದು – ಈ ಮೂಲನಿವಾಸಿಗಳನ್ನು ನಂಬಲಾಗದು ಎಂದು. ಇನ್ನು ಅವರನ್ನು ಸುಧಾರಿಸುವುದಂತೂ ಕನಸಿನ ಮಾತು....!' ಸ್ಟೈಲ್ಸ್ ಮಾತಿಗಾರಂಭಿಸಿದಳು. ಹಾರ್ಡಿ ಅದಕ್ಕೆ ತನ್ನ ಸಂಪೂರ್ಣ ಸಮ್ಮತಿಯನ್ನು ಬಲವಾಗಿ ತಲೆದೂಗುವ ಮೂಲಕ ಸೂಚಿಸಿದಳು. ಸ್ಟೈಲ್ಸ್ ಮುಂದುವರೆದು 'ಛೀ–ಛೀ, ಇಂಥ ಕೃತ್ಯವನ್ನೆಸಗಲು ಅವರಿಗೆ ಮನಸ್ಸಾದರೂ ಹೇಗೆ ಬಂದಿತು? ಅವರನ್ನು ಸುಧಾರಿಸಲು ನಾವು ಎಷ್ಟೊಂದು ಪ್ರಯತ್ನಪಟ್ಟಿಲ್ಲ? ಎಲ್ಲವೂ ವ್ಯರ್ಥ ; ಈ ಜನ ಸುಧಾರಿಸುವ ಬಗ್ಗೆ ನನಗಂತೂ ಮೊದಲಿನಿಂದಲೂ ಅನುಮಾನ ಇದ್ದೇ ಇದೆ.'

''ಸ್ವಲ್ಪ ತಾಳ್ಮೆ....'' ಹಿಲ್ ಮಾತನಾಡಲು ಪ್ರಯತ್ನಿಸಿದಳು.

''ತಾಳ್ಮೆ – ಎಂಥ ತಾಳ್ಮೆ? ಗ್ಯಾರಸ್ಟೋನ್‌ರಿಗಿಂತ ಸಹನಶೀಲರು ಬೇಕಾ? .....ಅವರು ಪೂರ್ತಿ ನೆಚ್ಚಿಕೊಂಡವನೆ ಹೀಗೆ ಮಾಡುವುದೆಂದರೆ?''

''ಅಂದರೆ?''

''ಪಾಪ ಅವರು ರಾತ್ರಿ ಮಲಗಿದ್ದಾಗ ಅವರ ಸೇವಕನೆ ಬಂದು ಧಡಧಡ ಬಾಗಿಲು ಬಡಿದು ಅವರನ್ನೆಬ್ಬಿಸಿದ. ಅವನೊಂದಿಗೆ ಈ ಕೊಲೆಗಡುಕರೂ ಇದ್ದರು. ಇದೆಲ್ಲ ಪೂರ್ವಯೋಜಿತ ಕೊಲೆ. ಬಾಗಿಲು ತೆಗೆದಾಕ್ಷಣ ಆ ಜನ ಒಳಕ್ಕೆ ನುಗ್ಗಿದ್ದೇ.... ಪೇಪರುಗಳಲ್ಲಿ ಹಾಗೆ ಬಂದಿದೆ.'' ಸ್ಟೈಲ್ಸ್ ಈ ವಿವರಣೆಗೆ ಹಿಲ್‌ಳ ಹತ್ತಿರ ಉತ್ತರವಿರಲಿಲ್ಲ. ಅವಳು ಅಂದಿನ ಪೇಪರುಗಳನ್ನು ಓದಿರಲಿಲ್ಲ.

ಚಹದ ಸಮಯ ಹಿಲ್‌ಳ ಗೊಂದಲದ ನೆರವಿಗೆ ಬಂದಿತು. ಈ ವಿಷಯದ ಮೇಲೆ ತೆರೆ ಎಳೆಯುವಂತೆ 'ಜಾರ್ಜ್... ಜಾರ್ಜ್...' ಎಂದು ಕೂಗಿದಳು. ಜಾರ್ಜ್ ಅವಳ 'ಹುಡುಗ' – ಅಂದರೆ ಸೇವಕ. ಸುಮಾರು ನಲವತ್ತು ವರುಷದ ಆತ ಕಳೆದ ಹತ್ತು ವರ್ಷಗಳಿಂದ ಹಿಲ್ ದಂಪತಿಗಳ ಮನೆಗೆಲಸ ಮಾಡಿಕೊಂಡು, ಅವರೇ ಕಟ್ಟಿಕೊಟ್ಟಿದ್ದ ಆ ಗುಡಿಸಲಿನಲ್ಲಿ ವಾಸವಾಗಿದ್ದ. ತನ್ನ ಯಜಮಾನಿತಿಯ ಕರೆಗೆ ಮಾರುತ್ತರವಾಗಿ ಬಂದು, 'ಏನು ಮೇಮ್‌ಸಾಬ್?' – ಎಂದ.

''ಚಹಾ ತಗೊಂಡು ಬಾ'' ಎಂದಿಷ್ಟೆ ಹಿಲ್ ಹೇಳಲು ಬಂದ ವ್ಯಕ್ತಿಗಳತ್ತ ದೃಷ್ಟಿಯನ್ನೊಮ್ಮೆ ಹರಿಸಿ, ಆತ ಒಳಗೆ ಹೋದ.

ಜಾರ್ಜ್ ಬಂದಾಗ ಒಂದು ಗಳಿಗೆ ಸ್ತಬ್ಧವಾಗಿದ್ದ ಮಾತುಕತೆ ಮತ್ತೆ ಮುಂದುವರೆಯಿತು.

'ನೋಡು, ಎಷ್ಟು ಮುಗ್ಧರಂತೆ ಕಾಣುವರು!' ಹಾರ್ಡಿಯ ಉವಾಚ. 'ಹೌದು ಮುಗ್ಧ ಹೂವು – ಆದರೆ ಹಿಂದೆ ವಿಷಸರ್ಪ!' ಸ್ಟೈಲ್ಸ್ ಷೇಕ್ಸ್‌ಪಿಯರನ್ನು ಓದಿಕೊಂಡಿದ್ದಳು.

'ಹತ್ತು ವರ್ಷಗಳಿಂದ ನಮ್ಮಲ್ಲೇ ಇದ್ದಾನೆ. ತುಂಬ ವಿಶ್ವಾಸಿಕ'. – ಹಿಲ್ ತನ್ನ 'ಹುಡುಗ' ನನ್ನು ಸಮರ್ಥಿಸುವ ಪ್ರಯತ್ನ ಮಾಡಿದಳು.

''ಬಿಡಮ್ಮ – ನಂಗೆಲ್ಲ ಗೊತ್ತು. ನಾನು ನಂಬಲ್ಲ. ಇದೆಲ್ಲ ಒಂದೇ ಜಾತಿ. ನನಗಂತೂ ಈತನ ಮುಖ ನೋಡಲಾಗದು'' ಎಂದಳು ಸ್ಟೈಲ್ಸ್.

ಅಷ್ಟು ಹೊತ್ತಿಗೆ ಚಹ ಬರಲು, ಸ್ವಲ್ಪ ಹೊತ್ತು ಬೇರೆ ಮಾತನಾಡುವ ಪ್ರಯತ್ನ ಮಾಡಿದರೂ, ಸಾಧ್ಯವಾಗದೆ ಸ್ಟೈಲ್ಸ್ ಮತ್ತೆ ಈ ಜನರ ವಿಶ್ವಾಸಘಾತುಕತನದ ಬಗ್ಗೆಯೆ ಮಾತಾಡಿದಳು. ಹಿಲ್‌ಳೂ ಅಷ್ಟೆ! ಈ ಜನರ ಕುರಿತು ತನ್ನ ವಿಶ್ವಾಸವನ್ನು ಪುನರುಚ್ಚರಿಸಿದಳು.

ಆದರೂ ಆದೇಕೋ ಅಂದು ಸ್ನೇಹಿತೆಯರಿಬ್ಬರೂ ಹೋದ ಮೇಲೆ, ಅವರ ಮಾತುಗಳನ್ನು ನೆನಪಿಸಿಕೊಳ್ಳುತ್ತಿದ್ದಂತೆ ವಿಚಿತ್ರವಾದ ಹೆದರಿಕೆಯಾಯಿತು, ತುರ್ತುಪರಿಸ್ಥಿತಿಯಲ್ಲಿ ತನ್ನ ಸಹಾಯಕ್ಕೆ ಯಾರೂ ಬರದಷ್ಟು ದೂರದಲ್ಲಿ ತನ್ನ ಮನೆಯಿದೆಯೇನೋ ಅನಿಸಿತು. ಆದರೂ [illegible]

ಇವರೊಬ್ಬಳೆಂದು ಸಮಾಧಾನ ಪಟ್ಟುಕೊಂಡಳು.

\+ \+ \+

ರಾತ್ರಿಯ ಊಟವಾದ ಮೇಲೆ ಜಾರ್ಜ್‌ನ ಅಂದಿನ ಕೆಲಸ ಮುಗಿದಂತೆ, ಎಂದಿನಂತೆ ಸ್ವಲ್ಪ ದೂರದಲ್ಲಿದ್ದ ಗುಡಿಸಲಿನೆಡೆಗೆ ಹೆಜ್ಜೆ ಹಾಕತೊಡಗಿದ. ಅದೇಕೊ ಅಂದು ಮನಸ್ಸು ಎಂದಿಲ್ಲದ ವಿಹ್ವಲತೆಗೆ ಒಳಗಾಗಿತ್ತು. ಅದಕ್ಕೆ ಸರಿಯಾಗಿ ದೂರದಲ್ಲಿ ಗೂಬೆಯ ಕೂಗೊಂದು ಕೇಳಿಸಿತು. ಇದೇ ವಿಚಿತ್ರ ಮಾನಸಿಕ ಸ್ಥಿತಿಯಲ್ಲಿ ಆತ ತನ್ನ ಹಿಂದೆ ತಿರುಗಿದ. ಭವ್ಯಾಕಾರವಾಗಿ ಇನ್ನೂ ಬೆಳೆಯುತ್ತಲೆ ಇದೆಯೇನೊ ಎನ್ನುವಂತೆ ಕಾಣುತ್ತಿದ್ದ 'ಮೇಮ್ ಸಾಬ್'ರ ಬಂಗಲೆ ಯಾವೇಕೊ ಅವನಲ್ಲಿ ಒಂದು ತರಹದ ಸಿಟ್ಟನ್ನು ಉಕ್ಕಿಸಿತು. ತನಗೂ ಇದರಲ್ಲೇ ವಯಸ್ಸು ಕಳೆದುಹೋಗುತ್ತಿದೆಯಲ್ಲ ಎಂಬ ವಿಚಾರ ಒಮ್ಮೆಲೆ ಬಂದುಹೋಯಿತು.

'ಇಷ್ಟು ದಿನ ನಿಮ್ಮೊಂದಿಗಿದ್ದರೂ ನಿಮ್ಮಿಂದ ನನಗೆ ಸಿಕ್ಕಿದ್ದಾದರೂ ಏನು? ನೀವೇ ಹೇಳಿ. ನನ್ನ ನೆಲದಲ್ಲೇ ನನ್ನದು ಈ ಪರಿಸ್ಥಿತಿ ಆಗಿದೆ.' ಸಿಟ್ಟಿನ ಭರದಲ್ಲಿ ಉಕ್ಕುತ್ತಿದ್ದ ಈ ವಿಚಾರಗಳು ಶಬ್ದರೂಪ ತಾಳಲಾರದೆ ಹೊರಬರಲೇ ಇಲ್ಲ. ಇದಿಷ್ಟೆ ಅಲ್ಲದೆ ಇಷ್ಟು ದಿನ ಮೌನವಾಗಿ ಸಹಿಸಿಕೊಂಡಿದ್ದ ಇನ್ನೂ ಏನೇನನ್ನೋ ಆ ಮನೆಯೆಡೆಗೆ ಅರಚಬೇಕೆಂದು ಕೊಂಡಿದ್ದರೂ 'ಆ ಮನೆಯೇನು ಮಾರುತ್ತರಿಸೀತು? ನನಗೆಲ್ಲೊ ಹುಚ್ಚು ಅಷ್ಟೆ!' ಅಂದುಕೊಂಡ.

ಇಷ್ಟೊತ್ತಿಗೆ ಇನ್ನೊಮ್ಮೆ ಗೂಬೆ ಕೂಗಲು, 'ಓಹ್ – ಇದು ಮೇಮ್ ಸಾಬರಿಗೆ' ಅಂದುಕೊಂಡ. ಮುಂದಿನ ಕ್ಷಣದಲ್ಲೇ ಈ ಎಲ್ಲ ಬಿಳಿಜನರ ಬಗ್ಗೆ, ತಮ್ಮ ನೆಲದಲ್ಲೇ ತಮ್ಮನ್ನು ಈ ರೀತಿ ಮೂಲೆಗುಂಪು ಮಾಡಿರುವವರ ವಿರುದ್ಧ ಅಸಾಧ್ಯ ಕೋಪವುಂಟಾಯ್ತು. ಇಂಥ ಕೋಪದ ಕ್ಷಣಗಳಲ್ಲಿ ಎಂದಿನಂತೆ, ತನ್ನ ತಂದೆಯನ್ನು ಜ್ಞಾಪಿಸಿಕೊಂಡ. ಎಂಥ ಒಳ್ಳೆಯ ಮನುಷ್ಯನಾತ! ತನ್ನ ನಾಡಿನಲ್ಲಿ ನಾಶವಾಗಿದ್ದ ದೇವಸ್ಥಾನಗಳನ್ನು ಮರಳಿ ಸ್ಥಾಪಿಸುವ ಪ್ರಯತ್ನದಲ್ಲಿ, ಪೊಲೀಸರ ಗುಂಡಿಗೆ ಅನ್ಯಾಯವಾಗಿ ಬಲಿಯಾಗಿದ್ದ. ಇದಾದ ಮೇಲೆ ಜಾರ್ಜ್ ಹೊಟ್ಟೆ ಪಾಡಿಗಾಗಿ ಅಲ್ಲಲ್ಲಿ ಕೆಲಸವನ್ನು ಹುಡುಕುತ್ತ ತಿರುಗಾಡಿದ್ದ. ಈ ಬಿಳಿಯ ಜನರ ತೋಟಗಳಲ್ಲಿ ಅವರು ಕೊಟ್ಟಷ್ಟು ಸಂಬಳದ ಮೇಲೆ ದುಡಿಯುತ್ತ ಬಂದಿದ್ದ. ಇಂಥ ಸಮಯದಲ್ಲಿ ಆತ ಅಕಸ್ಮಾತ್ತಾಗಿ ಹಿಲ್ ದಂಪತಿಗಳ ತೋಟಕ್ಕೆ ಬಂದಿದ್ದ. ಕಳೆದ ಹತ್ತು ವರ್ಷಗಳಿಂದ ಇಲ್ಲೇ ದುಡಿಯುತ್ತಿದ್ದಾನೆ. ಇದೂ ಒಂದು ವಿಚಿತ್ರವಾದ ವಿಪರ್ಯಾಸ. ಯಾಕೆಂದರೆ ಹಿಲ್‌ರ ತೋಟದ ಮುಕ್ಕಾಲು ಭಾಗ ನೆಲ ಜಾರ್ಜ್‌ನ ತಂದೆಗೆ ಸೇರಿದ್ದು. ಸುಮಾರು ವರ್ಷಗಳ ಹಿಂದೆ ಇಲ್ಲಿ ಭೀಕರ ಬರಗಾಲ ಬಿದ್ದಾಗ ಕೆಲಸಮಯ ಇವರೆಲ್ಲ ಬೇರೆಡೆಗೆ ಹೋದಾಗ, ಇವರು ಬರುವಷ್ಟರಲ್ಲಿ ಬಿಳಿಜನ ಈ ನೆಲವನ್ನು ಕಬಳಿಸಿಬಿಟ್ಟಿದ್ದರು.

'ಅಲ್ಲಿ ನೋಡು – ಅಷ್ಟು ದೂರ ಕಾಣುವವರೆಗಿನ ನೆಲ ಎಲ್ಲ ನಮ್ಮದೆ. ಒಂದಲ್ಲ ಒಂದು ದಿನ ಈ ಬಿಳಿಯರು ನಮ್ಮ ನೆಲ ಬಿಟ್ಟು ಹೋದಾಗ ನೀನು ನಿನ್ನ ನೆಲದಲ್ಲೇ ಇರು,' ಅವನಪ್ಪ ಆತನಿಗೆ ಸಾಯುವ ಮುಂಚೆ ಹೇಳಿದ್ದ. ಜಾರ್ಜ್ ಆಗ ತುಂಬ ಚಿಕ್ಕವನಿದ್ದ. ತನ್ನ ತಂದೆಯ ಮರಣಾನಂತರ ಅದನ್ನೆಲ್ಲ ಮರೆತೂಬಿಟ್ಟಿದ್ದ. ಆದರೆ ಹತ್ತು ವರ್ಷಗಳ ಹಿಂದೆ ಇಲ್ಲಿಗೆ ಬಂದಾಗ ಆತನಿಗೆ ಒಮ್ಮೆಲೆ ಎಲ್ಲವೂ ನೆನಪಾಯ್ತು.

ಹಾಗೆ ನೋಡಿದರೆ ಜಾರ್ಜ್‌ಗೆ ಹಿಲ್ ಎಂದೂ ಸೇರಿರಲಿಲ್ಲ. ತಮ್ಮಂಥವರಿಗೆ ಏನೊ ಉಪಕಾರ ಮಾಡಿದ್ದೇನೆಂದು ಬೀಗುವ ಅವಳ ಠೀವಿ ಅವನಿಗೆ ಎಂದೂ ಹಿಡಿಸಿರಲಿಲ್ಲ. ಹಿಲ್ ಅಲ್ಲದೆ ಬೇರೆ ಬಿಳಿಯರ ಕೈಕೆಳಗೂ ಕೆಲಸಮಾಡಿದ್ದರಿಂದ ಅವನಿಗೆ ಇವಳಲ್ಲಿ ಅಂಥ ವಿಶೇಷವೇನೂ ಕಂಡಿರಲಿಲ್ಲ. ಎಲ್ಲ ಒಂದೇ ಜನ ಅಂದುಕೊಂಡ. 'ನಿಮ್ಮೆಲ್ಲರನ್ನೂ ನಾನು ದ್ವೇಷಿಸುತ್ತೇನೆ' ಒಮ್ಮೆಲೆ ಕೂಗಿದ. ತನ್ನ ಧ್ವನಿಯಿಂದ ಅವನಿಗೆ ವಿಚಿತ್ರವಾದ ಸಮಾಧಾನವಾಯ್ತು. 'ಹೌದು... ಇಂದು ರಾತ್ರಿ ಈ ಹಿಲ್ ಸಾಯಲೇಬೇಕು. ಆಕೆಯ ವರ್ತನೆಗೆ ಶಾಸ್ತಿ ಆಗಲೇಬೇಕು. ಇನ್ನೊಂದು ಬಿಳಿ ಜಿರಳೆ ಕಡಿಮೆ ಆಗುವುದು' ಅಂದುಕೊಂಡ.

ಇದೇ ಮಾನಸಿಕ ಸ್ಥಿತಿಯಲ್ಲಿ ತನ್ನ ಗುಡಿಸಲಿಗೆ ಬಂದ. ಅಕ್ಕಪಕ್ಕದ ಗುಡಿಸಲುಗಳಲ್ಲೆಲ್ಲ ಆಗಲೆ ಜನ ಮಲಗಿಯಾಗಿತ್ತು. ಗುಡಿಸಲಿನ ಬಾಗಿಲನ್ನು ತಳ್ಳಿ ಮೂಲೆಯಲ್ಲಿದ್ದ ದೀಪವನ್ನು ಉರಿಸಿದ. ಮೊದಲ ಸಲ ತನ್ನ 'ಮನೆ'ಯನ್ನು ನೋಡುತ್ತಿದ್ದೇನೇನೊ ಅನ್ನುವಂತೆ ನೋಡಿ ಇದು ಇಷ್ಟು ಚಿಕ್ಕದೆ ಎಂದು ಅಚ್ಚರಿಪಟ್ಟ. ಇಷ್ಟು ಚಿಕ್ಕ ಸ್ಥಳದಲ್ಲಿ ತಾನು ತನ್ನ ಇಬ್ಬರು ಹೆಂಡಂದಿರೊಡನೆ ಇದ್ದೇನೆಯೇ ಅಂದುಕೊಂಡ. ಇಷ್ಟು 'ಸಣ್ಣ ಕೃಪೆಗೆ' ಹಿಲ್ ತಾನೇನೊ ಘನಂದಾರಿ ಸಹಾಯ ಮಾಡಿದಂತೆ ಬೀಗುತ್ತಾಳಲ್ಲ ಅಂದುಕೊಂಡ.

'ಚೆನ್ನಾಗಿವೆಯಲ್ಲ?' ಹಿಲ್‌ಳ ಮಾತು ಆತನ ಕಿವಿಯಲ್ಲಿ ಮಾರ್ದನಿಸುತ್ತಿತ್ತು. ತನ್ನ ಮನೆಗೆ ಬರುತ್ತಿದ್ದ ಇತರ ಬಿಳಿಯರನ್ನು ಗುಡ್ಡದ ತುದಿಯವರೆಗೆ ಕರೆದುಕೊಂಡುಬಂದು ಮೂಲನಿವಾಸಿಗಳಿಗೆ ತಾನು ಮಾಡಿಕೊಟ್ಟಿದ್ದ ಈ 'ಅನುಕೂಲ' ಗಳನ್ನು ಅವರಿಗೆ ತೋರಿಸುತ್ತ ಈ ರೀತಿ ಕೇಳುತ್ತಿದ್ದಳವಳು!

ಅದನ್ನು ನೆನಪಿಸಿಕೊಳ್ಳುತ್ತಿದ್ದಂತೆ ಜಾರ್ಜ್‌ನ ಮುಖದ ಮೇಲೆ ವಿಚಿತ್ರವಾದ ಮುಗುಳ್ನಗೆಯೊಂದು ಅರಳಿತು. 'ಆಯ್ತು– ಮೇಮ್ ಸಾಬ್–ನಿಮ್ಮ ಈ ಕೃತ್ಯಗಳಿಗೆಲ್ಲ ಇಂದೇ ಕೊನೆ–' ಅಂದ. ತನ್ನ ತಂದೆಯ ವಿನಾಕಾರಣ ಸಾವಿನ ಸೇಡನ್ನೂ ಆತನಿಗೆ [illegible] [illegible] ಮಕ್ಕಳು ಈ ದಿನ ಮನೆಯಲ್ಲಿರದಿದ್ದದು ಒಳ್ಳೆಯದೇ ಆಯ್ತು– ಅಂದುಕೊಂಡ.



'ಇನ್ನು ಸ್ವಲ್ಪ ಹೊತ್ತಿಗೆ ಆ ವಿಧ್ವಂಸಕರ ಗುಂಪು ಬರುವುದು. ನಾನೇ ಅವರನ್ನು ಹಿಲ್‌ಳ ಮನೆಗೆ ಕರೆದುಕೊಂಡು ಹೋಗುವೆ. ವಿಶ್ವಾಸಘಾತವೆ? ಇರಲಿ, ಪರವಾಗಿಲ್ಲ, ಹಿಲ್ ಸಾಯುವುದು ಬಹಳ ಅವಶ್ಯಕ...' ಜಾರ್ಜ್‌ನ ವಿಚಾರ ಹರಿಯುತ್ತಿದ್ದಂತೆ ಗೂಬೆ ಇನ್ನೊಮ್ಮೆ ಕೂಗಿತು. ಪ್ರತಿಸಾರೆಗಿಂತಲೂ ಈ ಸಲ ಕರ್ಕಶವಾಗಿ ಕೂಗಿದಂತಿತ್ತು. 'ಹೌದು – ಇದು ಖಂಡಿತವಾಗಿಯೂ ಅವಳ ಸಾವಿನ ಸೂಚನೆ.' ಒಂದು ಕ್ಷಣ ಜಾರ್ಜ್ ಕಳೆದ ಹತ್ತು ವರ್ಷಗಳನ್ನು ಜ್ಞಾಪಿಸಿಕೊಂಡ. ಹಿಲ್ ದಂಪತಿಗಳು ಅದೆಷ್ಟು ಅನ್ಯೋನ್ಯವಾಗಿದ್ದರು! ಯಜಮಾನರು ಸತ್ತ ಸುದ್ದಿ ತಿಳಿದ ಮೇಮ್‌ಸಾಬ್ ಆಘಾತದಿಂದ ಕುಸಿದೇಬಿಟ್ಟಿದ್ದಳು. ಆ ಒಂದು ಕ್ಷಣದಲ್ಲಿ ಅವಳು ಬಿಳಿಯಳು ಅನ್ನುವುದು ಇಬ್ಬರಿಗೂ ಮರೆತುಹೋಗಿತ್ತು. ಒಬ್ಬ ಮನುಷ್ಯನಾಗಿ ಅವಳಿಗೆ ಸಂತೈಸಿದ್ದ. ಇನ್ನು ಆ ಎರಡು ಮಕ್ಕಳು.... ತನ್ನ ಕಣ್ಮುಂದೆ ಬೆಳೆದವುಗಳು. ಹಿಲ್ ದಂಪತಿಗಳ ಎರಡು ಕಣ್ಣುಗಳಂತೆ! ಅದೆಷ್ಟು ಪ್ರೀತಿ ಆ ಮಕ್ಕಳೆಂದರೆ. ಮೇಮ್‌ಸಾಬಳಿಗಂತೂ ಆ ಮಕ್ಕಳೆಂದರೆ ಪ್ರಾಣ. ಇಂಗ್ಲೆಂಡಿನಲ್ಲೊ – ಅದೆಲ್ಲೋ,– ಅವೆರಡನ್ನು ತಾಯಿ– ತಂದೆ ಇಲ್ಲದವರಂತೆ ಜಾರ್ಜ್ ಜ್ಞಾಪಿಸಿಕೊಂಡ.

ಅದೇ ಕ್ಷಣದಲ್ಲಿ ಜಾರ್ಜ್‌ಗೆ ಒಂದು ನಿಶ್ಚಿತವಾದ

ಸತ್ವದ ಅರಿವಾಯ್ತು. ತನ್ನಿಂದ ಇನ್ನು ಈ 'ಕಾರ್ಯ' ಆಗದು ಎಂದು. ಹಿಲ್ ಆತನ ಕಲ್ಪನೆಯಲ್ಲಿ ಹೆಣ್ಣಾಗಿ, ತಾಯಿಯೊಬ್ಬಳಾಗಿ ಮಾರ್ಪಾಡಾಗಿ ಘನೀಕೃತವಾಗಿ ಬಿಟ್ಟಿದ್ದಳು ಒಂದೇ ಗಳಿಗೆಯಲ್ಲಿ! ಹೆಣ್ಣುಮಗಳೊಬ್ಬಳನ್ನು, ತಾಯಿಯೊಬ್ಬಳನ್ನು ಕೊಲ್ಲುವುದು ಅವನಿಂದ ಸಾಧ್ಯವಿರಲಿಲ್ಲ. ತನ್ನಲ್ಲಿಯ ಈ ಬದಲಾವಣೆಗೆ ಆತ ಚಕಿತನಾದ. ಪ್ರಯತ್ನಪಟ್ಟು ಅವಳನ್ನು ಒಬ್ಬಳು 'ಬಿಳಿಯಳು' ಮಾತ್ರ ಎಂದು ನೋಡುವ ವಿಫಲಯತ್ನ ಮಾಡಿದ. ಊಹೂಂ ಅದು ಅವನಿಂದ ಸಾಧ್ಯವಾಗಲಿಲ್ಲ. ಇಂದಿನವರೆಗೆ ಹಿಲ್‌ಳನ್ನು ಈಗ ಯೋಚಿಸಿದ ದೃಷ್ಟಿಯಲ್ಲಿ ನೋಡೇ ಇರಲಿಲ್ಲ. ಇಂದು ಈ ಕ್ಷಣದಲ್ಲಿ ಅವಳು ಬೇರೆಯವಳಾಗೇ ಕಂಡಳು. ಆದರೂ ಅವಳಲ್ಲಿ ಯಾವ ಬದಲಾವಣೆ ಆಗದೆಂಬ ಸಂಗತಿಯೂ ಆತನಿಗೆ ಅಷ್ಟೇ ಖಚಿತವಾಗಿ ಗೊತ್ತಿತ್ತು. ತಾನು ಮಾತ್ರ ಇಂದಿನಿಂದ ಒಡೆದ ವ್ಯಕ್ತಿತ್ವ ಎಂಬ ಅರಿವು ಆತನಿಗಾಯ್ತು. ಬಹುಶಃ ತಾನು ಇನ್ನು ಹೀಗೇ ಇರಬೇಕಾಗಬಹುದೇನೊ. ಈ ಹತ್ತು ವರ್ಷಗಳ ಸಂಬಂಧವನ್ನು ಹೀಗೆ ಒಂದೇ ಕ್ಷಣದಲ್ಲಿ ಕತ್ತರಿಸಿಹಾಕುವುದು ಆತನಿಗೆ ಬಹಳ ದುಸ್ತರವಾಗಿ ಕಂಡಿತು. ಈ ಜಗತ್ತಿನಲ್ಲಿ ಇಂಥ ಅನ್ಯಾಯಗಳೇ ಇರದಿದ್ದರೆ, ಈ ಕಪ್ಪು-ಬಿಳಿ ಜನರ ವೈಷಮ್ಯವೇ ಇರದೆ ಹೋಗಿದ್ದರೆ, ಇಂದಿನ ಈ ಪರಿಸ್ಥಿತಿ ಎದುರಾಗುತ್ತಲೇ ಇರಲಿಲ್ಲವಲ್ಲ ಎಂದುಕೊಂಡ.

ಆದರೆ ಈಗ ತಾನೇನು ಮಾಡಬೇಕು? ಗೊಂದಲದಲ್ಲಿ ತನ್ನ ಹಾಸಿಗೆಯಲ್ಲಿ ಹಾಗೇ ಎದ್ದುಕುಳಿತ. ಮೇಮ್‌ಸಾಬಳೂ ಒಬ್ಬ ಮನುಷ್ಯಳು ಎಂದು ಯೋಚನೆ ಮಾಡಿರಲಿಲ್ಲವಲ್ಲ – ಎಂದುಕೊಂಡ; ಅದೂ ಅಲ್ಲದೆ ಎರಡು ಕಂದಮ್ಮಗಳಿರುವ ತಾಯಿಯನ್ನು ಕೊಲ್ಲುವುದು ಆತನ ಕಲ್ಪನೆಯಾಚೆಯದಾಗಿತ್ತು.

ಗುಡಿಸಲಿನಿಂದ ಹೊರಬಂದು ಕ್ಷಣ ಸುತ್ತಲೂ, ಮತ್ತೆ ಆಕಾಶದೆಡೆಗೆ ದೃಷ್ಟಿ ಹರಿಸಿದ. ನಕ್ಷತ್ರಗಳೂ ಕುತೂಹಲದಿಂದ ಈತನ ನಿರ್ಧಾರವನ್ನೇ ಎದುರು ನೋಡುತ್ತಿವೆಯೇನೊ ಎಂದು ಭಾಸವಾಗಿ ಫಕ್ಕನೆ ನಕ್ಕುಬಿಟ್ಟ, ತನ್ನ ವಿಚಾರಕ್ಕೆ. ಮರುಕ್ಷಣವೆ ದೃಢ ಮನಸ್ಸಿನಿಂದ ಮೇಮ್‌ಸಾಬ್‌ಳ ಮನೆಯ ಕಡೆಗೆ ದಾಪುಗಾಲು ಹಾಕಲು ಆರಂಭಿಸಿದ. 'ಏನಾದರೂ ಆಗಲಿ ಅವಳನ್ನು ಇಂದು ರಕ್ಷಿಸಲೇ ಬೇಕು.' ಹೌದು... ಇನ್ನು ಹೆಚ್ಚು ಸಮಯವೂ ಇಲ್ಲ. ಆ ಗುಂಪಿನವರು ಯಾವ ಗಳಿಗೆಯಲ್ಲೂ ಬರಬಹುದು.

ಮೇಮ್‌ಸಾಬಳನ್ನು ಉಳಿಸುವ ಒಂದೇ ಉದ್ದೇಶದಿಂದ ಆತ ಓಡಲಾರಂಭಿಸಿದ. ಓಡುತ್ತಿದ್ದಂತೆ ಇನ್ನೂ ಎಷ್ಟೋ ಹೆಜ್ಜೆಗಳ ಶಬ್ದ ಕೇಳಿಸಿದಂತಾಗಲು, ಒಂದು ಕ್ಷಣ ತಡೆದು ಕಿವಿಗೊಟ್ಟು ಕೇಳಿದ. ವಿಧ್ವಂಸಕರ ಗುಂಪು ಬರುತ್ತಿದೆಯೆಂಬ ವಿಷಯದಲ್ಲಿ ಯಾವ ಅನುಮಾನವೂ ಉಳಿಯಲಿಲ್ಲ. ಆತ ಇನ್ನೂ ಜೋರಾಗಿ ಓಡಲಾರಂಭಿಸಿದ; ಮಾನವೀಯತೆಯ ರಕ್ಷಣೆಗಾಗಿ; ತಾಯಿಯೊಬ್ಬಳ ರಕ್ಷಣೆಗಾಗಿ. ಈ 'ಜನ' ತನ್ನನ್ನು ಏನು ಮಾಡಿಯಾರು? ಹೆಚ್ಚೆಂದರೆ ಕೊಂದಾರು ಅಷ್ಟೆ! ಆತ ಅದಕ್ಕೆ ಸಿದ್ಧನಾಗಿದ್ದ. ಓಡಿದುದರಿಂದ ಆತನ ಏದುಸಿರೂ ಹೆಚ್ಚಾಯ್ತು. ಯಾವುದನ್ನೂ ಲೆಕ್ಕಿಸದೆ ಮೇಮ್‌ಸಾಬಳ ಮನೆಯನ್ನು ತಲುಪಿ ''ಮೇಮ್‌ಸಾಬ್... ಮೇಮ್‌ಸಾಬ್...'' ಎಂದು ಕೂಗುತ್ತಾ ಬಾಗಿಲು ತಟ್ಟಿದ.

ಹಿಲ್ ಇನ್ನೂ ಮಲಗಿರಲಿಲ್ಲ. ತನ್ನ ಹಾಸಿಗೆಯಲ್ಲಿಯೆ ಏನೋ ಯೋಚಿಸುತ್ತ ಕುಳಿತಿದ್ದಳು. ಅಂದು ಮಧ್ಯಾಹ್ನ ತನ್ನ ಸ್ನೇಹಿತೆಯರು ಹೋದ ಮೇಲೆ ಅವಳು ವಿಚಿತ್ರವಾದ ಮನಸ್ಥಿತಿಯಲ್ಲಿ ಇದ್ದಳು. ರಾತ್ರಿ ಜಾರ್ಜ್ ಮನೆಗೆ ಹೋದ ಮೇಲೆ ಬೀರುವಿನಿಂದ ಪಿಸ್ತೂಲನ್ನು ಹೊರತೆಗೆದು, ತಾನೂ ತನ್ನ ರಕ್ಷಣೆಗೆ ಸಿದ್ಧಳಿದ್ದರಾಯ್ತು ಎಂದು ಕೊಂಡಿದ್ದಳು. ಇಂಥ ಸಮಯದಲ್ಲೇ ತನ್ನ ಗಂಡನಿಲ್ಲವಲ್ಲ ಎಂದು ಕಳವಳಿಸಿದಳು. ಈ ಹೊತ್ತಿನಲ್ಲೇ ತಾವು ಇಲ್ಲಿಗೆ ಬಂದು ನೆಲೆಸಿದಾಗಿನಿಂದ ಇಂದಿನವರೆಗಿನ ಘಟನೆಗಳನ್ನೆಲ್ಲ ನೆನಪಿಸಿಕೊಂಡಳು. ಈ ಮೂಲನಿವಾಸಿಗಳಿಗೆ ತಾವು ಏನೆಲ್ಲ ಸಹಾಯ ಮಾಡಿಲ್ಲ ! ಹಾಗೆ ನೋಡಿದರೆ ಅವರೆಲ್ಲ ತಮಗೆ ನಿಜವಾಗಿಯೂ ಯಾವಾಗಲೂ ಕೃತಜ್ಞರಾಗೇ ಇರಬೇಕು. ಆದರೂ ಈ ಜನ ಗ್ಯಾರಸ್ಟೋನ್ ದಂಪತಿಗಳನ್ನು ಕೊಂದ ಪರಿ ಅವಳಿಗೆ ಅರ್ಥವಾಗಿರಲಿಲ್ಲ. ಈಗ ಮನೆಯಲ್ಲಿ ತಾನೂ ಒಬ್ಬಳೇ ಎಂಬ ಅಳುಕು ಒಮ್ಮೆಲೆ ಜಾಗೃತವಾಯ್ತು. ನಾಳೆ ನೈರೋಬಿಗೆ ಹೋಗಿ ಬಂಧುಗಳಲ್ಲಿ ಕೆಲದಿನ ಇದ್ದು ಬಂದರಾಯ್ತು ಅಂದುಕೊಂಡಳು. ತಕ್ಷಣ ಅವಳಿಗೆ ತನ್ನ 'ಹುಡುಗ'ರ ನೆನಪಾಯ್ತು ; ಅದರೊಂದಿಗೇ ಜಾರ್ಜ್‌ನ ನೆನಪೂ ಆಯ್ತು. 'ವಿಚಿತ್ರ ಹುಡುಗ' ಆತನಿಗೆ ಎಷ್ಟು ಜನ ಹೆಂಡಿರು–ಮಕ್ಕಳೊ? ಇಂದಿನವರೆಗೆ ಆತನ ಈ ವ್ಯಕ್ತಿತ್ವ ಕುರಿತು ಯೋಚಿಸಿಯೇ ಇರದಿದ್ದಕ್ಕೆ ಅಚ್ಚರಿಪಟ್ಟಳು. ಆತ ತನ್ನಲ್ಲಿಯ ಕೆಲಸದ 'ಹುಡುಗ' ಎಂದಷ್ಟೆ ಅಂದು ಕೊಂಡಿದ್ದಳು. ಆದರೆ ಆತ ತುಂಬು ಸಂಸಾರಸ್ಥ. –ಛೇ – ತಾನು ಎಂತಹವಳು, ಇದನ್ನು ಯೋಚಿಸಿಯೂ ಇಲ್ಲ. ಇನ್ನು ಮುಂದೆ ಹೀಗಾಗದು ಅಂದುಕೊಂಡಳು.

ಅದೇ ಕ್ಷಣದಲ್ಲಿ 'ಮೇಮ್‌ಸಾಬ್.... ಮೇಮ್‌ಸಾಬ್...' ಹೊರಗಡೆ ಬಾಗಿಲನ್ನ ಧಡ ಧಡ ಬಡಿಯುವ ಶಬ್ದವಾಯ್ತು. ಹೌದು, ಸಂದೇಹವೇ ಇಲ್ಲ ; ಇದು ತನ್ನ 'ಹುಡುಗ' ಜಾರ್ಜ್‌ನ ಧ್ವನಿಯೇ ಆಗಿತ್ತು. ಒಂದೇ ಕ್ಷಣದಲ್ಲಿ ಅವಳ ದೇಹ ಭಯದಿಂದ ಕಂಪಿಸಿತು ; ಮೂಲೆಮೂಲೆಯಿಂದ ಬೆವರು ಸುರಿಯಲಾರಂಭಿಸಿತು. ಇದು ತನ್ನ ಕೊನೆಯ 'ಗಳಿಗೆ' ಎಂಬ ವಿಚಿತ್ರ ಭಯಕ್ಕೆ ಮೊದಲಾಯ್ತು. ತನ್ನ 'ಹುಡುಗ' ಜಾರ್ಜ್‌ನೆ ಇವರನ್ನೆಲ್ಲ ಕರೆದುಕೊಂಡು ಬಂದಿದ್ದಾನೆ. ಅವಳಿಗೆ ತಕ್ಷಣ ಗ್ಯಾರಸ್ಟೋನ್ ದಂಪತಿಗಳ ನೆನಪಾಯ್ತು. ಆ ಕ್ಷಣದಲ್ಲಿ ತಾನು ತುಂಬ ದುರ್ಬಲಳು ಅನ್ನಿಸಲಾರಂಭಿಸಿತು.

ಮರುಕ್ಷಣದಲ್ಲೇ ತನಗೆ ತಾನೇ ಧೈರ್ಯ ತಂದುಕೊಂಡಳು. ತಾನು ಒಬ್ಬಂಟಿ ನಿಜ; ಆದರೆ ಹೇಡಿಯಂತೆ ಸಾಯಬಾರದು. ತನ್ನಲ್ಲಿಯೂ ಪಿಸ್ತೂಲು ಇದೆ ಎಂದು ಧೈರ್ಯ ತಂದುಕೊಂಡು, ಒಂದು ಕೈಯಲ್ಲಿ ಪಿಸ್ತೂಲು ಹಿಡಿದು, ಇನ್ನೊಂದು ಕೈಯಿಂದ ಬಾಗಿಲು ತೆಗೆದವಳೆ, ಗುಂಡು ಹಾರಿಸಿಬಿಟ್ಟಳು. ಮರುಕ್ಷಣವೆ ತಲೆಸುತ್ತು ಬಂದಂತಾಗಿ 'ಬನ್ನಿ, ಬನ್ನಿ, ನನ್ನನ್ನು ಕೊಂದುಹಾಕಿರಿ–' ಎಂದು ಅರಚುತ್ತ ಕುಸಿದುಬಿದ್ದಳು. ಆದರೆ ಕೊಂದದ್ದು ತಾನು ಎನ್ನುವ ಅರಿವು [illegible] ಇರಲಿಲ್ಲ. ತನ್ನನ್ನು ಉಳಿಸ ಬಂದವನನ್ನು ತಾನು ಕೊಂದು ಹಾಕಿದ್ದು ಆ ಕ್ಷಣದಲ್ಲಿ ಅವಳಿಗೆ ಗೊತ್ತೇ [illegible]. ಜಾರ್ಜ್ ಸತ್ತುಬಿದ್ದಿದ್ದ.

+ + +

ಮರುದಿನ ಪೇಪರುಗಳಲ್ಲೆಲ್ಲಾ ಇದೇ ಸುದ್ದಿಯೇ! ಒಬ್ಬ ಧೀರಮಹಿಳೆ ಏಕಾಂಗಿಯಾಗಿ ನಲವತ್ತುಜನ ವಿಧ್ವಂಸಕರ ಗುಂಪನ್ನು ಎದುರಿಸಿದ್ದಷ್ಟೇ ಅಲ್ಲ ಒಬ್ಬನನ್ನು ಕೊಂದಳು ಸಹ ಎನ್ನುವುದೆ ಸುದ್ದಿ. ಹಿಲ್‌ಳ ಸ್ನೇಹಿತೆಯರಂತು ಅವಳನ್ನು ಮನಸ್ಸೀ ಅಭಿನಂದಿಸಿದರು.

'ನೋಡು–ನಾವು ನಿನ್ನೆಯೆ ಹೇಳಲಿಲ್ಲವೆ ಈ ಜನರನ್ನ ನಂಬಲಾಗದು ಎಂದು,' ಎಂದು ಸ್ಟೆಲ್ಸ್ ತನ್ನನ್ನು ತಾನು ಸಮರ್ಥಿಸಿಕೊಂಡಳು.

ಹಿಲ್ ಮಾತ್ರ ಯಾವ ಮಾತನ್ನೂ ಆಡಲಿಲ್ಲ. ಜಾರ್ಜ್‌ನ ಸಾವು ಮಾತ್ರ ಅವಳಿಗೆ ನಿಗೂಢವಾಗ ತೊಡಗಿತ್ತು. ಕೊನೆಗೆ ವಿಷಾದದ ಧ್ವನಿಯಲ್ಲಿ 'ನನಗೇನೂ ಗೊತ್ತಾಗುತ್ತಿಲ್ಲ ; ಬಹುಶಃ ನಾನು ಜಾರ್ಜ್‌ನನ್ನು ಅರ್ಥ ಮಾಡಿಕೊಳ್ಳಲಿಲ್ಲ...' ಎಂದಿಷ್ಟೇ ಹೇಳಿದಳು.

'ಹೌದು.... ಹೌದು – ಅವನನ್ನು ನೀನು ಅರ್ಥಮಾಡಿಕೊಳ್ಳಲಿಲ್ಲ. ಈ ಜನರನ್ನು ಮೊದಲು ಬಾರು ಕೋಲಿನಿಂದ ·ಬಾರಿಸಬೇಕು' ಎಂದರು ಸ್ನೇಹಿತೆಯರಿಬ್ಬರೂ.

ಆದರೆ ಜಾರ್ಜ್ ನಿಜವಾಗಿಯೂ ಒಬ್ಬ ಹುತಾತ್ಮ ಎಂದು ಯಾರಿಗೂ ಗೊತ್ತಾಗಲೆ ಇಲ್ಲ. ಇದರೊಂದಿಗೆಯೆ ಹಿಲ್‌ಳು ಪಶ್ಚಾತ್ತಾಪದಿಂದ ಕುದಿಯುತ್ತಿದ್ದಳು ಎಂಬುದನ್ನು ಯಾರೂ ಕಲ್ಪಿಸಿಕೊಳ್ಳಲಿಲ್ಲ ಸಹ!

ಪ್ರಮೋದ ಮುತಾಲಿಕ
ನ್ಯಾಷನಲ್ ಕಾಲೇಜ್, ಬಸವನಗುಡಿ, ಬೆಂಗಳೂರು -೪

## ನೆಮ್ಮದಿಯ ನಾಳೆ ನಮ್ಮದು



ನೆತ್ತರಿನ [illegible]
ನಾಳೆಗಳು [illegible]
ಬೇಡ ನಮಗೆ ಬೇಡ ನಮಗ
'ನೆಮ್ಮದಿಯ ನಾಳೆ' 'ಪ್ರೀತಿಯ ಹಾಡುಗಳೇ'
ಬರಲಿ ಇರಲಿ.

– ರವಿಕುಮಾರ್ ಅಜ್ಜೀಪುರ

# ವಿ. ಸೀ. - ನೆನಪಿನ ತುಣುಕುಗಳು

*ವಿ. ಸೀತಾರಾಮಯ್ಯ ಎಂಭತ್ತನಾಲ್ಕನೆಯ ವಯಸ್ಸಿನಲ್ಲಿ 1983ರಲ್ಲಿ ಕಣ್ಮರೆಯಾದರು. ಇದೇ ಅಕ್ಟೋಬರ್ 2ರಂದು ಆ ಜ್ಞಾನನಿಧಿ, ಹಿರಿಯ ಸಾಹಿತಿ ಬದುಕಿದ್ದಿದ್ದರೆ ಅವರಿಗೆ ನೂರು ವರುಷ. ವಿ.ಸೀ. ಪ್ರಥಮತಃ ಅಧ್ಯಾಪಕ. ಕವಿ, ವಿಮರ್ಶಕ. ಗದ್ಯ, ವಿಮರ್ಶೆ, ನಾಟಕ, ಲಲಿತಪ್ರಬಂಧ, ಭಾಷಾಂತರ, ಹೀಗೆ ವಿವಿಧ ಸಾಹಿತ್ಯ ಪ್ರಕಾರಗಳಲ್ಲೂ ಅವರು ಮಾಡಿದ ಕೃಷಿ ಕನ್ನಡದ ಶ್ರೀಮಂತಿಕೆಯನ್ನು ಹೆಚ್ಚಿಸಿದೆ. ಇಂಗ್ಲಿಷ್ ಭಾಷೆ ಮತ್ತು ಸಾಹಿತ್ಯದಲ್ಲಿ ಅವರಿಗಿದ್ದ ಪ್ರೌಢಿಮೆ ಎಂತಹವರನ್ನೂ ಬೆರಗುಗೊಳಿಸುತ್ತದೆ. ಅರ್ಥಶಾಸ್ತ್ರದಲ್ಲಿ ಎಂ.ಎ. ಪದವಿ ಪಡೆದು ಕನ್ನಡದಲ್ಲಿ ಪ್ರಪ್ರಥಮವಾಗಿ ಅರ್ಥಶಾಸ್ತ್ರಕ್ಕೆ ಸಂಬಂಧಿಸಿದ ಎಷ್ಟೋ ಮೂಲಭೂತ ವಿಷಯಗಳನ್ನು ಪರಿಚಯಿಸುವ ''ಹಣ ಪ್ರಪಂಚ''ದ ಕರ್ತೃ ಅವರೇ. ಜೊತೆಗೆ ಬಂಗಾಳಿ, ತೆಲುಗು ಸಾಹಿತ್ಯಗಳ ಕುರಿತ ಅಸಾಧಾರಣ ಪಾಂಡಿತ್ಯ, ನಾಟ್ಯ, ಕರ್ನಾಟಕ ಮತ್ತು ಹಿಂದೂಸ್ತಾನಿ ಸಂಗೀತ ಪ್ರಕಾರಗಳು, ಚಿತ್ರಕಲೆ, ಶಿಲ್ಪಕಲೆ ಮತ್ತು ಯೂರೋಪಿಯನ್ ಶಾಸ್ತ್ರೀಯ ಸಂಗೀತ – ಇವೆಲ್ಲದರಲ್ಲಿಯೂ ಅವರಿಗಿದ್ದ ಆಳವಾದ ಜ್ಞಾನ ಅವರ ಬಹುಮುಖ ಪ್ರತಿಭೆಗೆ ಸಾಕ್ಷಿ. ಈ ಲೇಖನ ವಿ.ಸೀ. ಅವರ ಸಾಹಿತ್ಯ ಕೃತಿಗಳನ್ನು ವಿಮರ್ಶೆಗೆ ಗುರಿಮಾಡುವ ದೃಷ್ಟಿಯಿಂದ ಬರೆದಿದ್ದಲ್ಲ. ಅವರ ವ್ಯಕ್ತಿತ್ವಕ್ಕೆ ಇನ್ನೊಂದು ಮುಖವಿದೆ. ಅದು ಅವರ ಮಾನವೀಯತೆ, ಸಜ್ಜನಿಕೆ, ಸಹನೆ, ಕಷ್ಟ ಸಹಿಷ್ಣುತೆ, ಔದಾರ್ಯ, ಶುದ್ಧ ಅಂತಃಕರಣ, ಹಾಸ್ಯಪ್ರವೃತ್ತಿ, ಮಾತುಗಾರಿಕೆ........... ಹೀಗೆ...........! ಇದು ಆ ನಿಟ್ಟಿನಲ್ಲಿ ಅವರನ್ನು ಒಬ್ಬ ವ್ಯಕ್ತಿಯನ್ನಾಗಿ ನೋಡುವ ಒಂದು ಕಿರು ಪ್ರಯತ್ನ ಅಷ್ಟೆ.*

ವಿ.ಸೀ. ಸಂಜೆ ವಾಯುವಿಹಾರಕ್ಕೆ ಲಾಲ್ ಬಾಗ್ ಕಡೆ ಹೋಗುತ್ತಿದ್ದರು. ವಿ.ಸೀ.ಯವರಿಗೆ ದೋಸೆ ತಿನ್ನುವ ಚಪಲ ಜಾಸ್ತಿ. ಅವರು ಎಂ.ಟಿ.ಆರ್.ಗೆ ನುಗ್ಗದೆ ವಾಪಸ್ಸಾಗುತ್ತಿರಲಿಲ್ಲ. ಎಂದಿನಂತೆ ಒಂದು ಸಂಜೆ ವಿ.ಸೀ. ಲಾಲ್ ಬಾಗ್ ಗೆ ಹೋಗುತ್ತಿದ್ದಾಗ ಚಿತ್ರಶಿಲ್ಪಿ ವೆಂಕಟಪ್ಪನವರು ಎದುರಾದರು. ಅವರ ಮುಖದಲ್ಲಿ ಬೇಸರ ಎದ್ದು ಕಾಣುತ್ತಿತ್ತು. ಉಭಯ ಕುಶಲೋಪರಿ ಆದ ನಂತರ ವೆಂಕಟಪ್ಪನವರ ಬೇಜಾರಿಗೆ ಕಾರಣ ಗೊತ್ತಾಯಿತು. ''ಏನು ಸೀತಾರಾಮಯ್ಯ, ಅಪರೂಪಕ್ಕೆ ಒಂದು ದಿನ ಬಾಯಿ ಚಪಲ ತೀರಿಸಿಕೊಳ್ಳಬೇಕೂಂತ ದೋಸೆ, ಕಾಫಿಗೆ ಮಲ್ಲೇಶ್ವರದ ತುದಿಯಿಂದ ಬಂದರೆ ಇವತ್ತು ಎಂ.ಟಿ.ಆರ್.ಗೆ ರಜೆ'' ಎಂದರು. ''ಬನ್ನಿ ನೋಡೋಣ'' ಎಂದವರೇ ವಿ.ಸೀ. ಅಲ್ಲೇ ಸಮೀಪದಲ್ಲಿ ಎಂ.ಟಿ.ಆರ್. ಜಗಲಿ ಹತ್ತುತ್ತಿರುವಾಗಲೇ ಹೊಟೇಲಿನ ಯಜಮಾನ ಮೈಯ್ಯ ಭೆಟ್ಟಿಯಾಗಿ ಇಬ್ಬರನ್ನು ಒಳಗೆ ಬರಮಾಡಿಕೊಂಡು ''ಸಮಸ್ಯೆ'' ಅರ್ಥವಾಗಿ ತಾವೇ ಖುದ್ದಾಗಿ ನಿಂತು ಜಿಲೇಬಿ, ಮಸಾಲದೋಸೆ, ಕಾಫಿ ಮಾಡಿಸಿಕೊಟ್ಟು ಆತಿಥ್ಯ ನೀಡಿದರಂತೆ.

### ನನ್ನ ಮದುವೆಗೆ ಬಲವಂತ

ನನಗೆ ಸ್ವಲ್ಪ ವಯಸ್ಸಾಗಿದ್ದರೂ ಇನ್ನೂ ಮದುವೆ ಆಗಿರಲಿಲ್ಲ. ವಿ.ಸೀ. ನನ್ನನ್ನು ಕಂಡಾಗಲೆಲ್ಲ ತಡ ಏಕೆ ಎಂದು ಹಾಸ್ಯ ಮಾಡುತ್ತಿದ್ದರು. ಅನೇಕ ಬಾರಿ ಮದುವೆ, ಬಾಳ ಸಂಗಾತಿ, ವಿವಾಹ ಜೀವನ ಇವುಗಳ ಬಗ್ಗೆ ಹಲವಾರು ಭಾಷಣ ಬಿಗಿದದ್ದುಂಟು. ವಿಷಯ ಮುಂದುವರೆಯದಿದ್ದನ್ನು ನೋಡಿ ಹೌಹಾರಿದ್ದರು. ''ಏನ್ರೀ, ಇನ್ನೂ ಮನಸ್ಸು ಮಾಡಿಲ್ವೆ ? ಏನಪ್ಪಾ ನೀವು ? ಯಾಕೆ ತಡ ಮಾಡ್ತೀರ ? ಅಲ್ಲಾರಿ ಹೊಡೆಯಕ್ಕಾದರೂ, ಬೈಯೋಕ್ಕಾದರೂ ಒಬ್ಬಳು ಹೆಂಡತಿ ಇರಬೇಕು, ನೀವೇನು ಹೀಗೆ ಮಾಡ್ತೀರ ?'' ಅವರು ಹೀಗೆ ನನ್ನನ್ನು ಲೇವಡಿ ಮಾಡುತ್ತಿದ್ದರು.

ಒಂದು ಮಾತು, ವಿ.ಸೀ. ಹೀಗೆ ಹೇಳಿದರೆಂದು ಅವರಿಗೆ ಮಹಿಳೆಯರ ಮೇಲೆ ಈ ರೀತಿಯ ಅಭಿಪ್ರಾಯವಿತ್ತೇ ಎಂದು ಯಾರಾದರೂ ಹುಬ್ಬೇರಿಸಿದರೆ ಆಶ್ಚರ್ಯವೇನಿಲ್ಲ. ಆದರೆ ನಿಜ ಜೀವನದಲ್ಲಿ ಮಹಿಳೆಯರ ಕುರಿತು ಅಗಾಧವಾದ ಗೌರವ, ಕರುಣೆ, ಅನುಕಂಪ ಮತ್ತು ವಾತ್ಸಲ್ಯ ಭಾವನೆಗಳು ಅವರಿಗಿತ್ತು. ಅವರ ಕೃತಿಗಳಲ್ಲಿ ಹೆಣ್ಣು ಮಕ್ಕಳಿಗೆ ಗೌರವಸ್ಥಾನವನ್ನು ಮರೆಯದೆ ನೀಡುತ್ತಿದ್ದ ವಿ.ಸೀ. ನಮ್ಮ ಸಮಾಜದಲ್ಲಿ ಅನಾದಿಕಾಲದಿಂದಲೂ ಮಹಿಳೆಯರ ಮೇಲೆ ನಡೆಯುತ್ತಿದ್ದ ಕ್ರೌರ್ಯ, ದೌರ್ಜನ್ಯ, ಶೋಷಣೆಗಳನ್ನು ನೋಡಿ ಮಮ್ಮಲ ಮರುಗಿದ್ದಾರೆ. ''ಹೆಣ್ಣುಮಕ್ಕಳೇ ಬೆಳೆಸಿ ಬೆಳೆದವನು ನಾನು'' ಎಂದು ಆಗಾಗ ಹೇಳುತ್ತಿದ್ದ ವಿ.ಸೀ. ''ಅವರನ್ನು ಹೂವಿನಿಂದಲೂ ಹೊಡೆಯಬಾರದು'' ಎನ್ನುತ್ತಿದ್ದರು.

ನಾನು ಕಡೆಗೂ ಮದುವೆ ಆದೆ. ''ಯಾವತ್ತಾದರೂ ಇಬ್ಬರೂ ಮನೆಗೆ ಬನ್ನಿ'' ಎಂದಿದ್ದರು ವಿ.ಸೀ. ಅಂದೊಂದು ಸಂಜೆ ನಾವಿಬ್ಬರೂ ಹೋದಾಗ ಸ್ವಲ್ಪ ಬಿಡುವಾಗಿಯೇ ಇದ್ದ ವಿ.ಸೀ. ಅವರ ಮುಖದಲ್ಲಿ ಸಂತೋಷ. ಕಾಫಿ ತಿಂಡಿ ಆದ ನಂತರ ಹೊರಡುವ ವೇಳೆ. ಗೇಟಿನವರೆಗೂ ಬಂದ ವಿ.ಸೀ. ನನ್ನವಳನ್ನುದ್ದೇಶಿಸಿ ''ನೋಡಮ್ಮ ತಾಯಿ, ಚೆನ್ನಾಗಿ ನೋಡಿಕೊ ! At last the dog is belted'' ಎಂದಿದ್ದರು. ಇದು ಜರುಗಿದ್ದು 1979ರಲ್ಲಿ.

**ಎಸ್. ಸುರೇಂದ್ರ**

ಇಂದಿಗೂ ನಾನು ಒಂದು ರೀತಿಯ ಅಲೆಮಾರಿ. ಸೀತಾರಾಮಯ್ಯನವರು ಬದುಕಿದ್ದರೆ ಈ dog ಗೆ ಅದೆಷ್ಟು belt ಹಾಕಿಸುತ್ತಿದ್ದರೋ !

### ನಿಸರ್ಗ ಪ್ರೇಮ

ವಿ. ಸೀ. ಅವರ ಶ್ರೀಮತಿಯವರಿಗೆ ಅನಾರೋಗ್ಯವಾಗಿತ್ತು. ಹೊನ್ನಾವರದಲ್ಲಿನ ಮಲೆನಾಡು ವಿದ್ಯಾ ಸಂಸ್ಥೆಯ ಕಾಲೇಜಿನ ಪ್ರಾಂಶುಪಾಲರು ಆಗ. ಮಗ ರಾಮುವಿಗೆ ತಾಯಿಯನ್ನು ಬೆಂಗಳೂರಿನಿಂದ ಅಲ್ಲಿಗೆ ಕರೆದುಕೊಂಡು ಬರಬೇಕೆಂದು ಕರೆಬಂತು. ಅವರೊಡನೆ ನನಗೂ ಗೆಳೆಯ ಶ್ರೀಪಾದುವಿಗೂ ಹೊನ್ನಾವರಕ್ಕೆ ಹೋಗುವ ಅವಕಾಶ.

ಹೊನ್ನಾವರ ತಲುಪಿದ ನಂತರ ವಿ.ಸೀ. ಅವರಿಂದ ಊಟ ಉಪಚಾರ. ಮಧ್ಯಾಹ್ನ ವಿಶ್ರಾಂತಿ. ಸಂಜೆ ಅವರ ಸಲಹೆಯಂತೆಯೇ ಹತ್ತಿರವೇ ಇದ್ದ ಧಾರೇಶ್ವರ ಬೀಚಿಗೆ ಹೊರಟೆವು. ಅಂತಹ ಪ್ರಶಾಂತವಾದ ಕಡಲ ತೀರ ಬಹಳ ಅಪರೂಪ. ಪ್ರಕೃತಿ ವಿ. ಸೀ.ಅವರಿಗಾಗಿ ಸೃಷ್ಟಿಸಿತ್ತೇನೋ ! ಕಾರಂತರು, ಗೋಕಾಕ್, ಮಾಸ್ತಿ ಎಲ್ಲರೂ, ''ಸೀತಾರಾಮಯ್ಯ, ನಿಮಗೂ ಸಮುದ್ರ ತೀರಕ್ಕೂ ಏನೋ ನಂಟು ಇದೆ ಕಣ್ರಿ ! ಅಲ್ಲಿಗೆ ಬಂದಕೂಡಲೇ ಬೇರೆ ಜಗತ್ತಿಗೇ ದೌಡಾಯಿಸಿ ಬಿಡ್ತೀರಲ್ರಿ !'' ಎಂದು ಚುಡಾಯಿಸುತ್ತಿದ್ದರಂತೆ. ಅಂದು ಆದದ್ದು ಹಾಗೆಯೇ. ಸಮುದ್ರ ದಂಡೆಯ ಮರಳಿನಲ್ಲಿ ಕೈಯಾಡಿಸುತ್ತಾ ಕುಳಿತ ನಮಗೆ ಒಂದು ಹಬ್ಬ. ಮಾತಿಗೆ ಮಾತು ಬೆರೆತು ಅನೇಕ ವಿಷಯಗಳ ಕುರಿತ ವಿ. ಸೀ. ಅವರ ವಾಗ್ಝರಿ ಅರಳುವುದನ್ನು ನೋಡಿ ಮುಗ್ಧನಾದೆ.

ಕಾವ್ಯಮೀಮಾಂಸೆ, ಪ್ರಕೃತಿಯ ಸೊಬಗು, ಶೆಲ್ಲಿ, ಕೀಟ್ಸ್, ವರ್ಡ್ಸ್‌ವರ್ತ್, ವಿ. ಸೀ. ಅವರ ವಿಚಿತ್ರ ಅನುಭವಗಳು....... ಇನ್ನೂ ಏನೇನೋ ! ನನಗೆ ಚೆನ್ನಾಗಿ ನೆನಪಿದೆ. ಯಾವುದೋ ವಿಷಯವನ್ನು ಹೇಳುತ್ತಾ "anchor" ಎಂಬ ಪದಕ್ಕೆ ಕನ್ನಡದ ತರ್ಜುಮೆ ಸಿಗದೆ ಒಂದು ಕ್ಷಣ ಮಾತು ನಿಲ್ಲಿಸಿದರು. ಕೂಡಲೇ ನಾನು ''ಅದು, ಲಂಗರು ಅಲ್ಲವೆ ?'' ಎಂದೆ. ಮೆಚ್ಚಿ ''ಪರವಾಗಿಲ್ವೇ ನೀವು'' ಎಂದು ಮುಂದುವರೆಸಿದರು. ವಿಷಯ ಹೊರಳಿ ಸಂಗೀತಕ್ಕೆ ಬಂದಿತು. ಒಬ್ಬ ಇಟಲಿಯ ಹಾಡುಗಾರ (ಫೆಲಿನಿ ಇರಬೇಕು ಅವನ ಹೆಸರು) ಸಮುದ್ರದ ಅಲೆಗಳ ಘರ್ಜನೆಗೆ ದನಿಗೂಡಿಸಿ, ಸಂಗೀತದ ಅಭ್ಯಾಸ ಮಾಡುತ್ತಿದ್ದನೆಂದು ತಿಳಿಸುವಾಗ ಆತನದೊಂದು ಪ್ರಸಿದ್ಧವಾದ ಹಾಡೊಂದರ 5-6 ಸಾಲುಗಳನ್ನು ತಾವೇ ಹಾಡಿ ಉದಾಹರಿಸಿದರು. ಮರುಕ್ಷಣದಲ್ಲಿ ಭಾವಪರವಶರಾದಂತೆ ದಡದ ಅಂಚಿನಲ್ಲಿಯೇ ವಿ. ಸೀ. ಒಬ್ಬ ತಪಸ್ವಿಯಂತೆ ಬಹುದೂರ, ದೂರ ನಡೆದುಕೊಂಡು ಹೋದ ಚಿತ್ರ ಇನ್ನೂ ಮನಸ್ಸಿನಲ್ಲಿ ಹಚ್ಚಹಸುರಾಗಿ ಉಳಿದಿದೆ.

### ಆರೆಸ್ಸೆಸ್ ಬಗ್ಗೆ

ವಿ. ಸೀ. ಅವರ ಚಿಕ್ಕಪ್ಪನವರ ಮಗ ಸುಬ್ಬು ಪೊಲೀಸ್ ಹುದ್ದೆಯಲ್ಲಿದ್ದವರು. ರಾಷ್ಟ್ರೀಯ ಸ್ವಯಂಸೇವಕ ಸಂಘದೆಡೆ ಒಲವು ಜಾಸ್ತಿ. ಇದಕ್ಕೆ ತದ್ವಿರುದ್ಧ ವಿ. ಸೀ. ಮಾನವೀಯತೆ, ಕೋಮು ಸೌಹಾರ್ದ, ಯೋಜನಾಬದ್ಧ ಆರ್ಥಿಕ ಬೆಳವಣಿಗೆಗಳ ಚೌಕಟ್ಟಿನಲ್ಲಿ ಭಾರತದ ಭವಿಷ್ಯದ ಕನಸು ಕಂಡವರು. ನೆಹರೂ, ಅವರಿಗೆ ಅಚ್ಚುಮೆಚ್ಚು. ಹೇಳಬೇಕೆಂದರೆ ಲಿಬರಲ್ ಮನೋಭಾವ ಹೊಂದಿದ್ದವರು. ಸುಬ್ಬು-ವಿ. ಸೀ. ಸಂಭಾಷಣೆಯೆಂದರೆ ಅನಿವಾರ್ಯವಾಗಿ ರಾಜಕೀಯ ಬಂದೇ ಬರುತ್ತಿತ್ತು. ಅಂದಮೇಲೆ ಆರ್.ಎಸ್.ಎಸ್. ವಿಷಯ ಬರಲೇ ಬೇಕಲ್ಲವೇ. ಅಂತಹುದೇ ಒಂದು ಸಂದರ್ಭದಲ್ಲಿ ವಿ. ಸೀ. ಹೀಗೆ ಸಿಡಿದಿದ್ದರಂತೆ, ''ಸುಬ್ಬು ಹೋಗೋ, ಹೋಗೋ !, ಏನು, ಇವರು ಖಾಕಿ ಚಡ್ಡಿ ಹಾಕ್ಕೊಂಡು, ಲಟ್ಟಾ ಬೀಸ್ಬಿಟ್ರೆ ರಾಜ್ಯ ಆಳ್ಬಹಾಗಾಗುತ್ತೇ ?''

### ಉದಾರ ಸ್ವಭಾವ

ಬಡತನದಲ್ಲೇ ಬೆಳೆದ ವಿ. ಸೀ. ವಾರಾನ್ನ ಉಂಡು ಓದಿದವರು. ಅದರಿಂದಲೇ ಇನ್ನೊಬ್ಬರ ಕಷ್ಟ ಅವರಿಗೆ ಅರಿವಾಗುತ್ತಿತ್ತು. ಯಾವತ್ತೂ ಅವರು ಸಹಾಯಕ್ಕೆ ಮುಂದೆ ಬರುತ್ತಿದ್ದರು. ಅವರ ಸಮಕಾಲೀನರಾಗಿದ್ದ ಮತ್ತು ಆತ್ಮೀಯ ಗೆಳೆಯರಾಗಿದ್ದ ಪ್ರೊಫೆಸರ್ ಒಬ್ಬರಿಗೆ ಎಂಟು ಸಾವಿರ ರೂಪಾಯಿ ತುರ್ತಾಗಿ ಬೇಕಿತ್ತು. ವಿ. ಸೀ. ಅವರಿಗೆ ಕೇಳಿದರೆ ಇಲ್ಲ ಎನ್ನುತ್ತಾರೆಯೇ ? ಮನೆ ಒತ್ತೆ ಇಟ್ಟು ಮೈಸೂರು ಬ್ಯಾಂಕಿನಿಂದ ಸಾಲ ಪಡೆದು ಕೊಟ್ಟ ಹಣ ವರುಷಗಳು ಉರುಳಿದರೂ ವಾಪಸ್ ಬರಲಿಲ್ಲ. ಗೆಳೆಯರು ಕೊಡುವ ಸ್ಥಿತಿಯಲ್ಲೂ

ಇರಲಿಲ್ಲ. ಸಂಸಾರದ ಸಂಕಷ್ಟಗಳಲ್ಲಿ, ತಾಪತ್ರಯಗಳಲ್ಲಿ ಸಿಕ್ಕಿ ನರಳುತ್ತಿದ್ದ ವಿ.ಸೀ. ಸಂಕೋಚ ಸ್ವಭಾವದವರು. ಪದೇ ಪದೇ ಕೇಳಲು ಹಿಂದೇಟು, ಹಿಂಸೆ. ಬ್ಯಾಂಕಿನಲ್ಲಿ ಬಡ್ಡಿಯ ಮೇಲೆ ಬಡ್ಡಿ, ಗಗನಕ್ಕೇರುತ್ತಿದ್ದ ಸಾಲ. ಏತನ್ಮಧ್ಯೆ ಪ್ರೊಫೆಸರ್ ತೀರಿಕೊಂಡರು. ತಕ್ಷಣವೇ ಅವರ ಮನೆಗೆ ಧಾವಿಸಿದ ವಿ. ಸೀ. ದಿವಂಗತರ ಮಗನನ್ನು ಸಂತೈಸುತ್ತಾ ''ಸಮಾಧಾನ ತಂದುಕೊಳ್ಳಿ, ನಮ್ಮ ಕೈಲೇನಿದೆ. ಹಣಕ್ಕೆ, ಖರ್ಚಿಗೆ ಯೋಚನೆ ಮಾಡಬೇಡಿ, ನಾನಿದೀನಿ'' ಎಂದರಂತೆ. ಔದಾರ್ಯಕ್ಕೆ ಇನ್ನೊಂದು ಹೆಸರು ವಿ. ಸೀ. ಎಂತಲೇ ಹೇಳಬೇಕು.

ಅನಂತರದ ಕತೆ ಕೇಳಿ. ಮೈಸೂರು ಬ್ಯಾಂಕ್ ಸಾಲ ತೀರಿಸಲಾಗದೆ ಮನೆ ಹರಾಜಿಗೆ ಬಂದು ಅಂದಿನ ಬ್ಯಾಂಕಿನ ಅಧ್ಯಕ್ಷರಾಗಿದ್ದ ಶ್ರೀ ನಾರಾಯಣ ರೆಡ್ಡಿ ಅವರು ಹೊಸದಾಗಿ ಸಾಲ ಕೊಡಿಸಿ ವಿ. ಸೀ. ಅವರ ಮರ್ಯಾದೆ ಉಳಿಸಿದ್ದು ಬೇರೆ ಕಥೆ.

ಇದೆಲ್ಲಾ ಹೇಳುವುದಕ್ಕೆ ಕಾರಣ ಇಷ್ಟೆ. ಎರಡು ಮೂರು ದಿವಸಗಳ ನಂತರ ಲಾಲ್‌ಬಾಗಿನಲ್ಲಿ ಮಾತಿಲ್ಲದೆ ಸುಮ್ಮನೆ ಕುಳಿತಿದ್ದೆವು. ದಿಢೀರನೆ ಅವರು ಕೇಳಿದ ಪ್ರಶ್ನೆ. ''ಸಾಹಿತ್ಯದಲ್ಲಿ ಇಷ್ಟು ದಿವಸ ಅದೂ ಇದೂ ಮಾಡಿಕೊಂಡು ಕಾಲ ತಳ್ಳುತ್ತಿದ್ದೇನೆ. ಅದು ಬಿಟ್ಟು, ನನ್ನ ಜೀವನದಲ್ಲಿ ನನ್ನ ಸಾಧನೆ ಇನ್ನೇನಿದೆ ? ಅದರ ಬಗ್ಗೆ ನೀವೇನೆನ್ನುತ್ತೀರಿ ?'' ಒಂದೆರಡು ಕ್ಷಣ ಯೋಚಿಸಿದ ನಂತರ ನನ್ನ ಜವಾಬು ಹೀಗಿತ್ತು : "Apart from that, your main activity has been taking loans and repaying them promptly, ಅಷ್ಟೆ.'' ನನಗೆ ನನ್ನ ಉದ್ಧಟತನದ ಅರಿವಾಗಿತ್ತು. ಎಲ್ಲೆ ಮೀರಿದ್ದೆ. ಪ್ರಮಾದ ವಾಯಿತೆಂದು ತುಟಿ ಕಚ್ಚಿದೆ. ಒಂದು ಕ್ಷಣ ವಿ. ಸೀ. ನನ್ನತ್ತ ನೋಡಿ, ನಿಟ್ಟುಸಿರು ಬಿಟ್ಟು ನಕ್ಕರು. ನಂತರ ದೃಷ್ಟಿ ಬೇರೆಲ್ಲೋ ಹರಿಯಿತು. ಅವರ ಅಸಹಾಯಕತೆ, ನೋವು ಅಲ್ಲಿತ್ತು.



**ಹಿತವಚನ**

ಸಂದರ್ಭ ಒದಗಿದಾಗಲೆಲ್ಲಾ ಗಂಡು ಮಕ್ಕಳಿಗೆ, ''ನೋಡ್ರೋ, ಯಾರಾದರೂ ಸತ್ತರೆ, ಎಲ್ಲಾದರೂ ಸಾವು ಸಂಭವಿಸಿದರೆ ಮೊದಲು ಹೋಗಿ ಶವ ಸಂಸ್ಕಾರಕ್ಕೆ ಏನು ಬೇಕೋ ಎಲ್ಲಾ ಸಹಾಯವನ್ನೂ ಮಾಡಿ. ಹಣಕ್ಕೆ ಹಿಂದು ಮುಂದು ನೋಡಬೇಡಿ. ಇದೊಂದು ಸಮಾಜಸೇವೆ. ತಂದೆ ತಾಯಿ ಇರುವವರು ಸ್ಮಶಾನಕ್ಕೆ ಹೋಗಬಾರದು ಅನ್ನೊ ಮಡಿವಂತಿಕೆ ಬೇಡ. ಅರ್ಥವಿಲ್ಲ ಅವಕ್ಕೆಲ್ಲಾ'' ಎಂದು ಹೇಳುತ್ತಿದ್ದರು. ಇದು ಅವರು ಅಂದಿನ ಕಾಲದಲ್ಲೇ ಹೇಳುತ್ತಿದ್ದ ಮಾತು. ಈಗಲೂ ನೆನಪಿಸಿಕೊಳ್ಳುತ್ತಾರೆ ಅವರ ಮಕ್ಕಳು ಹೆಮ್ಮೆಯಿಂದ.

**ನಿಷ್ಠುರತೆ**

ದಿವಂಗತ ದೇವರಾಜ ಅರಸು ಅವರು ಮುಖ್ಯಮಂತ್ರಿ ಆಗಿದ್ದ ಕಾಲ. ಅರಸು ಅವರು ಕಾಲೇಜಿನಲ್ಲಿ ಇವರ ಶಿಷ್ಯರೂ ಕೂಡ. ವಿ. ಸೀ. ಅವರ ಕಟ್ಟಾ ಅಭಿಮಾನಿ ಬೇರೆ. ಅರಸು ಅವರ ೬೦ನೆಯ ಹುಟ್ಟು ಹಬ್ಬದ ಸಂದರ್ಭ ಅದು. ಶ್ರೀ ಸಿ.ವಿ.ಎಲ್.ಶಾಸ್ತ್ರಿ ಅವರು ಅದ್ದೂರಿಯ ಕಾರ್ಯಕ್ರಮ ಏರ್ಪಡಿಸಿ ವಿ. ಸೀ. ಅವರನ್ನು ಮುಖ್ಯ ಅತಿಥಿಯಾಗಿ ಬಂದು ಭಾಗವಹಿಸುವಂತೆ ಆಮಂತ್ರಣ ನೀಡಲು ಬಂದಿದ್ದರಂತೆ. ಅಂದಿನ ವಿ.ಸೀ. ಅವರ ಪ್ರತಿಕ್ರಿಯೆ ಇವತ್ತಿಗೂ ನಮ್ಮನ್ನು ನವಿರೇಳಿಸುತ್ತದೆ. ''ಶಾಸ್ತ್ರಿಗಳೇ, ದಿನನಿತ್ಯ ರಸ್ತೆಯಲ್ಲಿ ಹೋಗುವಾಗ ನೂರಾರು ಜನ ಬಡಬಗ್ಗರು ಸೀಮೆಎಣ್ಣೆಗೆ ಸಾಲಾಗಿ ಗಂಟೆಗಟ್ಟಲೆ ರಣ ಬಿಸಿಲಿನಲ್ಲಿ ನಿಂತು ರಣವಾಗ್ತಾರೆ. ಜನಸಾಮಾನ್ಯರ ಸಮಸ್ಯೆಗಳು ಉಲ್ಬಣಿಸುತ್ತಾ ಇವೆ. ಈ ಸ್ಥಿತಿಯಲ್ಲಿ ಅರಸು ಹುಟ್ಟು ಹಬ್ಬ ಆಚರಿಸಿಕೊಳ್ಳೋದು ಯಾವ ನ್ಯಾಯ ? ಒಂದು ಲಕ್ಷ ರೂಪಾಯಿ ಕೊಟ್ಟರೂ ನಾನು ಬರೊಲ್ಲ'' ಎಂದರು. ವಿ. ಸೀ. ಅವರ ಮಾತುಗಳು ಬಡಬಗ್ಗರ ಬಗ್ಗೆ ಅವರಿಗಿದ್ದ ಕಳಕಳಿ, ವ್ಯವಸ್ಥೆ ವಿರುದ್ಧ ಪ್ರತಿಭಟಿಸುವ ದಿಟ್ಟತನಗಳಿಗೆ ದಿಕ್ಸೂಚಿಯಂತಿದೆ.

**ಲೆನಿನ್ ಕುರಿತು**

ಕ್ರಾಂತಿಕಾರಿ ಲೆನಿನ್ ಶತಾಬ್ದಿ ೧೯೭೦ರಲ್ಲಿ. ಅದು ಭಾರತ-ಸೋವಿಯತ್ ಸಾಂಸ್ಕೃತಿಕ ಸಂಘ ಜನಪ್ರಿಯವಾಗಿದ್ದ ಕಾಲ. ಎಚ್. ಎ. ಎಲ್. ISCUS ಶಾಖೆಯಲ್ಲಿ ಲೆನಿನ್ ಜನ್ಮದಿನದ ವಿಜೃಂಭಣೆಯ ಕಾರ್ಯಕ್ರಮಕ್ಕೆ ಮುಖ್ಯ ಅತಿಥಿಯಾಗಿ ಬರಲು ವಿ.ಸೀ. ಅವರನ್ನು ಒಪ್ಪಿಸಿ ಕರೆದುಕೊಂಡು ಹೋದವರು ಡಾ|| ಜಿ. ರಾಮಕೃಷ್ಣ. ಲೆನಿನ್‌ನ ಕ್ರಾಂತಿಕಾರಿ ಜೀವನ, ಸೋವಿಯತ್ ಕ್ರಾಂತಿಯ ಮಹದೋದ್ದೇಶಗಳ ಬಗ್ಗೆ ಸ್ಫೂರ್ತಿಯುತವಾಗಿ ಮಾತನಾಡಿದ ವಿ. ಸೀ. ಅವರ ಲೆನಿನ್ ಬಗೆಗಿನ ಅಭಿಪ್ರಾಯ ಹೀಗಿತ್ತು, ''ನೋಡಿ ರಾಮಕೃಷ್ಣ, ಲೆನಿನ್ ಎಂತಹ ಅಪರೂಪದ ಮನುಷ್ಯ ! ಅವನೊಬ್ಬ ಧೀರ ಕಣ್ರೀ, ಗಂಡಸು ಅಂದರೆ ಅವನೇ.'' ಈ ಮಾತುಗಳನ್ನು ಜಿ. ಆರ್. ಈಗಲೂ ನೆನಪಿಸಿಕೊಳ್ಳುತ್ತಾರೆ.

**ಕರ್ನಾಟಕ ಏಕೀಕರಣ**

ಈ ಶತಮಾನದ ಪ್ರಾರಂಭದಲ್ಲಿಯೇ ಹರಿದು ಹಂಚಿಹೋಗಿದ್ದ ಕನ್ನಡನಾಡು ಒಂದಾಗಬೇಕೆನ್ನುವ ಕೂಗು ಅಲ್ಲಲ್ಲಿ ಕೇಳಿಬರುತ್ತಿತ್ತು. ಕನ್ನಡಿಗರು ಸಾಂಸ್ಕೃತಿಕವಾಗಿ ಒಂದುಗೂಡಬೇಕೆನ್ನುವ ಜಾಗೃತಿಯನ್ನು ಮೂಡಿಸಲು ಶ್ರಮಿಸಿದ ಮೊದಲಿಗರೆಂದರೆ ಬಿ.ಎಂ.ಶ್ರೀ, ಸರ್ ಮಿರ್ಜಾ, ಬೆಳ್ಳಾವೆ ಅವರು, ಡಿ.ವಿ.ಜಿ ಮುಂತಾದವರು. ಇವರುಗಳ ಸಾರಥ್ಯದಲ್ಲಿ ಸಾಹಿತ್ಯ ಪರಿಷತ್ ಉಂಟುಮಾಡಿದ ಈ ಪ್ರಕ್ರಿಯೆ, ನಾಡಿನ ಬೇರೆಡೆಯಲ್ಲಿಯೂ ಪ್ರತಿಧ್ವನಿಸಿತು. ದಕ್ಷಿಣ ಕನ್ನಡದಲ್ಲಿ ಪಂಜೆ ಮಂಗೇಶ ರಾಯರು, ಶಿವರಾಮ ಕಾರಂತರು, ಕಡಂಗೋಡ್ಲು ಶಂಕರಭಟ್ಟರು, ಹೈದರಾಬಾದ್ ಕರ್ನಾಟಕದಲ್ಲಿ ಡಾ|| ಹರಿಕರ್, ಧಾರವಾಡದಲ್ಲಿ ಆಲೂರು ವೆಂಕಟರಾಯರು, ಡೆಪ್ಯುಟಿ ಚೆನ್ನಬಸಪ್ಪ, ಮುದವೀಡು ಕೃಷ್ಣರಾಯರು, ಕಡಪ ರಾಘವೇಂದ್ರರಾವ್, ಹಳೆಯ ಮೈಸೂರಿನಲ್ಲಿ ಆಗಲೇ ಹೇಳಿದಂತೆ ಬಿ.ಎಂ.ಶ್ರೀ. ಮತ್ತಿತರರಲ್ಲದೆ, ಮಾಸ್ತಿ, ರಾಜರತ್ನಂ ನಾಡಿನ ಮೂಲೆ ಮೂಲೆಗೂ ಭೇಟಿ ನೀಡಿ ಏಕೀಕರಣ ಸಂದೇಶವನ್ನು ಸಾರಿದರು. ಈ ನಿಟ್ಟಿನಲ್ಲಿ ವಿ. ಸೀ. ಅವರ ಶ್ರಮವನ್ನು ಬಹುವಾಗಿ ಮೆಚ್ಚಿಕೊಂಡ ಬಿ.ಎಂ.ಶ್ರೀ ಅವರು "We shall be the living bridges across the Thungabhadra" ಎಂದು ಘೋಷಿಸಿದ್ದರಂತೆ. ಕರ್ನಾಟಕದ ಏಕೀಕರಣಕ್ಕಾಗಿ ವಿ. ಸೀ. ನೀಡಿದ ಕಾಣಿಕೆ ಸ್ಮರಣೀಯವಾದದ್ದು. ಇದು ಎಷ್ಟು ಕಡೆ, ಎಷ್ಟು ಜನಕ್ಕೆ ನೆನಪಿಗೆ ಬರುತ್ತದೆ ?

ಆಧುನಿಕ ಕನ್ನಡ ಸಾಹಿತ್ಯವು ಹೊಸ ಆಯಾಮಗಳನ್ನು ಕಂಡುಕೊಳ್ಳಬೇಕಾಗಿದ್ದ ಸಂದರ್ಭದಲ್ಲಿ ಬಿ.ಎಂ.ಶ್ರೀ ಅವರನ್ನು ಮೊದಲುಗೊಂಡು ಅನೇಕ ಸಾಹಿತಿಗಳು, ಭಾಷಾಭಿಮಾನಿಗಳು ಕನ್ನಡಕ್ಕೆ ಮೆರಗು ನೀಡಿದ್ದಾರೆ. ಭಾಷೆಯ ಸತ್ವವನ್ನು ಹೆಚ್ಚಿಸಿದ್ದಾರೆ. ಅವರಲ್ಲಿ ವಿ. ಸೀ. ಅವರಿಗೂ ಒಂದು ವಿಶಿಷ್ಟ ಸ್ಥಾನವಿದೆ. ತಮ್ಮ ಪಾಂಡಿತ್ಯ, ಬಹುಮುಖ ಪ್ರತಿಭೆ. ಸೂಕ್ಷ್ಮಜ್ಞತೆ, ಮನೋವೈಶಾಲ್ಯತೆಗಳ ಮೌಲ್ಯಗಳನ್ನು ವಸ್ತುವಾಗಿಸಿಕೊಂಡು ಅವರು ರಚಿಸಿರುವ ಕೃತಿಗಳಿಂದ ಕನ್ನಡಿಗರ ಮನಸ್ಸಿನಲ್ಲಿ ಬಹುಕಾಲ ಗಟ್ಟಿಯಾಗಿ ನೆಲೆಸುತ್ತಾರೆ. ಇನ್ನೂ ಗಟ್ಟಿಯಾಗಿ ನಿಲ್ಲುವುದು ಅವರ ಹೃದಯ - ಶ್ರೀಮಂತಿಕೆಯಿಂದ, ಸಜ್ಜನಿಕೆಯಿಂದ, ಒಳ್ಳೆಯತನದಿಂದ.

ಲೆನಿನ್ ಬಗೆಗಿನ ಕುರಿತ ಅವರ ಮೆಚ್ಚುಗೆಯಾಗಲಿ, 'ಕ್ರೋಧಕೇತನ' ಕವನದಲ್ಲಿ ಅವರು ಸಿಡಿಸಿರುವ ಕ್ರಾಂತಿಯ ಕಿಡಿಗಳಾಗಲಿ ಅವರ ವ್ಯಕ್ತಿತ್ವದ ಒಂದು ಮುಖವನ್ನು ಚಿತ್ರಿಸುತ್ತವೆ. ತಾವೇ ಹೇಳಿಕೊಳ್ಳುತ್ತಿದ್ದಂತೆ ಅವರು puritan ಅಲ್ಲ. ವಿಧಿ, ಪುನರ್ಜನ್ಮ, ಹಣೆಯಬರಹ ಇವುಗಳಲ್ಲಿ ನಂಬಿಕೆ ಇಲ್ಲವೆನ್ನುತ್ತಿದ್ದರು. ಅದೇ ಸಮಯದಲ್ಲಿ 'ಎಮ್ಮ ಮನೆಯಂಗಳದಿ' ಕವನದಲ್ಲಿದ್ದಂತೆ ತೀರ sentimental ಆಗಿರುತ್ತಿದ್ದ ವಿ. ಸೀ. ಅವರ ಕೃತಿಗಳಲ್ಲಿ ಒಂದು ರೀತಿಯ ಗೊಂದಲ, ಅಸಹಾಯಕತೆಗಳನ್ನೂ ನೋಡುತ್ತೇವೆ. ಒಟ್ಟಿನಲ್ಲಿ ಅವರದು ಒಂದು ಸಂಕೀರ್ಣ ವ್ಯಕ್ತಿತ್ವ. ಆದ್ದರಿಂದಲೇ ಅವರು ಕನ್ನಡಿಗರಿಗೆ ಹತ್ತಿರವಾಗುತ್ತಾರೋ ಏನೋ !

ಜಾನ್‌ಸನ್‌ಗೆ ಬಾಸ್‌ವೆಲ್ ಇದ್ದಂತೆ ವಿ. ಸೀ. ಅವರಿಗೊಬ್ಬ ಬಾಸ್‌ವೆಲ್ ಇದ್ದಿದ್ದರೆ ಬಹುಶಃ ಅವರ ಬದುಕಿನ ಇನ್ನೂ ಹಲವಾರು ವಿವರಗಳು ನಮಗೆ ಲಭಿಸುತ್ತಿತ್ತೋ ಏನೋ !

ಎಸ್. ಸುರೇಂದ್ರ
ನಂ. ೨೪, ೧ನೇ ಅಡ್ಡರಸ್ತೆ ಕೆನರಾ ಬ್ಯಾಂಕ್ ಕಾಲೋನಿ, ಬೈರಸಂದ್ರ, ಜಯನಗರ ಪೂರ್ವ ಬೆಂಗಳೂರು ೫೬೦ ೦೧೧

# ಆ ನಮ್ಮ ಮೇಷ್ಟ್ರು

ವಿ. ಸೀ. ಎಂದೊಡನೆಯೆ ಬೆಚ್ಚನೆಯ ನೆನಪುಗಳು ಸುಮಾರು ೫೫ ವರ್ಷಗಳಷ್ಟು ಹಿಂದೆ ಬಹು ದೂರಕ್ಕೆ ಚಾಚಿ ೧೯೪೦ರ ನನ್ನ ಮಹಾರಾಜ ಕಾಲೇಜು ವಿದ್ಯಾರ್ಥಿ ದಿನಗಳು ಬೆಳ್ಳಂಬೆಳಕಾಗಿ ಕಣ್ಣ ಮುಂದೆ ಸುಳಿಯುತ್ತವೆ. ಎರಡನೆಯ ಬಿ.ಎ. ತರಗತಿಯಲ್ಲಿ ಅಶ್ವತ್ಥಾಮನ್ ಪಾಠ ಮಾಡುತ್ತಿದ್ದಾಗ ವಿ.ಸೀ. ಅವರು ಒಂದು ದಿನ (ಜೂನಿಯರ್ ಬಿ.ಎ. ಹಾಲ್‌ನಲ್ಲಿ) ಒಮ್ಮೆಲೆ ಕಣ್ಣೆತ್ತಿ ದೂರದ ದಿಗಂತದಲ್ಲಿ ಏನನ್ನೋ ಕಂಡವರಂತೆ ಗಂಭೀರವಾಣಿಯಲ್ಲಿ ಮೊಳಗಿದರು :

*Soft you ; a word or two before you go,*
*I have done The State some service, and they know't.*
*No more of that. I pray you, in your letters,*
*When you shall these unlucky deeds relate,*
*Speak of me as I am ; nothing extenuate,*
*Nor setdown aught in malice.....*

ಷೇಕ್ಸ್‌ಪಿಯರ್ ನಾಟಕದ ಪರಿಚಯವಿದ್ದ ನಮ್ಮಲ್ಲಿ ಹಲವರಿಗೆ ಮೈ 'ಜುಮ್ಮೆ'ನಿಸಿದ ಕ್ಷಣ. ಅದು. ಅವರು ವಾಚನ ಮಾಡುತ್ತಿದ್ದ 'ಶ್ರೀ' ಯವರ ನಾಟಕದ ಭಾಗ, ಅಶ್ವತ್ಥಾಮನ ಘೋರ ದುರಂತದ ಕೊನೆಯ ಮಾತುಗಳು.....

ನಿಶ್ಚಲಂ ನಿಂದುದೀ ಕಟುಕನ್, ನಂಬತಕ್ಕುದು-ಮಗ್ದು ಕೊಲ್ಲುಂ
ನ್ಯಾಯಮೇ ಪೊಳ್ತಿರಲ್ ನೆನೆಯಲ್ಕೆ.....
ಸಿದ್ಧಮ್ ಆಮ್ ಇರ್ವರುಂ. ಓ ರುದ್ರ-ಪ್ರಾರ್ಥಿಪುದು ಸಾವರ್‍ಗೆ ಧರ್ಮಂ ಎನೆಗೊಳ್ಳೆಯವನಾಗು.....

ಷೇಕ್ಸ್‌ಪಿಯರ್‌ನ ದುರಂತ ನಾಯಕ, ಒಥೆಲೋ, ತನ್ನ ಭೀಕರ ರಮ್ಯ ಬದುಕಿನ ಪ್ರಪಾತದ ತುದಿಯಲ್ಲಿ ನಿಂತು ಸಾವನ್ನು ಅಪ್ಪುವ ಮೊದಲು ತನ್ನ ತಾನು ಮಾಡಿದ ಪುಣ್ಯಪಾಪಗಳ ನ್ಯಾಯಾನ್ಯಾಯ ವಿಮರ್ಶೆ ನಡೆಸುವ ಸನ್ನಿವೇಶ ಒಂದು ಕಡೆ; ಇನ್ನೊಂದೆಡೆ ಅದಕ್ಕೆ ಸಂವಾದಿಯಾದ, ಅಶ್ವತ್ಥಾಮನ್‌ನ ಉತ್ಕಟ ವಿಪತ್ತಿನ ಸಂದರ್ಭ.... ಎರಡನ್ನೂ ತೂಗಿ ನೋಡುತ್ತ, ಸಾಮ್ಯ ವೈಷಮ್ಯಗಳನ್ನು ಗುರುತಿಸುತ್ತಾ, ಕನ್ನಡ ವಾಕ್ಯಗಳ ನಡುವೆ ಸುಂದರ ಇಂಗ್ಲಿಷ್ ವಾಕ್ಯ ನುಡಿಗಟ್ಟುಗಳನ್ನು ಹೆಣೆಯುತ್ತ ಚಿತ್ತಾರ ಬಿಡಿಸಿದಂತೆ ಅರ್ಧಗಂಟೆ ಕಾಲ ರುದ್ರನಾಟಕ ಕಾರನ ದುರಂತ ಕಾಣ್ಕೆ 'ಟ್ರ್ಯಾಜಿಕ್ ವಿಷನ್' ಪರಿಕಲ್ಪನೆಯನ್ನು ವಿ.ಸೀ. ವಿವರಿಸಿದ ಪರಿ ಅನಂತಕಾಲ ಅವಿಸ್ಮರಣೀಯ.

ವಿ.ಸೀ.ಯವರ ಮಾತಿನ, ಭಾಷಣದ, ಪಾಠ ಮಾಡುವ ಕ್ರಮವೇ ಅದಾಗಿತ್ತು. ಯಾರೋ ಹೇಳಿದರಂತೆ : ಅವರ ರೀತಿ ಒಂಟೆಯ ನಡಗೆಯ ಹಾಗೆ.. ಜಿರಾಫೆ ಹಾಗೆ : ಎತ್ತರದಲ್ಲಿ ಕತ್ತನ್ನು ಅತ್ತಿತ್ತ ಕೊಂಕಿಸುತ್ತ ಗಿಡದೆಲೆಗಳಿಗೆ ಬಾಯಿ ಹಾಕುತ್ತ ಮೆಲುಕು ಹಾಕುತ್ತಾ ಹೋಗುವ ದಾಪುಗಾಲಿನ ನಡಗೆ. ಅದಕ್ಕೆ ಅವರೇ ಪ್ರತ್ಯುತ್ತರ ಹೇಳಿದರಂತೆ : 'ಹೌದು : ನನ್ನದು ಒಂಟೆಯ ರೀತಿ. ಒಂಟೆ ಬೇಕೆನ್ನುವವರು ಅದರ ಡುಬ್ಬನ್ನೂ ಒಪ್ಪಿಕೊಳ್ಳಬೇಕು....' ಹೌದು. ಆಗ ವಿದ್ಯಾರ್ಥಿಗಳಾಗಿದ್ದ ನಮಗೆ ಅತ್ಯಂತ ಪ್ರಿಯವೆನಿಸುತ್ತಿದ್ದುದು ಒಂಟೆಗಿಂತ ಹೆಚ್ಚಾಗಿ ಅದರ 'ಡುಬ್ಬು' ! ವಿ.ಸೀ. ಅವರ ನಿರರ್ಗಳ, ಭಾವಪೂರ್ಣ ಮಾತಿನ ಹೊಳೆಯ ನಡುವೆ ಫಳಫಳನೆ ಫಕ್ಕನೆದ್ದು ಕಾಣುವ ಅಮೃತಶಿಲೆಗಳಂಥ, ''ಡುಬ್ಬುಗಳು'' (ಡೈಗ್ರೆಷನ್ಸ್) ವಿಷಯಾಂತರಗಳು. ಆಗವರ ಮಾತು ಒಮ್ಮೆ ಇತ್ತ ವರ್ಡ್ಸ್‌ವರ್ತ್‌ನ ಕಡೆಗೋ ಇನ್ನೊಮ್ಮೆ ಈಸ್ಕಿಲಿಸ್, ಕೀಟ್ಸ್, ಬ್ರೌನಿಂಗ್‌ನ ಕಡೆಗೋ, ಕಾಳಿದಾಸ-ಭವಭೂತಿಯರ ಕಡೆಗೋ ಸರಿದು, ಕೇಳುವವರ ಮೈಯಲ್ಲಿ ವಿದ್ಯುತ್ ಸಂಚಾರವಾದಂಥ ಅನನ್ಯ ಅನುಭವ.

ನನ್ನ ನೆನಪುಗಳು ಇನ್ನು ಸ್ವಲ್ಪ ಹಿಂದಕ್ಕೆ ಚಲಿಸಿದಾಗ : ೧೯೪೪-೪೫, ಆಗ ನಾನು ಸೀನಿಯರ್ ಇಂಟರ್ ಮೀಡಿಯಟ್ ವಿದ್ಯಾರ್ಥಿ. ಆಗ ತಾನೆ ವಿ.ಸೀ.



ಬೆಂಗಳೂರಿನಿಂದ ಮೈಸೂರಿಗೆ ವರ್ಗವಾಗಿ ಬಂದಿದ್ದರು. ಅವರೊಬ್ಬ ಅಸಾಧಾರಣ ರೀತಿಯ ಮೇಷ್ಟರೆಂಬ ಕೀರ್ತಿಯನ್ನು ಜತೆಯಲ್ಲಿ ಹೊತ್ತು ತಂದಿದ್ದರು. ನನಗೆ ಅವರ ಕ್ಲಾಸಿನಲ್ಲಿ ಕುಳಿತು ಪಾಠ ಕೇಳುವ ಮಹದಭಿಲಾಷೆ, ಅದಕ್ಕೂ ಮಿಗಿಲಾಗಿ, ಕುತೂಹಲ ಬೆರೆತ 'awe'. ನನ್ನ ದುರದೃಷ್ಟಕ್ಕೆ ಸರಿಯಾಗಿ ಅವರು, ನಾನಿದ್ದ 'ಸೆಕ್ಷನ್'ಗೆ ಪಾಠ ಮಾಡುವ ವ್ಯವಸ್ಥೆ ತಪ್ಪಿಹೋಗಿತ್ತು, ಎರಡು ಮೂರು ವಾರದೊಳಗೆ 'ಆ ಇನ್ನೊಂದು' ಸೆಕ್ಷನ್ ಸಹಪಾಠಿಗಳಿಂದ ಅವರನ್ನು ಕುರಿತ ಹೊಗಳಿಕೆ ನನ್ನ ಹೊಟ್ಟೆ ಉರಿಸಿತ್ತು, ನಾನು ಅವತ್ತು (ಅವರ ಅಪ್ಪಣೆ ಬೇಡದೆ, ವಯಸ್ಸಿಗೆ ತಕ್ಕ ಹುಚ್ಚು ಉಡಾಫೆಯಿಂದ) ಅವರ ತರಗತಿಗೆ ಹೋಗಿ ಮುಂದಿನ ಸಾಲಿನಲ್ಲೇ ಕುಕ್ಕರಿಸಿದೆ. ಅವರು ಪಾಠ ಹೇಳುತ್ತಿದ್ದುದು ನಮ್ಮೆಲ್ಲರಿಗೂ ಅತ್ಯಂತ ಪ್ರಿಯವಾದ ಜನ್ನನ 'ಯಶೋಧರ ಚರಿತ್ರೆ'. ತದೇಕಚಿತ್ತನಾಗಿ ವಿ.ಸೀ. ಅವರ ಮಾತಿನ ಧಾರೆಯ, ಯೋಚನಾ ಪ್ರವಾಹದ ರಭಸಕ್ಕೆ ನಿಬ್ಬೆರಗಾಗಿ ಕೂತಿದ್ದವನಿಗೆ, ಅವರು ನನ್ನನ್ನು ಗಮನಿಸಿ, ನಾನು ಆ ತರಗತಿಗೆ ಸೇರದ 'ಪರಕೀಯ'ನೆಂಬುದನ್ನು ಗುರುತಿಸಿದ್ದರೆಂಬುದರ ಅರಿವೇ ಇರಲಿಲ್ಲ.

ಕ್ಲಾಸು ಮುಗಿಯಿತು. ಅವರು ಬಾಗಿಲ ಬಳಿ ಹೋಗಿ ನಿಂತು ಹಿಂತಿರುಗಿ ಬಂದು ನನ್ನನ್ನು ಕರೆದರು. ನಾನು ಸ್ವಲ್ಪ ಅಧೀರನಾಗಿ ಅವರ ಮುಂದೆ ಹೋಗಿ ನಿಂತೆ. 'ನೋಡಿ, ನೀವು ಈ ಕ್ಲಾಸಿಗೆ ಹೊಸದಾಗಿ ಸೇರಿದ್ದೀರೋ, ಹೇಗೆ ?' ಎಂದಾಗ ನಾನು ತಪ್ಪೊಪ್ಪಿಗೆ ನೀಡಿದೆ. ಅವರು ನಾನು ಮಾಡಿದ್ದ 'ಕ್ರಿಯಾಲೋಪ'ವನ್ನು ನನಗೆ ವಿವರಿಸಿದರು. ನಾನು ಹಾಗೆ ನನ್ನ ಕ್ಲಾಸಿನಿಂದ ತಪ್ಪಿಸಿಕೊಂಡು ಬೇರೊಂದು ತರಗತಿಗೆ ಬಂದು ಕೂರುವುದರ ಅನೌಚಿತ್ಯವನ್ನು ನನ್ನ ಮುಖಕ್ಕೆ ಎತ್ತಿ ಹಿಡಿದರು. ನಾನು ಕ್ಷಮೆಯಾಚಿಸಿ, ಅವರ ಪಾಠ ಕೇಳಬೇಕೆಂಬ ನನ್ನ ಆಸೆಯನ್ನು ಉತ್ಕಂಠದಿಂದ ತೋಡಿಕೊಂಡೆ. 'I have no objection, if you don't bunk your class during those particular hours' ಎಂದು ನಸುನಕ್ಕು ಹೊರಟುಹೋದರು.

ಆಮೇಲೆ ೪-೫ ತಿಂಗಳುಗಳ ಕಾಲ ಅವರು 'ಯಶೋಧರ ಚರಿತ್ರೆ'ಯ ಸಾರಸರ್ವಸ್ವ 'ನಮಗೆ' ತಲುಪುವಷ್ಟು ಸುಲಲಿತವಾಗಿ, ನಮಗೆ ದಕ್ಕುವಂತೆ ಪಾಠ ಮಾಡಿದುದು ಇಂದಿಗೂ ಎಂದಿಗೂ ನೆನಪಿದೆ.

ಮತ್ತೆ, ನಾನು ಆನರ್ಸ್ ತರಗತಿಗೆ ಬಂದಾಗ, ಅವರ ಮನೆಗೆ (ಅದು ಶಾರದಾವಿಲಾಸ ಹೈಸ್ಕೂಲಿನ ಹಿಂಭಾಗದಲ್ಲಿತ್ತು) ಆಗಾಗ ಹೋಗಿ ಬರುತ್ತಿದ್ದೆ.. ಹಲವಾರು ಬಾರಿ ಅವರಿಂದ ಪುಸ್ತಕಗಳನ್ನು ಎರವಲಾಗಿ ಪಡೆದು ಅವರು ಕೇಳುವ ಮುಂಚೆಯೇ ಹಿಂತಿರುಗಿಸುತ್ತಿದ್ದೆ.

ಹೇಗೋ, ನಾನು ಬಹುಶಃ ನನ್ನ ಪುಣ್ಯದಿಂದ ಅವರ ಹತ್ತಿರದವನಾದೆ.

ನಾಟಕ, ಕಾವ್ಯವಾಚನ, ಮುಂತಾದ ಪಠ್ಯೇತರ ಚಟುವಟಿಕೆಯಲ್ಲಿ ಭಾಗವಹಿಸುತ್ತಿದ್ದ ನಾನು ಆಗಾಗ ಅವರ ಕಣ್ಣಿಗೆ ಬೀಳುತ್ತಿದ್ದುದುಂಟು. ಆಮೇಲಿನ ದಿನಗಳಲ್ಲಂತೂ ಅವರು ಭಾಷಣ ಮಾಡಲು ಹೊರಟಾಗ ನನ್ನನ್ನು ಬೇರೆ ಬೇರೆ ಊರುಗಳಿಗೂ ಕರೆದೊಯ್ಯುತ್ತಿದ್ದರು. ಉದಾ: ವೀರರಾಜಪೇಟೆಯ ಕರ್ನಾಟಕ ಸಂಘದ ಸಾಹಿತ್ಯೋತ್ಸವಕ್ಕೆ ಹೋಗಿದ್ದುದು ಎಂದೂ ಮರೆಯದ ಅನುಭವ.

ಸಾಹಿತಿ ವಿ.ಸೀ. ಅವರ ಬಹುಮುಖ ವ್ಯಕ್ತಿತ್ವ, ಅವರ ಸಾಹಿತ್ಯ ನಿರ್ಮಾಣ, ಕುರಿತು ದೊಡ್ಡ ದೊಡ್ಡವರು ಈಗಾಗಲೇ ಸಾಕಷ್ಟು ಚಿಂತನ-ಮಂಥನ ನಡೆಸಿದ್ದಾರೆ. ಅವರಿಗೆ ಅನನ್ಯ ಕೀರ್ತಿ ತಂದ (ಕನ್ನಡದ ಶ್ರೇಷ್ಠ ಪ್ರವಾಸ ಕಥನಗಳಲ್ಲೊಂದಾದ) 'ಪಂಪಾಯಾತ್ರೆ'ಯಲ್ಲಿನ ಶೈಲಿಯ ಸೊಬಗನ್ನು ಕನ್ನಡಿಗರು ಹಾಡಿ ಹೊಗಳಿದ್ದಾರೆ. ಅವರ ಕಾವ್ಯ ಹಾಗೂ ಕೆಲವೇ ವಿರಳ ಸಂಖ್ಯೆಯ ಪ್ರಬಂಧಗಳನ್ನು ಮೆಚ್ಚಿಕೊಂಡಿದ್ದಾರೆ. ಮೂಲತಃ ಅರ್ಥಶಾಸ್ತ್ರದ ವಿದ್ಯಾರ್ಥಿಯೂ, ಪರಿಣತರೂ ಆದ ಅವರ 'ಹಣ ಪ್ರಪಂಚ'ದಲ್ಲಿನ, ಇಂದಿಗೂ ಮಾಸದ ವಿಪುಲ ವಿಷಯ

ಎಚ್. ಕೆ. ರಾಮಚಂದ್ರಮೂರ್ತಿ

ಸಂಗ್ರಹಣೆ, ವಿಚಾರದ ಅವಿರತ ಪ್ರವಾಹ, ತೊಡಕಿರದ 'ಶೈಲಿ'ಯನ್ನು ಮನಸಾರೆ ಮೆಚ್ಚಿದ ಅರ್ಥಶಾಸ್ತ್ರಜ್ಞರು ಆ ಗ್ರಂಥವನ್ನು 'ಅರ್ಥಶಾಸ್ತ್ರದ ಸುಲಭ ಗ್ರಂಥಗಳ ನಿರ್ಮಾಣಕ್ಕೆ ಆದರ್ಶಪ್ರಾಯವಾದುದು' ಎಂದು ಶ್ಲಾಘಿಸಿದ್ದಾರೆ.

ಎಲ್ಲಕ್ಕಿಂತ ಹೆಚ್ಚಾಗಿ ನನಗೆ ಈಗ ನೆನಪಾಗುವುದು ಅವರ ಅವಿಶ್ರಾಂತ ಅಧ್ಯಯನ, ಹೊಸ ಸಂಗೀತ, ಸಾಹಿತ್ಯ, ಕಲೆಗಳಲ್ಲಿ ಅವರಿಗಿದ್ದ ಗಾಢ ಒಲವು, ಹೊಸ ಹೊಸ ಗ್ರಂಥಗಳನ್ನು ದಿನನಿತ್ಯವೂ ಓದಿ ಅದನ್ನು ರಕ್ತಗತ ಮಾಡಿಕೊಳ್ಳುತ್ತಿದ್ದ ರೀತಿ - ಇವು.

ನನಗಾದ ಒಂದು ಅನುಭವ ವಿವರಿಸಿ ಈ ನೆನಪುಗಳನ್ನು ಮುಕ್ತಾಯಗೊಳಿಸುತ್ತೇನೆ. ಸುಮಾರು ೧೯೭೨-೭೩ರ ಅವಧಿ. ಆಗ ನನಗೆ ಬ್ರೆಕ್ಟ್ ನಾಟಕಗಳ ಹುಚ್ಚು ತಲೆಗೇರಿತ್ತು. ಅವನ ಎಲ್ಲಾ ನಾಟಕಗಳನ್ನೂ ವಿಮರ್ಶಾ ಗ್ರಂಥಗಳನ್ನೂ ದೇಶವಿದೇಶಗಳಿಂದ ನನ್ನ ಬಂಧುಗಳನ್ನು ಕಾಡಿ ಬೇಡಿ ತರಿಸಿ ಓದಿದ್ದೆ. ಕೆಲವು ಪ್ರಮುಖ ಕೃತಿಗಳು ಇನ್ನೂ ಸಿಕ್ಕಿರಲಿಲ್ಲ. ಏನೋ ಕಳೆದುಕೊಂಡವನಂತೆ ಒದ್ದಾಡುತ್ತಿದ್ದೆ. ಒಂದು ದಿನ ವಿ.ಸೀ. ಅವರಲ್ಲಿಗೆ ಹೋಗಿದ್ದಾಗ ನನ್ನ ಕೊರಗು ಅವರಿಗೆ

> ಮಣಿಯದಿಹ ಮನವೊಂದು, ಸಾಧಿಸುವ ಹಟವೊಂದು
> ನಿಜದ ನೇರಕೆ ನಡೆವ ನಿಶ್ಚಲತೆಯೊಂದು
> ಅನ್ಯಾಯಕೆಂದೆಂದು ಬಾಗದೆಚ್ಚರವೊಂದು
> ಮರುಕಕ್ಕೆ ಪ್ರೇಮಕ್ಕೆ ಚಿರತೆರೆದ ಎದೆಯೊಂದು
> - ಅಭೀಃ । ಅಭೀಃ । ಅಭೀಃ । ಎಂಬ ತಾರಕವಾಕ್ಯ
> ನಾಡಿಯನು ನಡೆಸುತಿರೆ, ಬಾಳನ್ನು ತಿದ್ದುತಿರೆ
> ನಡೆ ಮುಂದಕೆನ್ನುತ್ತ ಕೂಗುತಿವೆ ನುಗ್ಗಿಸುತಿವೆ.
>
> -ವಿ. ಸಿ.

ತಿಳಿಯಿತು. ''ನಿಮಗೆ ಯಾವ ನಾಟಕ ಬೇಕಪ್ಪ ?'' ಎಂದರು..... ನನಗೆ ಏನೋ ಸಂಶಯ, ಒಳಗೊಳಗೇ ಹೊಗೆಯಾಡುತ್ತಿದ್ದ ಅಹಂಭಾವ... 'ಆ ನಾಟಕ ಇಲ್ಲಿ ಸಿಕ್ಕುವುದಿಲ್ಲವಂತೆ, ಸಾರ್' ಎಂದೆ. ''ಹೇಳಿ, ಯಾವುದು ?'' "St. Joan of the stockyards ಸರ್'' ಅಂದ ಕೂಡಲೆ ಅವರು ನಕ್ಕು, ಕೈನೀಡಿ ಕಪಾಟಿನೊಳಗಿನಿಂದ ಒಂದು ನಾಟಕ ಸಂಗ್ರಹ ತೆಗೆದುಕೊಟ್ಟು' 'ತಗೊಳ್ಳಿ, ನೋಡಿ!' ಅಂದರು. ನನ್ನ ಬಾಯಿ ಒಣಗಿ ಅಪರಾಧ ಪ್ರಜ್ಞೆಯಿಂದ ತಲೆ ತಗ್ಗಿಸಿ 'ತುಂಬಾ ಥ್ಯಾಂಕ್ಸ್'.. ಆದರೆ ನಾನಿದನ್ನು ಓದಬೇಕು, ಸರ್' ಎಂದೆ. (ಆಗ ನಾನು ಮೈಸೂರಿನ ಪ್ರಸಾರಾಂಗದಲ್ಲಿ 'ನಿಘಂಟು' ಕೆಲಸ ಮಾಡುತ್ತಿದ್ದೆ).. 'ತೆಗೆದುಕೊಂಡು ಹೋಗಿ, ಅಪ್ಪ.. ಓದಿ ಆದಷ್ಟು ಬೇಗ ಹಿಂದಕ್ಕೆ ಕಳುಹಿಸಿಕೊಡಿ' ಎಂದರು. ನನ್ನಲ್ಲಿ ಆಗ ಉಂಟಾದ ಧನ್ಯತೆ, ಕೃತಜ್ಞತೆಗಳ ಭಾವನೆಗಳನ್ನು ನಾನೀಗ ವಿವರಿಸಲಾರೆ. ಇಷ್ಟಲ್ಲದೆ, ನಾನು ಬ್ರೆಕ್ಟ್‌ನ ಆ ನಾಟಕದ ಜತೆಗೆ ಓದಬೇಕಾದ ಇನ್ನೂ ೨-೩ ನಾಟಕಗಳನ್ನುಲ್ಲೇಖಿಸಿ ಅವುಗಳನ್ನು ಓದಿ ನೋಡಿ ಎಂದು ಹೇಳಿಕಳುಹಿಸಿದರು. ನಾನು ಪ್ರಸಾರಾಂಗದಲ್ಲಿದ್ದಾಗ ಬರೆದ 'ಮೋಲಿಯೇ(ರ್)', 'ಬ್ರೆಕ್ಟ್' ಪುಸ್ತಕಗಳನ್ನು ಹಸ್ತಪ್ರತಿಯಲ್ಲಿ ಓದಿ ನೋಡಿ ಉಪಯುಕ್ತ ಸಲಹೆಗಳನ್ನಿತ್ತು ಬೆನ್ನು ತಟ್ಟಿದರು. ನೀವು, ಸಮಕಲು ನುಡಿಗಟ್ಟು ಅಂದರೂ ಚಿಂತೆಯಿಲ್ಲ... ಆ ನಮ್ಮ ಮೇಷ್ಟರಂಥವರಿನ್ನೆಲ್ಲಿ?.... When comes such another ?

**ಎಚ್. ಕೆ. ರಾಮಚಂದ್ರಮೂರ್ತಿ**
ನಂ. ೨೮೯, ೧೦ನೇ 'ಬಿ' ಕ್ರಾಸ್, ೨೯ನೇ ಮೇನ್, ಜೆ. ಪಿ. ನಗರ,
೧ನೇ ಹಂತ, ಬೆಂಗಳೂರು - ೭೮

# ಕ್ರೋಧಕೇತನ

ಅದುವೆ ಕೇಳಿರಿ ಪ್ರಳಯಘೋಷವು ಏರಿ ಕವಿಯುತೆ ಬರುವುದು
ಗಣದ ತಂತ್ರವು ಧನಿಯ ರಕ್ತದಿ ನಾಂದು ಬಲಿವುದು ಎನ್ನುತೆ :

೧

'ಎಮ್ಮಕೇತನ ಗಣನಿಕೇತನ
ಕಾಡುಗಿಚ್ಚೇ ನಡಗೆಯು !
ಎಮ್ಮ ದನಿಗಳು ಸಿಡಿಲು, ಗುಡುಗು !
ಉರಿಯ ಕಾರುವ ಮೋಡವು –

'ಬಂಡವಾಳದ ಭಂಡಬಾಳನು
ಮುಗಿಸಿ ನೆತ್ತರ ಸುರಿವೆವು
ದುಡಿದು ಕೊರಗುವ ದಣಿದು ಸೊರಗುವ
ಶ್ರಮದ ಶ್ರಮವನು ಹರಿಪೆವು –

'ಇದುವೆ ಕಾವಲು, ಇದುವೆ ಕೂಗು,
ಇದುವೆ ಬಿಡುಗಡೆ ಬಾಗಿಲು ;
ಇದುವೆ ಆಸೆಯು, ಇದುವೆ ಆಸರು,
ನಾಳೆಯೇಳ್ಗೆಯ ನೇಸರು.'

೨

ಕರೆಯ ನುಂಗುವ ಅಲೆಗಳಂದದಿ ನೀಳವಾಗಿದೆ ಕೂಗದೋ
ಹಸಿವು ಬೇಗೆಗೆ ತಾರಿ ಕಂದಿದ ಒಡಲಡೊಗರಿಂದೆದ್ದುದು :

ಹಗಲು ಇರುಳು ದುಡಿದು ದುಡಿದು, ಯಾರಿಗಾಹಾ ಬೆಳೆವೆವು ?
ಮನೆಯ ಮಕ್ಕಳ ಚಳಿಯನೀಗದ ನೆಯಿಗೆ ಯಾರಿಗೆ ನೆಯ್ವೆವು ?
ಹಾಲಿಗಿಲ್ಲದೆ ಹಸುಳೆಯಳಿವುವು ದಿನಕೆ ಸಾವಿರವಿದಿರಲಿ,
ರೋಗಕೌಷಧಿ ಪಥ್ಯ ದೊರೆಯದೆ ಸಾವು ತಿಂಬುದು ಜನರನು.
ಗೇಣುಬಟ್ಟೆಯ ಸೆರಗು ಸಿಕ್ಕದೆ ಚಿಂದಿ ಚೂರುಗಳುಡುವೆವು
ಹೆಣ್ಣ ಮಾನವ ಕಾವೆವೆಂದರೆ ಕೋವಿಯಂಜಿಕೆ ಸುಡುವುದು.

ಮಡದಿ ತಾಯ್ವಿರ ಕೊರಲ ತಾಳಿಯ ಕಾಯಲಾರದೆ ನರಳ್ವೆವು
ಮನವು ಬಾಯ್ಗಳು ಮಿಸುಕದಂದದಿ ಭಯದಿ ಉಸಿರನು
ತಡೆವೆವು.

ಬೀಡು ಬೀಡನು ತಿರುಗಿ ಬಿಡುಗಡೆಗಾಗಿ ಕಾದಿದ ಕಲಿಗಳು
ನಾಡ ಹಿರಿಯರು ವೀರಗುವರರು ನೀಡಿ ಸೆರೆಯಲಿ ಕೊಳೆವರು.
ಎಮ್ಮ ಬಾಳಿನ ತಿರುಳು ಸಂತತ – ಮಾರಿರಕ್ಕಸರೂಟವು
ಎಮ್ಮ ನಾಡಿನ ಹೂವು ಹಣ್ಗಳು ಎಮ್ಮ ನೆತ್ತರ ಕುಡಿಗಳು.

ಕೋಟಿ ದೇವರ ಕುರುಡುಕಣ್ಗಳು ಷಂಡತೋಳ್ಗಳು ಕಾಯವು
ಕೋಟಿ ಮೂವತ್ತೈದು ಮನುಜರ ನೋವು ಅಳಿಸದು ಸಿಗ್ಗನು.

೩

ತಗ್ಗಿ ಬಗ್ಗಿ ಕುಗ್ಗಿ ನೆಗ್ಗಿ
ಹುಟ್ಟು ಹುಟ್ಟಿಗು ನಮೆದೆವು ;
ತಂದೆ ಮಕ್ಕಳು ಸಾಹುಕಾರಗೆ
ಬಂದಿಯಾಗಿಯೆ ದುಡಿದೆವು.

ನಿಮಿರಿ ನಿಲ್ಲುವ ಒಡಲು ಬಾಗಿತು
ಭುಜವು ಸೋತಿತು ಸೊರಗಿತು
ತೊಡೆಯ ಹಜ್ಜೆಯ ದೃಢವು ಕೆಟ್ಟಿತು
ಎದೆಯ ಗಂಡೇ ಹೀರಿತು.

ಹೆರರ ಲಾಭಕೆ ದುಡಿವ ತೊತ್ತುಗ
ಳಾಗಿ ನೊಗವನು ಹೊತ್ತೆವು.
ಅವರು ನೂಕಲು ಮುದುರಿಬಿದ್ದೆವು
ಅವರ ಕೋಪಕೆ ಮಣಿದೆವು.

ಕೋಟಿ ಖಂಡುಗ ಧಾನ್ಯ ಬೆಳೆಯಲು
ಲಾಭ ಸಾಲದೆ ಸುಡುವರು,
ಕೋಟಿ ಮಕ್ಕಳು ಹಸಿದು ಸತ್ತರು
ಕಡಲ್ಗೆ ಹಾಲನು ಸುರಿವರು.

ನಾಡು ನಾಡಿನ ಜೀತ ಜೀವಿಕೆ
ಇವರು ಕುದುವಿಗೆ ಸೆರೆಗಳು
ಇವರ ಹಜ್ಜೆಯ ನೊಗದ ಭಾರಕೆ
ಬೆವರುತಾತ್ಮವು ಕುಸಿವುವು.

ಯಾರೊ ಉಳುವರು ಯಾರೊ ದಣಿವರು
ಯಾರೊ ಕೊಯ್ವರು ತಿಂಬರು
ಯಾರೊ ನಗುವರು ಯಾರೊ ಕುಣಿವರು
ಯಾರೊ ಬೆವರನು ಬಸಿವರು !

೪

ಅಸ್ಥಿಚರ್ಮದ ಭಾಗ್ಯವಂತರೆ, ಬನ್ನಿ ಕಾಣಿರಿ, ನಲಿಯಿರಿ
ನಿಮ್ಮ ಯೋಗದ ಮಸಣವೀಡಿಗೆ ಹೊಸ ನಿಕೇತನ ಬರುತಿದೆ.

ಧರ್ಮ ದೇವರು ಕಟ್ಟು ಕಟ್ಟಳೆ ಯಾರಿಗೀ ಯಮಪಾಶವು ?
ಕರುಣೆಯಿಲ್ಲದ ಧನಿಕರಾಯರ ಮನೆಯ ಕಾಪಿನ ತಂತ್ರವು ?
ಮಿಂಚು ಮಿಂಚಲಿ ಸಿಡಿಲು ಸಿಡಿಯಲಿ ಧನದ ಸೊಕ್ಕುಗಳುರಿಯಲಿ
ಮುರಿದ ಮನಗಳು ಒಡೆದ ಎದೆಗಳು ಶಿವಗೆ ಮಾಲೆಗಳಾಗಲಿ

([illegible])

**ವಿ. ಸೀತಾರಾಮಯ್ಯ**

# ಬಾಗೂರು ನವಿಲೆ-ರೈತರ ಬವಣೆಗೆ ಕೊನೆ ಎಂದು ?

ಬಾಗೂರು-ನವಿಲೆ ರೈತರ ಹೋರಾಟದ ವಿಷಯವನ್ನು ಇಂದು ಕರ್ನಾಟಕದಲ್ಲಿ ತಿಳಿಯದವರಿಲ್ಲ. ಹತ್ತಾರು ವರ್ಷಗಳಿಂದ ನಡೆಯುತ್ತಿದ್ದರೂ ಈ ಹೋರಾಟ ಸೂಕ್ತ ಪರಿಹಾರ ಕಂಡುಕೊಳ್ಳದಿರುವುದು ತುಂಬ ಶೋಚನೀಯ. ಇಂಥದೇ ಹೋರಾಟ ಭಾರತದ ಬೇರಾವ ರಾಜ್ಯದಲ್ಲಾದರೂ... ಆಂಧ್ರ, ಮಧ್ಯಪ್ರದೇಶ, ಪಂಜಾಬುಗಳಂಥ ಬೇರಾವ ರಾಜ್ಯದಲ್ಲಾದರೂ.... ನಡೆದಿದ್ದರೆ ಜಗಜ್ಜಾಹೀರಾಗುತ್ತಿತ್ತು, ಕೇಂದ್ರ ಸರ್ಕಾರದ ಗಮನವನ್ನು ಸೆಳೆದು ತಕ್ಷಣವೇ ಸೂಕ್ತ ಪರಿಹಾರ ಪಡೆಯುತ್ತಿತ್ತು. ಆದರೆ ಅದು ಕರ್ನಾಟಕದಲ್ಲಾದುದು, ಆಗುತ್ತಿರುವುದು ಮತ್ತು ಪರಿಹಾರ ಕಾಣದೆ ಹೋಗಿರುವುದು, ಹೋರಾಟದ ಅಥವಾ ಅದನ್ನು ನಡೆಸುತ್ತಿರುವ ಕರ್ನಾಟಕ ರೈತರ, ದೌರ್ಭಾಗ್ಯವೆನ್ನಬೇಕು.

## ಯಾಕೆ ಈ ತಾತ್ಸಾರ ?

ಹೇಮಾವತಿ ನದಿಯ ನೀರನ್ನು ಗೊರೂರು ಜಲಾಶಯದಿಂದ ತುಮಕೂರು ಮಂಡ್ಯಗಳಿಗೆ ಸರಬರಾಜು ಮಾಡಲು ಬಾಗೂರು ನವಿಲೆ ಗ್ರಾಮಗಳ ಮಧ್ಯೆ ೮೦ರಿಂದ ೨೧೦ ಅಡಿಗಳಷ್ಟು ಆಳದಲ್ಲಿ ೯.೭೫ ಕಿ.ಮೀ. ಉದ್ದ ಹಾಗೂ ೫.೫ ಮೀಟರ್ ಅಡ್ಡಳತೆಯ ಸುರಂಗ ಕಾಲುವೆ ತೋಡುವ ಯೋಜನೆ ೧೯೭೮ ರಲ್ಲಿ ಉದ್ಘಾಟನೆಯಾಯಿತು. ಆಗಲೇ ಅಂದಿನ ಮುಖ್ಯಮಂತ್ರಿ ದೇವರಾಜ ಅರಸುರವರೇ, ''ಇಷ್ಟು ಆಳದಲ್ಲಿ ಸುರಂಗ ಕೊರೆಯುವುದರಿಂದ ಅಂತರ್ಜಲ ಬಸಿದು ಇಕ್ಕೆಲಗಳಲ್ಲಿ ಭೂಮಿ ಬರಡಾಗುತ್ತದೆ. ಇದನ್ನು ತಪ್ಪಿಸಲು ಕೂಡಲೇ ಸಮಗ್ರ ನೀರಾವರಿ ಸೌಲಭ್ಯ ಕಲ್ಪಿಸಬೇಕು'' ಎಂಬ ಎಚ್ಚರಿಕೆಯ ಮಾತುಗಳನ್ನಾಡಿದ್ದರು. ಅಂತೆಯೇ ಸರಕಾರವೂ ಏತ ನೀರಾವರಿಗಾಗಿ ೧೬ ಕೋಟಿ ರೂಪಾಯಿ ಮಂಜೂರು ಮಾಡಿತು. ಆದರೆ ಕೆಲಸ ಮಾತ್ರ ಆರಂಭವಾಗಲಿಲ್ಲ. ಲಕ್ಷಗಟ್ಟಲೆ ಹಣ ತೆತ್ತು ಕೊಂಡುತಂದ ನೀರೆತ್ತುವ ಯಂತ್ರಗಳು ತುಕ್ಕು ಹಿಡಿದು ಮೂಲೆಯಲ್ಲಿ ಬಿದ್ದಿವೆ.

ಆದರೆ ಸುರಂಗದ ಇಕ್ಕೆಲಗಳಲ್ಲಿನ ಸುಮಾರು ೪೫ ಗ್ರಾಮಗಳ ರೈತರ ಬವಣೆ ಮಾತ್ರ ವರ್ಷ ವರ್ಷಕ್ಕೂ ಬಿಗಡಾಯಿಸುತ್ತಿದೆ. ಈ ಹಳ್ಳಿಗಳಲ್ಲಿನ ಅಂತರ್ಜಲ ಸುರಂಗ- ಕಾಲುವೆಯೊಳಕ್ಕೆ ಹರಿದು,



ಪೊಲೀಸ್ ದೌರ್ಜನ್ಯಕ್ಕೆ ತುತ್ತಾದವರು ತಮ್ಮ ನೋವನ್ನು ಹಂಚಿಕೊಳ್ಳುತ್ತಿರುವುದು

ಇಲ್ಲಿನ ಜನರ ಮುಖ್ಯಾಧಾರವಾದ ತೆಂಗು ಮತ್ತಿತರ ಬೆಳೆಗಳು ಜಲಾಭಾವದಿಂದ ಫಲ ನೀಡದೆ ರೈತರಿಗೆ ಕೋಟ್ಯಾಂತರ ರೂಪಾಯಿಗಳ ನಷ್ಟವಾಗಿದೆ. ಬೇರೆ ಪ್ರಾಂತಗಳಲ್ಲಿ, ಮಳೆ ಬರದೆ ಬೆಳೆ ನಷ್ಟವಾದಾಗ ಅಲ್ಲಿನ ಸರಕಾರಗಳು ರೈತರಿಗೆ ಪರಿಹಾರ ಘೋಷಿಸಿದ ಅನೇಕ ನಿದರ್ಶನಗಳಿವೆ. ಆದರೆ ಇಲ್ಲಿ ಸರಕಾರದ ಯೋಜನೆಯ ಕಾರಣವಾಗಿಯೇ ರೈತರು ನಷ್ಟಕ್ಕೀಡಾಗಿದ್ದರೂ ಸರಕಾರ ಕಣ್ಣು ಮುಚ್ಚಿ ಕುಳಿತಿದೆ. ಹೊಟ್ಟೆ ಹೊರೆಯಲು ಸಾವಿರಾರು ರೈತರು ಕಲ್ಲುಕುಟ್ಟುವ ವೃತ್ತಿಗೆ ಶರಣಾಗಿದ್ದಾರೆ. ಅದೇ ಹೊತ್ತಿನಲ್ಲಿ ಜಾಗೃತ ರೈತರು ಅಖಿಲ-ಭಾರತ ಕಿಸಾನ್ ಸಭೆಯ ಕರ್ನಾಟಕ ರಾಜ್ಯ ಮಂಡಳಿಯ ಆಶ್ರಯದಲ್ಲಿ ಹತ್ತಾರು ವರ್ಷಗಳಿಂದ ನಡೆಸಿಕೊಂಡು ಬಂದಿರುವ ಹೋರಾಟ, ಧರಣಿ ಮುಷ್ಕರಗಳು ಸರಕಾರದ ಹಾಗೂ ಸಾರ್ವಜನಿಕರ ಗಮನ ಸೆಳೆಯುವುದರಲ್ಲಿ ಯಶಸ್ವಿಯಾಗಿವೆ. ಶಾಸನ ಸಭೆಯಲ್ಲೂ ಇದರ ಚರ್ಚೆಯಾಗಿದೆ. ತಜ್ಞರ ಸಮಿತಿಯೊಂದು ನೇಮಕವಾಗಿ ಅದೂ ರೈತರಿಗೆ ಪರಿಹಾರ ಒದಗಿಸುವ ಸಲಹೆ ನೀಡಿದೆ.

## ಮುಖ್ಯ ಕಾರಣ

ಆದರೂ ಪರಿಹಾರ ಕಂಡುಬಂದೇ ಇಲ್ಲ. ಇದಕ್ಕೆ ಮುಖ್ಯ ಕಾರಣ, ಹಾಸನ, ಜಿಲ್ಲೆಯನ್ನು ತಮ್ಮ ಪಾಳೆಯ ಎಂದು ಭಾವಿಸಿಕೊಂಡಿರುವ, 'ಮಣ್ಣಿನ ಮಗ'ನೆಂದು ಕರೆದುಕೊಳ್ಳುವ, ಮಾಜಿ ಪ್ರಧಾನಿ ಹಾಗೂ ಮಾಜಿ ಮುಖ್ಯಮಂತ್ರಿಗಳ ಮತ್ತವರ ಅನುಯಾಯಿಗಳ ಕುತಂತ್ರ ಹಾಗೂ ಕುಟಿಲೋಪಾಯ. ೧೯೯೪ರ ವಿಧಾನಸಭಾ ಚುನಾವಣೆ ಹಾಗೂ ೧೯೯೬-೯೮ರ ಲೋಕಸಭಾ ಚುನಾವಣೆಗಳಲ್ಲಿ ತಮಗೆ ಮತ ನೀಡಲಿಲ್ಲವೆಂಬು ದನ್ನೇ ಮನಸ್ಸಿನಲ್ಲಿಟ್ಟುಕೊಂಡು, ಮುಯ್ಯಿ ತೀರಿಸಿಕೊಳ್ಳಲೆಂದೇ ಅವರು ಬಾಗೂರು-ನವಿಲೆ ರೈತರ ವಿರುದ್ಧ ಕುಯುಕ್ತಿ ನಡೆಸಿದ್ದಾರೆ.

ಬಾಗೂರು-ನವಿಲೆ ರೈತರ ಶಾಂತಿಯುತ ಚಳವಳಿಗೆ ಮಸಿ ಬಳಿಯಲೋಸುಗ ಅವರು ಬೇಕೆಂತಲೇ ತಮ್ಮ ಅನುಚರರಿಂದ ಪೊಲೀಸು ಜೀಪೊಂದಕ್ಕೆ ಬೆಂಕಿ ಹಚ್ಚಿಸಿ, ತಪ್ಪನ್ನು ರೈತರ ಮೇಲೆ ಹೊರಿಸಿ, ಅವರ ವಿರುದ್ಧ ಅಮಾನುಷ ದೌರ್ಜನ್ಯ ನಡೆಸುವಂತೆ ಪೊಲೀಸರನ್ನು ಛೂ ಬಿಟ್ಟಿದ್ದಾರೆ. ಹಾಸನ ಜಿಲ್ಲೆ ತಮ್ಮ ಪಾಳೆಯ, 'ಹೊರಗಿನವರು' ಬಂದು ಇಲ್ಲಿಯ ರೈತರಲ್ಲಿ ಹೊಸ ಪ್ರಜ್ಞೆ ಮೂಡಿಸಿ ಅವರನ್ನು ಸಂಘಟಿಸುವುದು ತಮ್ಮ ವೈಯಕ್ತಿಕ ನಾಯಕತ್ವಕ್ಕೆ ಸವಾಲು, ಎಂದೇ ಪರಿಗಣಿಸಿದ 'ಮಣ್ಣಿನ ಮಕ್ಕಳ' ಕುತಂತ್ರದಿಂದ ಜುಲೈ ೧೯ ಮತ್ತು ೨೦ರಂದು ನಡೆದ ಪೊಲೀಸು ದೌರ್ಜನ್ಯ ಹಾಗೂ ರಾಕ್ಷಸೀ ಕೃತ್ಯ ಅತ್ಯಂತ ಘೋರವಾಗಿದ್ದಿತು, ಕ್ರೂರವಾಗಿದ್ದಿತು.

## ಪೈಶಾಚಿಕ, ಅಮಾನುಷ....

ಸಾರ್ವಜನಿಕರ ಕೇಳಿಕೆಯ ಮೇರೆಗೆ ಅಲ್ಲಿಗೆ ತೆರಳಿ ಕೂಲಂಕಷ ವಿಚಾರಣೆ ನಡೆಸಿದ ಶ್ರೀ ಚಮನಲಾಲ್ ನೇತೃತ್ವದ **ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗ** ಪ್ರಕಟಿಸಿರುವ ವರದಿಯೂ ಪೊಲೀಸರ ಅಮಾನುಷ ಕೃತ್ಯಗಳನ್ನು ನಿರ್ದಾಕ್ಷಿಣ್ಯವಾಗಿ ಬಯಲಿಗೆಳೆದಿದೆ. ''ಪೊಲೀಸರು ತಪ್ಪು ಸರಿಗಳ ವಿವೇಚನೆಯನ್ನು ಕಳೆದುಕೊಂಡು ರೈತರ ಮೇಲೆ ಬೇಕಾಬಿಟ್ಟಿ ಬಲಪ್ರಯೋಗ ಮಾಡಿದ್ದಾರೆ, ಮನೆಗಳಿಗೆ ನುಗ್ಗಿ ಮುದುಕಿಯರನ್ನೂ ಮಕ್ಕಳನ್ನೂ ಗರ್ಭಿಣಿ ಸ್ತ್ರೀಯರನ್ನೂ ಬಿಡದೆ ನಿಷ್ಕರುಣೆಯಿಂದ ಚಚ್ಚಿದ್ದಾರೆ. ತಲೆಕೆಟ್ಟಂತೆ ವರ್ತಿಸಿದ ಪೊಲೀಸರು ಅನೇಕ ಮನೆಗಳ ಬಾಗಿಲು ಕಿಟಕಿ ಮತ್ತು ಮಹಡಿ ಮೆಟ್ಟಿಲುಗಳನ್ನೂ, ಟಿವಿ, ಮೊಪೆಡ್ ಮತ್ತು ಬೈಸಿಕಲ್ಲುಗಳನ್ನೂ, ಕೊನೆಗೆ ಸಂಸಾರದ ಭಾವ ಚಿತ್ರಗಳನ್ನು ಸಹ, ಮುರಿದುಹಾಕಿದ್ದಾರೆ, ರೈತರ ಚಳುವಳಿಗೆ ಯಾವ ರೀತಿಯಲ್ಲೂ ಸಂಬಂಧಿಸದ ಪೂರ್ಣ ಮುಗ್ಧ ಜನರನ್ನು ದಸ್ತಗಿರಿ ಮಾಡಿ ಜೈಲಿಗೆ ದಬ್ಬಿದ್ದಾರೆ'' ಎಂದು ಈ ವರದಿ ತಿಳಿಸಿದೆ. ಪೊಲೀಸ್ ಇನ್‌ಸ್ಪೆಕ್ಟರ್ ಎಸ್. ಜಿ. ವಿಜಯಕುಮಾರ್ ಮತ್ತು ಸಬ್-ಇನ್‌ಸ್ಪೆಕ್ಟರ್ ಟಿ. ನಟರಾಜ್‌ರವರೇ ಈ ದಬ್ಬಾಳಿಕೆಗೆ ಮೂಲ ಜವಾಬ್ದಾರರೆಂದು ತಿಳಿಸಿ, ವರದಿಯು ಜಿಲ್ಲೆಯ ಡೆಪ್ಯುಟಿ ಕಮೀಷನರ್ ಮತ್ತು

*ಮಾನವ ಹಕ್ಕುಗಳನ್ನು ರಕ್ಷಿಸಲು ಭಾರತದಲ್ಲಿ ಒಂದು ಆಯೋಗವಿದೆ. ಬಾಗೂರು-ನವಿಲೆ ಪ್ರದೇಶಕ್ಕೆ ಆಯೋಗದ ಪರವಾಗಿ ತನಿಖೆಗೆ ಬಂದವರು ಶ್ರೀ ಚಮನ್ ಲಾಲ್. ಹಾಸನ ಜಿಲ್ಲೆಯಲ್ಲಿ ರಾಜಕಾರಣದಲ್ಲಿ ಪಳಗಿದ ಒಂದು ಪಾಳೆಗಾರ ಕುಟುಂಬ ಈ ವರದಿಯನ್ನು ಮುಚ್ಚಿ ಹಾಕಲು ಆಯೋಗದ ಕಾರ್ಯದರ್ಶಿ ಡಿ. ಆರ್. ಕಾರ್ತಿಕೇಯನ್ ನೆರವು ಪಡೆಯಲು ಒತ್ತಡ ಹೇರಿದಾಗ್ಯೂ ವರದಿ ಬಂದಿದೆ. ಸರ್ಕಾರ ಅದರ ಬಗ್ಗೆ ಯಥಾಪ್ರಕಾರ ತಾತ್ಸಾರದ ಪ್ರತಿಕ್ರಿಯೆ ತೋರುತ್ತಿದೆ. ಸಾರ್ವಜನಿಕರು ಮಾನವೀಯ ಹಕ್ಕುಗಳ ಆಯೋಗದ ಅಧ್ಯಕ್ಷ ಶ್ರೀ ಎಂ. ಎನ್. ವೆಂಕಟಾಚಲಯ್ಯ ಅವರಿಗೆ ಪತ್ರಗಳನ್ನು ಬರೆದು ಆಯೋಗದ ವರದಿಯನ್ನು ಜಾರಿಗೊಳಿಸಬೇಕೆಂದು ಒತ್ತಾಯಿಸುವ ಅಗತ್ಯವಿದೆ. ದಯವಿಟ್ಟು ಪತ್ರಗಳನ್ನು ಬರೆಯಿರಿ.*

*ವಿಳಾಸ : ಚೇರ್‌ಮನ್, ನ್ಯಾಷನಲ್ ಹ್ಯೂಮನ್ ರೈಟ್ಸ್ ಕಮಿಷನ್, ಸರದಾರ್ ಪಟೇಲ್ ಭವನ್, ಸಂಸದ ಮಾರ್ಗ, ನವ ದೆಹಲಿ-೧೧೦ ೦೦೧*



ಬಾಗೂರು-ನವಿಲೆ ಸುರಂಗ ಪ್ರಾರಂಭದಲ್ಲಿ

ಪೊಲೀಸು ಸೂಪರಿಂಟೆಂಡೆಂಟರನ್ನೂ ಉಗ್ರವಾಗಿ ಟೀಕಿಸಿದೆ.

## ಆಯೋಗದ ಶಿಫಾರಸು....

ರೈತರ ದುಸ್ಥಿತಿಯನ್ನೂ ರಾಜ್ಯ ಮತ್ತು ಜಿಲ್ಲಾ ಆಡಳಿತದ ದೌರ್ಜನ್ಯವನ್ನೂ ದೂರ ಮಾಡಲು ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗವು ಈ ಕೆಳಗೆ ಕಂಡ ಶಿಫಾರಸುಗಳನ್ನು ಮಾಡಿದೆ:

೧. ಪೊಲೀಸು ದೌರ್ಜನ್ಯಕ್ಕೆ ತುತ್ತಾಗಿ ಕ್ರಿಮಿನಲ್ ಕೇಸಿಗೆ ಒಳಗಾಗಿರುವ, ಆಸ್ತಿ ಪಾಸ್ತಿ ನಷ್ಟವಾಗಿರುವ ಎಲ್ಲರಿಗೂ ತಲಾ ಐದು ಸಾವಿರ ರೂಪಾಯಿಗಳ ಪರಿಹಾರ ನೀಡತಕ್ಕದ್ದು. ದೀರ್ಘಕಾಲದ ಚಿಕಿತ್ಸೆಗಾಗಿ ಆಸ್ಪತ್ರೆ ಸೇರಿರುವವರಿಗೆ ಪ್ರತ್ಯೇಕ ವಿಶೇಷ ಪರಿಹಾರ ನೀಡತಕ್ಕದ್ದು.

೨. ಸರ್ಕಲ್ ಇನ್‌ಸ್ಪೆಕ್ಟರ್ ವಿಜಯಕುಮಾರ್, ಸಬ್-ಇನ್ ಸ್ಪೆಕ್ಟರ್ ನಟರಾಜ್ ಇಬ್ಬರನ್ನೂ ವಿಚಾರಣೆಗೆ ಒಳಪಡಿಸಿ ಸಾರ್ವಜನಿಕ ಸೇವೆಯಿಂದ ಎರಡು ವರ್ಷಗಳ ಕಾಲ ದೂರವಿಡಬೇಕು.

೩. ಅಂತರ್ಜಲ ಬತ್ತಿರುವ ಪ್ರಶ್ನೆಯನ್ನು ಪರಿಶೀಲಿಸಲು ಮತ್ತು ಅದರಿಂದಾಗಿರುವ ನಷ್ಟವನ್ನು ಗೊತ್ತು ಹಚ್ಚಲು ಕೃಷಿ, ತೋಟಗಾರಿಕೆ, ಗಣಿ ಹಾಗೂ ಭೂಗರ್ಭಶಾಸ್ತ್ರ ಇಲಾಖೆಗಳ ಪ್ರತಿನಿಧಿಗಳಿಂದ ಕೂಡಿದ ತಜ್ಞರ ಸಮಿತಿಯೊಂದು ನೇಮಕವಾಗಬೇಕು.

೪. ಇದು ಸರಕಾರದ ಜವಾಬ್ದಾರಿ. ಅದರ ನೈತಿಕ ಹಾಗೂ ಸಂವಿಧಾನಾತ್ಮಕ ಹೊಣೆ. ನಷ್ಟಕ್ಕೆ ತುತ್ತಾಗಿರುವ ಗ್ರಾಮಸ್ಥರಿಗೆ ಅವರ ಹಿಂದಿನ ವರ್ಷಗಳ ಹಾಗೂ ಇತ್ತೀಚಿನ ನಷ್ಟಗಳನ್ನು ಪರಿಹಾರದಿಂದ ಭರ್ತಿಮಾಡಿ ಕೊಡಬೇಕು. ಜೊತೆಗೆ ಜೀವಂತ ನೀರಾವರಿ ಯೋಜನೆಯನ್ನು, ಭರವಸೆ ನೀಡಿರುವಂತೆ, ತುರ್ತಾಗಿ ಜಾರಿಗೊಳಿಸಬೇಕು.

**ಕೆ. ಎಲ್. ಗೋಪಾಲಕೃಷ್ಣ ರಾವ್**

## ಶೀಘ್ರ ಅನುಷ್ಠಾನಕ್ಕೆ ಒತ್ತಾಯ....

ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗವು ವಿಚಾರಣೆ ನಡೆಸಿ, ವರದಿ ಸಲ್ಲಿಸಿ, ತಿಂಗಳುಗಳು ಕಳೆದರೂ ಇನ್ನೂ ಅದರ ಶಿಫಾರಸುಗಳನ್ನು ಜಾರಿಗೆ ತರುವ ಸೂಚನೆಗಳೇ ಕಂಡು ಬರುತ್ತಿಲ್ಲ. ಬದಲು ನೀರಾವರಿ ಸಚಿವರು ಸಲ್ಲದ ನೆಪಗಳನ್ನು ಮುಂದೂಡಿ ನುಣುಚಿಕೊಳ್ಳಲು ಯತ್ನಿಸುತ್ತಿದ್ದಾರೆ. ಆದರೆ ಚಳವಳಿಯ ನೇತೃತ್ವ ವಹಿಸಿರುವ 'ಅಖಿಲ ಭಾರತ ಕಿಸಾನ್ ಸಭೆಯ ಕರ್ನಾಟಕ ರಾಜ್ಯ ಮಂಡಳಿ'ಯು, ಆಯೋಗದ ಶಿಫಾರಸುಗಳನ್ನು ಕೂಡಲೇ ಅನುಷ್ಠಾನಕ್ಕೆ ತರಬೇಕೆಂದೂ ಅಮಾಯಕ ರೈತರ ವಿರುದ್ಧ ಹೂಡಿರುವ ಎಲ್ಲ ಮೊಕದ್ದಮೆಗಳನ್ನು ಹಿಂದಕ್ಕೆ ಪಡೆಯಬೇಕೆಂದೂ, ನೊಂದವರಿಗೆ ತಕ್ಷಣವೇ ಸೂಕ್ತ ಪರಿಹಾರ ಒದಗಿಸಬೇಕೆಂದೂ, ಆಯೋಗ ಸಲಹೆ ಮಾಡಿರುವ ತಜ್ಞರ ಸಮಿತಿಯಲ್ಲಿ ರೈತ ಪ್ರತಿನಿಧಿಗಳಿಗೂ ಅವಕಾಶ ಒದಗಿಸಿಕೊಡಬೇಕೆಂದೂ, ಕೇಂದ್ರ ಸರಕಾರದ ಪ್ರತಿನಿಧಿಯೊಬ್ಬರು ಈ ಸಮಿತಿಯ ಅಧ್ಯಕ್ಷರಾಗಿರಬೇಕೆಂದೂ ಆಗ್ರಹಪಡಿಸಿದೆ. ಈ ನಿಟ್ಟಿನಲ್ಲಿ ತಕ್ಷಣದ ಕಾರ್ಯ ಕೈಗೊಳ್ಳುವಂತೆ ಸರ್ಕಾರವನ್ನು ಒತ್ತಾಯಿಸಬೇಕೆಂದು ಸಾರ್ವಜನಿಕರಲ್ಲೂ ಮನವಿ ಮಾಡಿಕೊಂಡಿದೆ. ಇದು ಜರುಗುವವರೆಗೂ ತನ್ನ ಹೋರಾಟವನ್ನು ಮುಂದುವರಿಸಲು, ಈ ಶೋಚನೀಯ ಪರಿಸ್ಥಿತಿಗೆ ಕಾರಣರಾದವರಿಗೆ ಸೂಕ್ತ ಪಾಠ ಕಲಿಸಲು, ಸಂಘರ್ಷ ಸಮಿತಿ ಪಣ ತೊಟ್ಟಿದೆ.

### ಈ ಸಮರ್ಥನೆ ಸರಿಯೇ?

ಇಷ್ಟೆಲ್ಲಾ ವಸ್ತುನಿಷ್ಠವಾದ ಪರಾಮರ್ಶೆ ಮಾಡಿರುವ ಆಯೋಗದ ವರದಿಯಲ್ಲಿ ಹೋರಾಟ-ವಿರೋಧಿ ತಾತ್ವಿಕ ನೆಲೆಯ ಸಮರ್ಥನೆ ಇರುವುದೊಂದು ಸೋಜಿಗ. ಸುರಂಗದಿಂದ ಸಂತ್ರಸ್ತರಾದವರು ಹೋರಾಟಕ್ಕೆ ಇಳಿದಾಗ ಪೊಲೀಸರ ದೌರ್ಜನ್ಯಕ್ಕೆ ಗುರಿಯಾದರೆ ಅದು ವಿಶೇಷವಲ್ಲ, ಸ್ವಾಭಾವಿಕ ಎನ್ನುತ್ತದೆ ವರದಿ. ಹೋರಾಟಕ್ಕೆ ಇಳಿಯದಿದ್ದ ಜನಸಾಮಾನ್ಯರ ಮನೆಗಳಿಗೆ ನುಗ್ಗಿ ಪೊಲೀಸರು ದಾಂಧಲೆ ನಡೆಸಿರುವುದು ತಪ್ಪು, ಆದರೆ ಆಶಾ, ಸುಧಾ, ವಸಂತ ಕುಲಕರ್ಣಿ, ಮಂಜುನಾಥ್ ಮುಂತಾದವರ ಮೇಲೆ ನಡೆಸಲಾಗಿರುವ ಹಲ್ಲೆ ಅನಿರೀಕ್ಷಿತವಲ್ಲ ಮತ್ತು ಅದಕ್ಕೆ ಹೋರಾಟಗಾರರು ಸಿದ್ಧರಾಗಿರಬೇಕು ಎಂಬರ್ಥದಲ್ಲಿ ಶ್ರೀ ಚಮನ್‌ಲಾಲ್ ವಾದಿಸಿದ್ದಾರೆ. ಪ್ರಜಾಪ್ರಭುತ್ವವಾದಿ ಕ್ರಮದಲ್ಲಿ, ಯಾವುದೇ ರೀತಿಯ ಹಿಂಸೆಯಲ್ಲೂ ತೊಡಗದೆ, ರೈತರು ಹೋರಾಟಕ್ಕೆ ಇಳಿದರೆ ಅವರಿಗೆ ಮೂಲಭೂತ ಮಾನವೀಯ ಹಕ್ಕುಗಳು ಇಲ್ಲವಾಗುತ್ತವೆಯೆ ? ಅವರನ್ನು ಪೊಲೀಸರು ಹೇಗೆ ಬೇಕಾದರೂ ದಂಡಿಸಬಹುದೆ ? ಮಾನವೀಯ ಹಕ್ಕುಗಳಿಗೆ ಈ ಹೊಸ ದುಷ್ಟ ಆಯಾಮ ಕಲ್ಪಿಸಿದರೆ ಯಾವ ಹೋರಾಟವನ್ನಾದರೂ ಪೊಲೀಸರು ಹತ್ತಿಕ್ಕಬಹುದು ಎಂದಾಗುತ್ತದೆ. ಮಾನವ ಹಕ್ಕುಗಳ ಆಯೋಗವು ಹೀಗೆ ಅಪಾರ್ಥ ಕಲ್ಪಿಸುವುದು ಹೇಯವಾಗಿದೆ. ಈ ಒಂದು ಇಂಗಿತವನ್ನು ಬಿಟ್ಟರೆ ಚಮನ್ ಲಾಲ್ ವರದಿಯು ಬಹಳ ಉಪಯುಕ್ತವಾದ ದಾಖಲೆಯಾಗಿದೆ.

### ಬಾಗೂರು-ನವಿಲೆ ಹಳ್ಳಿಗಳಲ್ಲಿ ಪೊಲೀಸ್ ಹಿಂಸಾಚಾರ ಘಟನೆಗಳಲ್ಲಿ ಎರಡು ಹೀಗಿವೆ :

ಅ) ಒಂದು ಹಳ್ಳಿಯ ಜನ ಬಹುತೇಕ ಮನೆಗಳನ್ನು ಬಿಟ್ಟು ದೂರದ ಹೊಲ, ತೋಟಗಳಲ್ಲಿ ಅಡಗಿದ್ದರು. ಒಬ್ಬಾಕೆ ಒಂದು ರಾತ್ರಿಯಿಡೀ ಹಳ್ಳಿಯಾಚೆ ರಸ್ತೆ ಬದಿಯ ಮರದ ಮೇಲೆ ಹತ್ತಿ ಕಾಲ ಕಳೆದಳು. ಅದೇ ಊರಿನ ಒಬ್ಬಾತ ರಾತ್ರಿ ಎಲ್ಲೋ ಅಡಗಿದ್ದವನು ಬೆಳಿಗ್ಗೆ ಊರಿನ ಕಡೆಗೆ ಹೊರಟು . ಮರದ ಮೇಲಿದ್ದಾಕೆಯನ್ನು ನೋಡಿ ಇದಾವ ಹೆಣ್ಣುದೆವ್ವ ಬೇರೆ ಊರಿಗೆ ವಕ್ಕರಿಸಿತೆಂದು ಭಯ ಭೀತನಾಗಿ ಅಲ್ಲಿಂದ ಓಟ ಕೀಳಲ್ಲಿದ್ದಾಗ ಆಕೆಯ ಮಾತು ಕೇಳಿ ತನ್ನಂತೆ ಸಂಕಟಕ್ಕೀಡಾಗಿರುವಳೀಕೆ ಎಂದರಿತು ಸಮಧಾನಪಟ್ಟುಕೊಂಡ.







ಆ) ಒಂದು ಹಳ್ಳಿಯ ಹೊರವಲಯದಲ್ಲಿ ಅಡಗಿದ್ದ ಒಬ್ಬಾಕೆ ಊರಿಗೆ ಹಿಂದಿರುಗುತ್ತಿದ್ದಾಗ ರಸ್ತೆಯಲ್ಲಿ ಪೊಲೀಸರನ್ನು ದೂರದಲ್ಲೇ ಕಂಡಳು. ತಕ್ಷಣ ರಸ್ತೆಯ ಬಳಿಯ ಸೇತುವೆಯಡಿ ಅಡಗಿಕೊಳ್ಳಲು ಮುಂದಾದಳು. ಅಲ್ಲೊಂದು ಹಾವು. ಪೊಲೀಸರಿಗಿಂತ ಹಾವೇ ಹೆಚ್ಚು ಸೌಮ್ಯ ಎಂದು ಬಗೆದ ಆಕೆ ಪೋಲೀಸರು ಕಣ್ಮರೆಯಾಗುವವರೆಗೆ ಅಲ್ಲೇ ಅಡಗಿಕೂತಳು.

ಕೆ. ಎಲ್. ಗೋಪಾಲಕೃಷ್ಣ ರಾವ್
ನಂ. ೨೬೧, ೨ನೇ ಕ್ರಾ.ಸ್., [illegible]
ಬೆಂಗಳೂರು - [illegible]

# ಲಲ್ಲೇಶ್ವರಿ

**ಡಾ|| ವಿಜಯಾ**

ಲಲ್ಲ ಕಾಶ್ಮೀರಿ ಪಂಡಿತ ಮನೆತನದವಳು. ಹಿಂದೂ ಸಂಪ್ರದಾಯ, ಆಚಾರಗಳನ್ನು ಹೊರಗಿಟ್ಟು ಅಂತರ್ಮುಖವಾಗಿ ಮನಸ್ಸಿಟ್ಟ ಶಿವಯೋಗಿನಿ. ಆಧ್ಯಾತ್ಮಿಕ ಪರಿಪೂರ್ಣತೆಗಾಗಿ ನಾಡೆಲ್ಲ ಸಂಚರಿಸಿದ ಲಲ್ಲ ಹೋದಲ್ಲೆಲ್ಲ ಆಕೆಗೆ ಅನೇಕರು ಶಿಷ್ಯರಾದರು. ಆಕೆ ಹೇಳಿದ ವಾಕ್ಯಗಳನ್ನು 'ಲಲ್ಲ ವಾಕ್', 'ಲಲ್ಲ ವಾಕ್ಯಾನಿ' ಅನ್ನುತ್ತಾರೆ.

ಕಾಶ್ಮೀರದ ಶ್ರೀನಗರದ ಬಳಿ ಇರುವ ಪಂಡ್ರೆನ್ತಾನ್ ಪುರಾಣಾಧಿಷ್ಠಾನ ಆಕೆಯ ಹುಟ್ಟೂರು. ಅದನ್ನು ಸೇಂಪೂರ್ ಎಂದೂ ಕರೆಯುತ್ತಾರೆ. ಆಕೆಯ ಹನ್ನೆರಡನೆ ವಯಸ್ಸಿಗೆ ಪಾಂಪೂರ್ (ಸಂಸಾಪುರ-ಪದ್ಮಪುರ) ನಲ್ಲಿಯ ಸಿದ್ಧರೊಬ್ಬರ ಮಗನಾದ ನಿಕಾಭಟ್ಟನೊಡನೆ ವಿವಾಹವಾಯಿತು. ಮಾವ ಆಕೆಗೆ ಕೊಟ್ಟ ಹೆಸರು ಪದ್ಮಾವತಿ (ಪದ್ಮನ್ ಡೆಡ್). ಆದರೆ ಜನ ಆಕೆಯನ್ನು ಪ್ರೀತಿಯಿಂದ ಕರೆದದ್ದು ಲಲ್ಲ, ಲಲ್ಲ ಡೆಡ್ ಎಂದೇ.

ಗಂಡನ ಮಲತಾಯಿಯೇ ಅತ್ತೆ. ಆಕೆ ಲಲ್ಲಳಿಗೆ ವಿಪರೀತ ಕಿರುಕುಳ ಕೊಡುತ್ತಿದ್ದಳೆಂದೂ ಅವೆಲ್ಲವನ್ನೂ ಸಹಿಸಿ ಸದಾ ಶಿವಧ್ಯಾನ-ಆರಾಧನೆಗಳಲ್ಲಿ ಮುಳುಗುತ್ತಿದ್ದ ಲಲ್ಲ ಒಂದು ದಿನ ವಿವಸ್ತ್ರಳಾಗಿ ಶಿವನನ್ನು ಹುಡುಕುತ್ತ ಹೊರಟಳೆಂದೂ ಹೇಳುತ್ತಾರೆ.

ಲಲ್ಲಳಿಗೆ ಪೂರ್ವ ಜನ್ಮದ ನೆನಪುಗಳಿದ್ದವೆಂಬುದಕ್ಕೆ ಅನೇಕ ನಿದರ್ಶನಗಳನ್ನು ಕೊಡಲಾಗಿದೆ. ಆಕೆಯ ವಾಕ್‌ಗಳಲ್ಲಿ ಅಂಥ ಅಂಶಗಳೂ ಸಿಗುತ್ತವೆ. ಪಂಡ್ರೆನ್ತಾನ್ ನಲ್ಲೇ ಮೊದಲು ಒಂದು ಮಗುವಿಗೆ ಜನ್ಮವಿತ್ತಳೆಂದೂ 'ಈ ಕೂಸು ನನಗೇನಾಗಬೇಕು ?' ಎಂದು ಗುರುಗಳನ್ನು ಕೇಳಿದಳೆಂದೂ ಅವರು 'ನಿನ್ನ ಮಗು' ಎಂದಾಗ ಆಕೆ ನಾನೀಗಲೇ ಸತ್ತು, ಮಹೂ್ರಮ್ ಗ್ರಾಮದಲ್ಲಿ ಇಂತಿಕಾ ಗುರುತಿರುವ ಹೆಣ್ಣು ಕುದುರೆಯಾಗಿ ಹುಟ್ಟುತ್ತೇನೆ. ಮುಂದೆ ಈ ಮಗುವೇ ನನ್ನ ಗಂಡನಾಗುತ್ತಾನೆ. ಬೇಕಾದರೆ ಪರೀಕ್ಷಿಸಿ ಎಂದಳೆಂದೂ ಮುಂದೆ ಕುದುರೆ, ನಾಯಿ ಇತ್ಯಾದಿ ಜನ್ಮಗಳನ್ನು ತಳೆದು ಏಳನೆ ಜನ್ಮದಲ್ಲಿ ಅದೇ ಪಂಡ್ರೆನ್ತಾನ್ ಊರಿನ ಅದೇ ಮನೆಯಲ್ಲಿ ಲಲ್ಲೇಶ್ವರಿಯಾಗಿ ಜನಿಸಿದಳೆಂದೂ ನಿಕಾಭಟ್ಟನೊಂದಿಗೆ ವಿವಾಹವಾದ ಸಂದರ್ಭದಲ್ಲಿ ಆಕೆ ಹಿಂದಿನ ಜನ್ಮವೊಂದರಲ್ಲಿ ನನ್ನ ಮಗನಾಗಿದ್ದವನೇ ಇಂದು ಮದುಮಗನಾಗಿದ್ದಾನೆಂದು ಹೇಳಿದ್ದಾಗಿಯೂ ಕಥೆಯಿದೆ.

''ಸರೋವರವು ಶೂನ್ಯದಲ್ಲಿ ಲೀನವಾದದ್ದನ್ನು ನಾನು ಏಳು ಬಾರಿ ಕಂಡಿದ್ದೇನೆ'' ಎಂದು ಆಕೆ ಹೇಳಿದ ಮಾತು ಪ್ರಳಯವನ್ನು ಕುರಿತದ್ದಾಗಿರಬಹುದು. ಆಕೆಗೆ ಪುನರ್ಜನ್ಮ ಕಲ್ಪನಾ ಯೋಗ ಸಿದ್ಧಿ ಇದ್ದಿರಬಹುದು ಎಂಬ ಅಭಿಪ್ರಾಯವಿದೆ.

ಅತ್ತೆ ಹೊಟ್ಟೆ ತುಂಬ ಊಟ ಕೊಡುತ್ತಿರಲಿಲ್ಲ. ಹಬ್ಬ-ಜಾತ್ರೆ ಏನು ವಿಶೇಷವಾದರೂ ಲಲ್ಲಳಿಗೆ ಊಟ ಇಲ್ಲ. ತಟ್ಟೆಯಲ್ಲಿ ಚಪ್ಪಡಿಕಲ್ಲನ್ನಿಟ್ಟು ಅದರ ಮೇಲೆ ಕೊಂಚವೇ ಅನ್ನ ಹಾಕಿ, ನೋಡಲು ತಟ್ಟೆ ತುಂಬಾ ಬಡಿಸಿದಂತೆ ಕಾಣುವ ಹಾಗೆ ಮಾಡುತ್ತಿದ್ದಳಂತೆ. ಇವತ್ತಿಗೂ 'ಕುರಿನಾದ್ರು, ಕೊಯ್ಲಿ ಮರೀನಾದ್ರೂ, ಕೊಯ್ಲಿ ಲಲ್ಲೀಗ್ ಮಾತ್ರ ಕಲ್ಲು' ಎಂಬ ಪ್ರಚಲಿತ ಗಾದೆ ಇಂಥ ಪ್ರಸಂಗವನ್ನು ಕುರಿತದ್ದೇ ಆಗಿರಬಹುದು.

ನೀರು ತರಲು ನದೀಘಟ್ಟಕ್ಕೆ ಹೋಗುತ್ತಿದ್ದ ಲಲ್ಲ ನೀರಮೇಲೇ ನಡೆದು ಆಚೆ ದಡದಲ್ಲಿದ್ದ ಶಿವಾಲಯದಲ್ಲಿ ಧ್ಯಾನಮಗ್ನಳಾಗಿಬಿಡುತ್ತಿದ್ದಳು. ತಡವಾಗಿ ಮನೆಗೆ ಬರುತ್ತಿದ್ದ ಲಲ್ಲಳ ಚಾರಿತ್ರ್ಯವನ್ನೇ ಶಂಕಿಸಿದ ಅತ್ತೆ ಅವಳ ಗಂಡನಿಗೆ ಚಾಡಿ ಹೇಳಿದಳು. ಸಿಟ್ಟಿಗೆದ್ದ ಗಂಡ ಅವಳತ್ತ ಕಲ್ಲು ತೂರಿದ. ಆ ಕಲ್ಲು ಅವಳ ತಲೆಯ ಮೇಲಿದ್ದ ನೀರಿನ ಮಡಕೆಗೆ ತಾಗಿ ಮಡಕೆ ಚೂರಾಯಿತು. ಆದರೆ ತಲೆಯ ಮೇಲೆ ನೀರು ಮಂಜುಗಡ್ಡೆಯಂತೆ ಕೂತಿತ್ತು. ಲಲ್ಲ ಒಂದೂ ಮಾತಾಡದೆ ನೀರನ್ನು ಪಾತ್ರೆಗಳಿಗೆ ತುಂಬಿಸಿದಳು. ಮತ್ತು ಮಿಕ್ಕ ಮಂಜು ಗಡ್ಡೆಯ ಚೂರನ್ನು ಹೊರಗೆಸೆದಳು. ಅದೇ ಒಂದು ಕೊಳವಾಯಿತೆಂದೂ ಈಗಲೂ 'ಲಲ್ಲಕೊಳ' ಎಂಬ ಹೆಸರಿನ ಕೊಳವೊಂದು ಇದೆಯೆಂದೂ ಹೇಳುತ್ತಾರೆ.

*ಲಲ್ಲೇಶ್ವರಿಯ ವಿವರಗಳು ಹೆಚ್ಚಾಗಿ ಸಿಗುವುದಿಲ್ಲ. ಆಕೆ ಇದ್ದಾಗಲೇ ಯಾರೂ ಬರೆದಿಡಲಿಲ್ಲ. 1654ರಲ್ಲಿ ಮೊದಲಬಾರಿ ಪುಸ್ತಕವಾದದ್ದು ಬಾಬಾ ದಾವೂದ್ ಮಿಶ್‌ಕಾತೀ ಯವರ 'ಅಸ್ರಾರ್-ಉಲ್-ಅಬ್ರರ್'ನಲ್ಲಿ. ಆಕೆಯನ್ನು ದೇವರ ಪ್ರೇಮದಲ್ಲಿ ಉನ್ಮತ್ತಳಾಗಿರುವಳು, ಸಂಪೂರ್ಣ ಅರಿವು-ಜ್ಞಾನ ಉಳ್ಳವಳು ಮಜಮಾನ್-ಇ- ಆಜಲಾ, ಎಂದು ಹೇಳುತ್ತಾರೆ ಮಿಶ್‌ಕಾತೀ.*

*ಭಾಸ್ಕರಾಚಾರ್ಯ ಪಂಡಿತನು ಆಕೆಯ ಮುಖ್ಯವಾದ ಹಾಡು-ವಚನಗಳನ್ನು ಸಂಸ್ಕೃತಕ್ಕೆ ತಂದಿದ್ದಾನೆ. ಇಂಗ್ಲಿಷ್ ಭಾಷೆಯಲ್ಲಿ ಇನ್ನಷ್ಟು ಹೆಚ್ಚು ಸಂಗ್ರಹ ಸಿಗುತ್ತದೆ. ಕಾಶ್ಮೀರಿ ಭಾಷಾಪಂಡಿತರಾದ ಆನಂದಕಾಲ್ ಹಾಗೂ ಸರ್ ಜಾರ್ಜ್ ಗ್ರಿಯರ್‌ಸನ್ನರ ಇಂಗ್ಲಿಷ್ ಅನುವಾದಗಳಿವೆ.*

*ಕನ್ನಡದಲ್ಲಿ ಮೈಸೂರು ವಿಶ್ವವಿದ್ಯಾಲಯದಲ್ಲಿ ಕುವೆಂಪು ಅವರು ಪ್ರಸಾರಾಂಗದಿಂದ ಪ್ರಕಟಿಸಿದ ಜಿ. ರುದ್ರಪ್ಪನವರು ರಚಿಸಿದ ಪುಟ್ಟ ಹೊತ್ತಿಗೆ ಮತ್ತು ಈಚೆಗೆ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಸಾಮಾಜಿಕ ಚಿಂತನಮಾಲೆ ಸರಣಿಯಲ್ಲಿ ಸಂಧ್ಯಾ ಅವರು ರಚಿಸಿದ 'ಲಲ್ಲೇಶ್ವರಿ' ಎಂಬ ಪುಟ್ಟ ಪುಸ್ತಿಕೆ ಲಭ್ಯವಿವೆ. ಜಯಲಾಲ್ ಕಾಲ್ ಅವರ 'ಲಲ್ಲ ಡೆಡ್' ಪುಸ್ತಿಕೆ ಕೇಂದ್ರ ಸಾಹಿತ್ಯ ಅಕಾಡೆಮಿಯಿಂದ ಪ್ರಕಟವಾಗಿದೆ.*

ಇಲ್ಲಿಂದಾಚೆಗೆ ಅವಳ ಪವಾಡಗಳು ಜನರಿಗೆ ತಿಳಿದು ಅವಳನ್ನು ಹುಡುಕಿ ಬರತೊಡಗಿದರು. ಇನ್ನು ಮನೆಯಲ್ಲಿರದೆ ಆಕೆ ಉನ್ಮತ್ತಳಂತೆ ಶಿವನನ್ನು ಹುಡುಕುತ್ತ ಹೊರಟಳು. ''ಹೀಬ್ರೂಗಳ ನಬೀಗಳಂತೆ, ಮುಸ್ಲಿಮರ ದರ್ವೇಶಿಗಳಂತೆ ಲಲ್ಲ ವಿಚಿತ್ರವಾಗಿ ಉನ್ಮತ್ತಳಂತೆ ಶಿವನನ್ನು ಅರಸುತ್ತಾ ಹಾಡುತ್ತಾ ಕುಣಿಯುತ್ತಾ ಗೊತ್ತುಗುರಿ ಇಲ್ಲದೆ ನಗ್ನಳಾಗೇ ಅಲೆಮಾರಿಯಾದಳು...'' ಆಕೆಯ ಪವಾಡಗಳು ಏನ್ನಲಾದ ಅನೇಕ ಅಂಶಗಳು ಬಹು ದೊಡ್ಡ ತತ್ವವನ್ನೇ ಹೇಳುತ್ತವೆ. ಅವು ಹಿಂದೂ-ಮುಸಲ್ಮಾನರಿಬ್ಬರಿಗೂ ಅನ್ವಯವಾಗುತ್ತವೆ.

ಸಿದ್ಧ ಶ್ರೀಕಂಠ ಆಕೆಯ ಗುರು ಎಂದರೂ ಅನೇಕ ಸಂದರ್ಭಗಳಲ್ಲಿ ಗುರುವಿಗೆ ಗುರುವಾಗಿದ್ದಾಳೆ ಆಕೆ. ಅದೊಂದು ವಿಚಿತ್ರ ಗುರು-ಶಿಷ್ಯ ಸಂಬಂಧ. ಪರಸ್ಪರ ಟೀಕೆ ಮಾಡಿಕೊಳ್ಳುತ್ತ ಸತ್ಯ ದರ್ಶನ ಮಾಡಿಸುವ ಪರಿಯೊಂದನ್ನು ಅಲ್ಲಿ ಕಾಣಬಹುದು. ಲಲ್ಲ ಬಹುತೇಕ ಉಪಮೆಗಳನ್ನು ಬಳಸಿ ಮಾತಾಡುತ್ತಾಳೆ.

ಸಿದ್ಧ ಶ್ರೀಕಂಠ ನಲವತ್ತು ದಿನಗಳ ತಪಸ್ಸಿಗೆ ಕುಳಿತ. ಲಲ್ಲ 'ನಂದೀ ಮಾರ್ಗದಲ್ಲಿ ತನ್ನ ಕುದುರೆ ಒದೆಸಿಕೊಳ್ಳುತ್ತಿರುವುದನ್ನು ಕಾಣುತ್ತಾ ತಪಸ್ಸು ಮಾಡುತ್ತಿದ್ದಾನೆ' ಎಂದು ಅಣಕವಾಡಿದಳು. ಧ್ಯಾನ ಮಧ್ಯೆ ತನ್ನ ಮನಸ್ಸು ಹಳಿತಪ್ಪಿದ್ದನ್ನು ಆತ ಗ್ರಹಿಸಿದ. ಆಕೆ ನಿಜವಾದ ತಪಸ್ಸು ಹೇಗಿರುತ್ತದೆ ಎಂದು ತೋರಿಸಿದಳು :

ಒಂದು ದೊಡ್ಡ ಮಡಕೆಯಲ್ಲಿ ಕಾಲಿಟ್ಟು ನಿಂತು ಮೇಲೆ ಮತ್ತೊಂದು ಮಡಕೆಯನ್ನು ಕವುಚಿ ಹಾಕಿಕೊಂಡಳು. ಚಂದ್ರನು ಕ್ಷೀಣಿಸಿದಂತೆಲ್ಲ ಆಕೆಯೂ ಕುಗ್ಗಿದಳು. ಹದಿನೈದನೆ ದಿನ ಅಮಾವಾಸ್ಯೆಯ ರಾತ್ರಿ ಅವಳು ಪಾದರಸವಾಗಿದ್ದಳು. ಅದು ನಡುಗುತ್ತಿತ್ತು. ಮರುದಿನದಿಂದ ಚಂದ್ರ ವೃದ್ಧಿಸತೊಡಗಿದಂತೆ ಅವಳೂ ಹಿಗ್ಗುತ್ತ ಹುಣ್ಣಿಮೆಯ ರಾತ್ರಿಗೆ ಲಲ್ಲಳಾಗಿ ಎದ್ದು ಬಂದಳು. ಸಿದ್ಧ ಶ್ರೀಕಂಠನು ''ಆ ಚೂರು ಪಾದರಸವೇಕೆ ನಡುಗುತ್ತಿತ್ತು ?'' ಎಂದು ಕೇಳಿದ. ''ಆ ಪಾದರಸವೇ ನಾನು. ಶರೀರ ಬಂಧನಗಳಿಂದ, ಇಂದ್ರಿಯ ಮೋಹದಿಂದ, ಮನಸ್ಸು- ಅಹಂಗಳಿಂದ ಹೊರತಾದ ನಾನು. ಆದರೂ ನಾನು ಮುಕ್ತಿ ಸಿಗುವುದೋ ಇಲ್ಲವೋ ಎಂಬ ಭಯದಿಂದ ನಡುಗುತ್ತಿದ್ದೆ. ದೇಹದಂಡನೆಯಿಂದ ಮುಕ್ತಿ ಎಂದೂ ಸಿಗುವುದಿಲ್ಲ. ಅದು ದೇವರ ದಯದಿಂದ ಮಾತ್ರ ಸಿಗುತ್ತದೆ'' ಎಂದಳು.

ಈ ಕುರಿತು ಮಂತ್ರಪಠನ, ಆಂಗಿಕ ಸನ್ನೆಗಳಿಂದ ಕೂಡಿದ ಮುಸ್ಲಿಂ ವಿಧಿಗಳ ವಿರುದ್ಧವಾಗಿ ಲಲ್ಲ ಹೀಗೆ ಪವಾಡ ಮಾಡಿದಳು ಎಂದು ಮುಸ್ಲಿಂ ವಿದ್ವಾಂಸರು ಹೇಳುತ್ತಾರೆ.

ಒಮ್ಮೆ ಲಲ್ಲ ಬರಿ ಮೈಯಲ್ಲಿ ರಸ್ತೆಯಲ್ಲಿರುವುದನ್ನು ಕಂಡ ಅವಳ ಮಾವ ಮನೆಯೊಳಕ್ಕೆ ಕರೆದೊಯ್ದು ಬಟ್ಟೆ ತೊಡಿಸಲು ಪ್ರಯತ್ನಿಸಿದ. ''ಅಲ್ಲಿ ಮನುಷ್ಯರೇ ಇಲ್ಲ. ಇರುವುದೆಲ್ಲ ಮೇಕೆ - ಕುರಿಗಳು'' ಎಂದು ನಕ್ಕಳು ಲಲ್ಲ. ಹೊರಗೆ ನೋಡಿದಾಗ ಮಾವನಿಗೆ ಎಲ್ಲರೂ ಕುರಿ-ಮೇಕೆಗಳಾಗಿ ಕಂಡರಂತೆ.

ಲಲ್ಲ ಮೂಢನಂಬಿಕೆ - ಅರ್ಥಹೀನ ಸಂಪ್ರದಾಯಗಳನ್ನು ಖಂಡಿಸಿದವಳು. ದೇವಸ್ಥಾನದಲ್ಲಿ ಪೂಜೆಯಲ್ಲಿದ್ದ ಸಿದ್ಧ ಶ್ರೀಕಂಠನಿಗೆ ತಾನು ಬಹಿರ್ದೇಶಕ್ಕೆ ಹೋಗಲು ಯಾರೂ ಇಲ್ಲದ ಸ್ಥಳ ತೋರಿಸು ಅಂದಳು. ಆತ ನಿರ್ಜನ ಪ್ರದೇಶಕ್ಕೆ ಕರೆದೊಯ್ದ. ಲಲ್ಲ ಕೂತಲ್ಲೆಲ್ಲ ಕೆರೆದಳು. ಕೆರೆದಲ್ಲೆಲ್ಲ ಲಿಂಗಗಳಿದ್ದವು. ದೇವರಿಲ್ಲದ ಸ್ಥಳವೇ ಇಲ್ಲ! ಅದೇ ಲಲ್ಲ ಮೂರ್ತಿ ಪೂಜೆಯನ್ನು ವಿರೋಧಿಸುತ್ತಿದ್ದಳು. ಸಿದ್ಧ ಶ್ರೀಕಂಠನ ಪೂಜಾ ಕೊಠಡಿಯಲ್ಲಿದ್ದ ದೇವರ ವಿಗ್ರಹದ ಮೇಲೆಯೇ ಒಮ್ಮೆ ಹೇಸಿಗೆ ಮಾಡಿದ್ದಳಂತೆ.

ಸಂತ ಶೇಖ್ ನೂರುದ್ದೀನ್ ವಲಿ ಎಂಬಾತನೊಂದಿಗೆ ಆಕೆ ಆಧ್ಯಾತ್ಮ ಚರ್ಚೆ ಮಾಡುತ್ತಿದ್ದಳೆಂದೂ ಆತ ಹುಟ್ಟಿದಾಗ ತಾಯಹಾಲು ಕುಡಿಯಲು ಬರದೆ ಹಟಮಾಡುತ್ತಿದ್ದ



ಮಗುವನ್ನು ರಸ್ತೆಯಲ್ಲಿ ಹಾದು ಹೋಗುತ್ತಿದ್ದ ಲಲ್ಲ ಕಂಡಳೆಂದೂ ''ಇಲ್ಲಿ ಹುಟ್ಟಿ ಬರಲು ನಾಚಿಕೆ ಆಗಲಿಲ್ಲ, ತಾಯ ಮೊಲೆ ಹಾಲು ಕುಡಿಯಲು ನಾಚಿಕೆಯೆ ?'' ಎಂದು ಅಣಕವಾಡಿ ತಾನೇ ಮೊಲೆ ಹಾಲು ಕುಡಿಸಿದ ಳೆಂದೂ ಕತೆಯಿದೆ. ಶೇಕ್ ವಲಿ ಬರೆದ ಒಂದು ಶ್ರಕ್‌ನಲ್ಲಿ ಈ ಪ್ರಸ್ತಾಪವಿದೆ.

*ಪದುರು ಪುರದವಳು ಲಲ್ಲೆ*
*ಯೋಗಿನಿ ತಾಯಿ*
*ಪರಮ ಸುಧ ಮೊಗೆದು ಕುಡಿದು*
*ಸಲಹಿದಳು ಸಂತರ ತನ್ನ ತೊಡೆ ಮೇಲೆ*
*ಪ್ರಭು, ಕೊಡೊ ನನಗಾ ಕೃಪೆಯ.*

+ + +

14ನೇ ಶತಮಾನದಲ್ಲಿ ತೈಮೂರರ ಆಳ್ವಿಕೆ ಇತ್ತು. ಸಯೀದ್‌ಗಳು ಪಲಾಯನ ಮಾಡುತ್ತಿದ್ದರು. ಹಾಗೆ ಮೀರ್ ಸಯೀದ್ ಹಮದಾನಿ ಎಂಬುವವ ತನ್ನ ಜನರೊಂದಿಗೆ ಕಾಶ್ಮೀರಕ್ಕೆ ಬಂದ. ಅವರೆಲ್ಲ ತೈಮೂರನು ಕೆಂಪಗೆ ಕಾದ ಕಬ್ಬಿಣದ ಮೇಲೆ ಸವಾರಿ ಮಾಡಿ ತಮ್ಮ ಪರಿಶುದ್ಧತೆ ಸಾಬೀತು ಮಾಡಬೇಕು ಎಂದದ್ದರಿಂದ ಹೆದರಿ ಪಲಾಯನ ಮಾಡಿದ್ದರು.

ಲಲ್ಲಳು ಹಮದಾನಿ ಬರುತ್ತಿರುವುದನ್ನು ಕಂಡು ದಿನಸಿ ಅಂಗಡಿಯಲ್ಲಿ ಬಚ್ಚಿಟ್ಟುಕೊಳ್ಳುವಂತೆ ನಟಿಸಿದಳು. ಅಂಗಡಿಯವ ಓಡಿಸಿದ. ಹತ್ತಿರದ ರೊಟ್ಟಿ ಅಂಗಡಿಗೆ ನುಗ್ಗಿದಳು. ಬಾಯಿ ತೆರೆದಿದ್ದ ದೊಡ್ಡ ಒಲೆಯಲ್ಲಿ ಜಿಗಿದಳು. ಅಂಗಡಿಯವ ಹೆದರಿ ಒಲೆಯ ಬಾಯಿ ಮುಚ್ಚಿಬಿಟ್ಟ. ಹಮದಾನಿ ಬಂದು ಒಲೆಯ ಬಾಯಿ ತೆರೆದಾಗ ಲಲ್ಲ ಸ್ವರ್ಗಲೋಕದ ಹಸಿರುಡುಗೆಯಲ್ಲಿ ಎದ್ದು ಬಂದಳು. ತೈಮೂರನು ಒಡ್ಡಿದ ಪಣ ಕಷ್ಟಕರವಾದ್ದೇನಲ್ಲ ಎಂದು ಮನದಟ್ಟು ಮಾಡಲು ಲಲ್ಲ ಹಾಗೆ ಮಾಡಿದಳೆಂದು ಹೇಳುತ್ತಾರೆ. ಈ ಹಿನ್ನೆಲೆಯಲ್ಲಿ 'ಲಲ್ಲ ಹೊಕ್ಕಿದ್ದು ದಿನಸಿ ಅಂಗಡಿ, ಬಂದಿದ್ದು ರೊಟ್ಟಿ ಅಂಗಡಿಯಿಂದ' ಎಂಬ ನಾಣ್ಣುಡಿಯೊಂದು ಇಂದಿಗೂ ಬಳಕೆಯಲ್ಲಿದೆ.

ಹಮದಾನಿ-ಲಲ್ಲ ಭೇಟಿಯೇ ಆಗಲಿಲ್ಲ ಎಂದು ಇತಿಹಾಸಕಾರರು ಹೇಳುತ್ತಾರೆ. ಆದರೆ ಪವಾಡಗಳು ಕತೆಗಳು ಇವೆ. ಇವುಗಳ ಹಿಂದಿನ ಅರ್ಥಗಳು ವಿಶೇಷ ಮಹತ್ವದವು ಎಂಬುದಕ್ಕೇ ಅವು ಮುಖ್ಯವಾಗುತ್ತವೆ.

ಒಮ್ಮೆ ಸಯೀದ್ ಹಮದಾನಿಯನ್ನು ಕಂಡು ಲಲ್ಲ ನಾಡಿ, ಮೊಳಕಾಲು, ಮುಂಗೈಗಳಿಂದ ದೇಹವನ್ನು ಮರೆ ಮಾಡಿಕೊಂಡಳು. 'ಜನರೆದುರು ಬೆತ್ತಲೆ ತಿರುಗುತ್ತೀ ಈಗೇನು ನಾಚಿಕೆ' ಎಂದ ಹಮದಾನಿಗೆ ''ನಾನೊಬ್ಬಳು ಹುಚ್ಚಿ. ಗಂಟು ಕೂದಲಿನ ಕೊಳಕಿ, ವಡ್ಡಿ, ದಾರಿಯಲ್ಲಿ ಹೋಗುವವರಿಗೆ ನಾನು ನಾಚುವುದಿಲ್ಲ. ನೀನೊಬ್ಬ ಮನುಷ್ಯ. ನನ್ನ ನಗ್ನತೆ ನೋಡಿಬಿಟ್ಟೆ. ಮರ್ಯಾದೆ ಪ್ರಶ್ನೆ. ಮೈ ಮುಚ್ಚಿಕೊಳ್ಳುತ್ತಿದ್ದೇನೆ'' ಎಂದಳಂತೆ.

ಆಕೆ ನಡೆದು ಹೋಗುತ್ತಿದ್ದರೆ ಮಕ್ಕಳು ಹುಚ್ಚಿ, ಮುದುಕಿ ಎಂದು ಕೂಗುತ್ತಾ ಗಲಾಟೆ ಮಾಡುತ್ತಿದ್ದವು. ಒಮ್ಮೆ ಬಟ್ಟೆ ಅಂಗಡಿಯವನೊಬ್ಬ ಹುಡುಗರನ್ನು ಓಡಿಸಿ ಅವಳಿಗೆ ಬಟ್ಟೆಕೊಟ್ಟ. ಆ ಬಟ್ಟೆಯನ್ನು ಎರಡು ತುಂಡುಮಾಡಿ ತನ್ನ ಎರಡೂ ಭುಜದ ಮೇಲೆ ಹಾಕಿಕೊಂಡಳು. ದಾರಿಯಲ್ಲಿ ಜನ ತಲೆಬಾಗಿ ನಮಸ್ಕರಿಸಿದಾಗ ಒಂದು ಗಂಟು ಹಾಕಿದಳು. ಅವಮಾನ ಮಾಡಿದಾಗ ಇನ್ನೊಂದು ತುಂಡಿಗೆ ಗಂಟು ಹಾಕಿದಳು. ಕೊನೆಗೆ ಅವೆರಡು ಸಮ ಸಮವಾಗಿದ್ದುದನ್ನು ಅಂಗಡಿಯವನಿಗೆ ತೋರಿಸುತ್ತ

''ಬೈಗುಳ ಸಾವಿರ ಬೈದರೂ ಅವರೆಲ್ಲ
ಬಳಲೆನು ನಾನು ತೊಳಲೆನು ನಾನು....'' ಎಂದು ಹಾಡಿದಳು. ಇಂಥ ಅನೇಕ ದಂತಕತೆಗಳು ಆಕೆಯ ಬಗ್ಗೆ ಹರಡಿಹೋಗಿವೆ.

ಶ್ರೀನಗರದಿಂದ 28 ಮೈಲಿ ದೂರಕ್ಕಿರುವ ವೆಜಿಬ್ರಾರ್ ಎಂಬಲ್ಲಿ ಜುಮ್ಮಾ ಮಸೀದಿಯ ಗೋಡೆಯ ಹಿಂದೆ ಅವಳ ಶರೀರದಿಂದ ಜ್ಯೋತಿಯೊಂದು ಹೊರಟು ಮಾಯವಾಯಿತು. ಅವಳಿಗಾಗ 71 ವಯಸ್ಸು ಎಂದು ಪೀರ್ ಗುಲಾಮ್ ಹಸನ್ ಬರೆಯುತ್ತಾರೆ. ಆ ಬಗ್ಗೆ ಈ ಹಿಂದೆ ಹೇಳಿದ ಹಾಗೆ ಮಡಕೆಯಲ್ಲಿ ಕೂತು, ಮೇಲೊಂದು ಮಡಕೆ ಕವುಚಿಕೊಂಡಳು ಲಲ್ಲ. ಆಮೇಲೆ ತೆಗೆದು ನೋಡಿದರೆ ಖಾಲಿಯಿತ್ತು. ಅವಳು ಒಂದು ಕುರುಹೂ ಉಳಿಸದೆ ಕರಗಿ ಹೋದಳು ಎಂದೂ ದಂತ ಕಥೆಯಿದೆ.

## ಕಾಶ್ಮೀರ ಅಂದು - ಇಂದು

ಕಾಶ್ಮೀರ ಎಂದರೆ ಮಧುರಾನುಭೂತಿಯಿಂದ ಪುಲಕಗೊಳ್ಳುತ್ತಿದ್ದ ಕಾಲವಿತ್ತು. ಆಳ ಕಂದರಗಳು, ಪರ್ವತ ಶ್ರೇಣಿ, ಮಂಜು ಮುಸುಕಿದ ದಾರಿಗಳು, ಹರಿವ ನದಿಗಳು ಎಲ್ಲವೂ ಸುಂದರ. ಒಂದು ಕಾಲಕ್ಕೆ ಮಧುಚಂದ್ರಕ್ಕೆ ಹೆಸರಾದ ಸ್ಥಳ. ಪ್ರಕೃತಿ ಸೌಂದರ್ಯದ ತವರು. ಹಾಗೇ ಸಾಹಿತ್ಯ-ಸಂಸ್ಕೃತಿಗೂ ಹೆಸರಾದ ಸ್ಥಳ ಕಾಶ್ಮೀರ. ಹಿಂದೂ-ಬೌದ್ಧ ಧರ್ಮಗಳ ಕೇಂದ್ರ. ಮಹಾಯಾನವೇ ಮೊದಲಾದ ಬೌದ್ಧ ಉಪಪಂಥಗಳು ಹುಟ್ಟಿದ್ದು, ಪ್ರಚಾರಗೊಂಡಿದ್ದು ಇಲ್ಲಿಂದ. ಹೊರಗಿನವರನ್ನು ಆಕರ್ಷಿಸಿ, ಯಾತ್ರಿಗಳು ಬರತೊಡಗಿದರು. ಚೀನಾದ ಯಾತ್ರಿಕರು ಕಾಶ್ಮೀರದ ಬಗ್ಗೆ ಕೊಂಡಾಡಿ ಬರೆದರು.

ಹನ್ನೊಂದನೇ ಶತಮಾನಕ್ಕೆ ಶೈವ ಸಿದ್ಧಾಂತ ಹಾಗೂ 'ತಂತ್ರ' ಸಿದ್ಧಿಯ ಕಡೆಗೆ ವಾಲಿದ್ದು, ಕ್ರಮೇಣ ವೈಷ್ಣವ, ಶಾಕ್ತ ಪಂಥಗಳಿಗೂ ಎಡೆಮಾಡಿತ್ತು. ಹದಿಮೂರನೇ ಶತಮಾನದ ಹೊತ್ತಿಗೆ ಸಯ್ಯಿದ್‌ಗಳು ಬಂದರು. ರಾಜಕೀಯವಾಗಿ ಅನೇಕ ಏರುಪೇರುಗಳನ್ನು ಕಂಡಿತು ಕಾಶ್ಮೀರ. ಇವೆಲ್ಲದರ ನಡುವೆಯೂ ಆಧ್ಯಾತ್ಮಿಕ-ದಾರ್ಶನಿಕ, ಸಾಹಿತ್ಯ ಮೀಮಾಂಸೆ, ಸೌಂದರ್ಯ ಶಾಸ್ತ್ರಗಳಿಗೆ ತನ್ನದೇ ಆದ ವಿಶಿಷ್ಟ ಕೊಡುಗೆ ಕೊಟ್ಟದ್ದು ಕಾಶ್ಮೀರ. ವಸುಗುಪ್ತ, ಅಭಿನವಗುಪ್ತ, ಶೇಖ ನೂರುದ್ದೀನ್ ಅಲಿ, ಹಮದಾನ್, ಬಾಬಾ ನಾಸ್ರುದ್ದೀನ್‌ರನ್ನು ಕೊಟ್ಟ ದೇಶ ಕೃಷ್ಣಜೂ ರಜದಾನ್, ಪರಮಾನಂದ, ಶಮಾಸ್ ಫಕೀರ್ ಮೊದಲಾದ ಸಂತ ಕವಿಗಳನ್ನೂ ಕೊಟ್ಟಿತು.

'ಧ್ವನ್ಯಾಲೋಕ'ದ ಆನಂದವರ್ಧನ, ಕ್ಷೇಮೇಂದ್ರ, ಕಲ್ಹಣ, ಉತ್ಪಲದತ್ತಾಚಾರ್ಯ, ಭೋಜದೇವ ಇವರೆಲ್ಲ ಕಾಶ್ಮೀರದವರೆ. ವಚನ ಚಳುವಳಿಯ ಹೊತ್ತಿನಲ್ಲಿ ಕೂಡಾ ಕಾಶ್ಮೀರದ ಕೊಡುಗೆ ಇತ್ತು.

ಕಾಶ್ಮೀರ ಎಂದರೆ ಸೇಬು, ದೋಣಿಮನೆಗಳು, ಸುಂದರಿಯರು, ರೇಷ್ಮೆ, ಕಸೂತಿಯ ಕಂಬಳಿಗಳು ಹೀಗೆ ಅದೇಕೋ ನೆನಪಿಗೆ ಬರುತ್ತದೆ. ಆದರೆ ಇಂದು ಭಯೋತ್ಪಾದನೆಯಿಂದ ತತ್ತರಿಸಿ ಹೋಗಿದೆ ಕಾಶ್ಮೀರ. ಪ್ರವಾಸಿಗರಿಗೆ ಜೀವಭಯ, ಸ್ಥಳೀಯರಿಗೆ ಬದುಕಲು ನೆಲೆಯಿಲ್ಲ. ಧರ್ಮಾಂಧತೆಯು, ಸೌಂದರ್ಯ, ಆಧ್ಯಾತ್ಮ ಎಲ್ಲವನ್ನೂ ನಾಶ ಮಾಡಿದೆ. ಕೆಟ್ಟ ರಾಜಕೀಯ ಎಲ್ಲವನ್ನೂ ಕಲುಬು ಗೊಳಿಸಿದೆ.

ಒಂದು ಕಾಲಕ್ಕೆ ತೆರೆದ ಮನಸ್ಸು , ಸಮನ್ವಯ ನಿಲುವು ಇದ್ದ ಸಂತರನೇಕರ ನಡುವೆ ಲಲ್ಲೇಶ್ವರಿ ಸಂಸ್ಕಾರವಂತ ಮನೆತನದಿಂದ ಬಂದ ಅನುಭಾವಿ. ಹಜರತ್ ನೂರುದ್ದೀನ್ ವಲಿಯ ಸಮಕಾಲೀನಳು. ಒಂದರ್ಥದಲ್ಲಿ ಆತನಿಗೆ ಗುರು. ಅಂತರ್ಯಕ್ಕೆ ಮನಮಾಡಿ ಲೋಕದ ಡೊಂಕು ತಿದ್ದಲು ಹೊರಟ ಬೆತ್ತಲೆ ಯೋಗಿನಿ ಲಲ್ಲೇಶ್ವರಿ. ಹನ್ನೆರಡನೆಯ ಶತಮಾನದ ಅಕ್ಕಮಹಾದೇವಿ ಯನ್ನು ನೆನಪಿಸಿದ ಲಲ್ಲ 14ನೇ ಶತಮಾನದಲ್ಲಿ ಕಾಶ್ಮೀರದ ಕೊಡುಗೆ ಲಲ್ಲೇಶ್ವರಿ. ಆಕೆಯ ಸೂಕ್ತಿಗಳನ್ನೂ 'ವಾಖ್' ಅನ್ನುತ್ತಾರೆ. ವಚನಗಳ ಹಾಗಿವೆ.

ಲಲ್ಲೇಶ್ವರಿ ಶಿವಯೋಗಿನಿ. ಆಕೆಗೆ ಅನೇಕ ಹೆಸರುಗಳು. ಲಲ್ಲ, ಲಲ್ಲಮೋಜ್, ಲಲ್ಲಮಟ್ಸ್, ಲಲ್‌ಡೆಡ್, ಲಲ್ಲ ಆರಿಫಾ ಇತ್ಯಾದಿ.

ಕಾಶ್ಮೀರಿ ಭಾಷೆಯಲ್ಲಿ ಲಲ್ ಎಂದರೆ ಕಿಬ್ಬೊಟ್ಟೆ ಎಂಬ ಅರ್ಥವೂ ಉಂಟೆಂದೂ, 'ಲೀಲಾ' ಎಂಬುದು ಲಲ್ ಆಗಿದೆಯೆಂದೂ ವಾದಗಳಿವೆ. ಲಲ್‌ಡೆಡ್ ಎಂದರೆ ಮುದುಕಿ ಲಲ್ಲ ಎಂದು ಅರ್ಥ ಮಾಡುತ್ತಾರೆ.

ಲಲ್ಲ ಯೋಗಿನಿ ಸಂಸಾರ ತ್ಯಜಿಸಿ ಬೆತ್ತಲೆಯಾಗಿ ಸಂಚಾರ ಹೊರಟಳು. ಅಕ್ಕನವರಿಗೆ ಕೂದಲುಗಳು ಮೈ ಮುಚ್ಚಿದ್ದವು ಎಂದು ಹೇಳುವ ಹಾಗೆ ಲಲ್ಲಳಿಗೆ ಅವಳ ಜೊತೆಗಿದ್ದ ಕಿಬ್ಬೊಟ್ಟೆ ಮರ್ಮಾಂಗವನ್ನು ಮುಚ್ಚಿತ್ತಂತೆ ! ಲಲ್ಲ ಮೋಜ್ ಎಂದರೆ ತಾಯಿ ಲಲ್ಲ ಎಂದೂ ಲಲ್ಲ ಮಟ್ಸ್ ಎಂದರೆ ಹುಚ್ಚಿ ಲಲ್ಲ ಎಂದೂ ಅರ್ಥವಿದೆ. ಮುಸಲ್ಮಾನ ಬಂಧುಗಳು ಸದಾ ಧೈವಧ್ಯಾನದಲ್ಲಿರುವವಳು ಎಂಬುದಕ್ಕೆ 'ಲಲ್ಲ ಆರೀಫಾ' ಎನ್ನುತ್ತಿದ್ದರಂತೆ.

''ಆಕೆ ನಮ್ಮವಳು, ಆಕೆ ನಮ್ಮವಳು ಎಂದು ಹಿಂದೂಗಳೂ ಹೇಳುತ್ತಾರೆ, ಮುಸಲ್ಮಾನರೂ ಹೇಳುತ್ತಾರೆ. ನಿಜ ಅಂದರೆ ಅವಳು ದೇವರ ಕುಲದವಳು'' ಎಂದು ಪೀರ್ ಗುಲಾಮ್ ಹಸನ್ ತಮ್ಮ 'ತಾರೀಖ್-ಇ-ಹಸನ್' ಗ್ರಂಥದಲ್ಲಿ ಬರೆಯುತ್ತಾರೆ.

ಹಿಂದೂ ಮುಸಲ್ಮಾನರಿಬ್ಬರಿಗೂ ಹತ್ತಿರವಾದ ಲಲ್ಲೇಶ್ವರಿ ತನ್ನ 'ವಾಖ್'ಗಳ ಮೂಲಕ ಮಹತ್ವದ ಮಾತುಗಳನ್ನು ಹೇಳಿದಳು. ಶಾಸ್ತ್ರೀಯ ಸಂಗೀತದ ಮೂಲಕ ಕೂಡಾ ಆಕೆಯ 'ವಾಖ್'ಗಳನ್ನು ಹಾಡುತ್ತಾರೆ; ಸೂಫಿಯಾ ಭಕ್ತರು ಸೂಫಿಯಾನಾ ಕಲಮ್‌ಗಳಲ್ಲಿ ಲಲ್ಲವಾಖ್‌ಗಳನ್ನು ಹಾಡುತ್ತಾರೆ.

ಲಲ್ಲ ಕಾಶ್ಮೀರಿ ಭಾಷೆ-ಸಾಹಿತ್ಯ ಕಟ್ಟಿದ ಮೊದಲಿಗಳು. ಆಧುನಿಕ ಕವಿ. ಕಾಶ್ಮೀರಿ ಭಾಷೆಯ ತಾಯಿ ಅನ್ನುತ್ತಾರೆ. ತಾನು ಕಲಿತಿದ್ದ ಸಂಸ್ಕೃತದ ಕಾವ್ಯ ಗುಣವನ್ನು ಕಾಶ್ಮೀರಿ ಭಾಷೆಯಲ್ಲಿ ಪ್ರಯೋಗಿಸಿದಳು. ತತ್ಸಮಗಳನ್ನು ಬಳಸುತ್ತ ಕಾಶ್ಮೀರಿ ಆಡುಭಾಷೆಯಲ್ಲೂ ತತ್ತ್ವವಿಚಾರಗಳನ್ನು ಹೇಳಲು ಸಾಧ್ಯಮಾಡಿ ತೋರಿಸಿದಳು. ಅವಳದು ಸಮನ್ವಯ ದೃಷ್ಟಿ. ಹಿಂದೂ ಸಂಪ್ರದಾಯಗಳಲ್ಲಿದ್ದ ಕುಂದು ಕೊರತೆಗಳನ್ನು ವಿರೋಧಿಸಿ ಸಾಮಾಜಿಕವಾಗಿ ಶೈಕ್ಷಣಿಕವಾಗಿ ಬದಲಾವಣೆ ತರುವ ಪ್ರಯತ್ನ



ಮಾಡಿದವಳು ಲಲ್ಲೇಶ್ವರಿ.

ಅವಳ ಬಾಯಿಂದ ಹೊರಬಂದ ಸೂಳ್ನುಡಿಗಳು 'ವಚನ'ಗಳ ಹಾಗೆ ಇವೆ. ಅವಳ ಶಿವಪ್ರೇಮ, ಧರ್ಮ ಭೇದವಿಲ್ಲದ್ದು, ಅಂತರಂಗ ಶುದ್ಧಿಗೆ ಮಹತ್ವ ಕೊಡುವಂಥದ್ದು. ಸೂಳ್ನುಡಿಗಳು ಸಾಮಾನ್ಯವಾಗಿ ನಾಲ್ಕು ಸಾಲುಗಳ ಪದ್ಯ ರೂಪದಲ್ಲಿ ಇವೆ. ಬಹುತೇಕ ಲಲ್ಲವಾಖ್‌ಗಳು ಅಕ್ಕಮಹಾದೇವಿಯ ವಚನಗಳನ್ನು ಹೋಲುತ್ತವೆ. ಎಲ್ಲವೂ ಮೌಖಿಕ ಸಂಪ್ರದಾಯದಲ್ಲಿ ಉಳಿದುಬಂದಿವೆಯಾದ್ದರಿಂದ ಹೊಸ ಶಬ್ದಗಳು, ಪ್ರಕ್ಷಿಪ್ತಗಳು ಸಹಜವಾಗೇ ಸೇರಿವೆ. ಭಾರತದಲ್ಲಿ ಪರ್ಷಿಯನರ ಆಗಮನ, ಪ್ರಾಬಲ್ಯ ಹೆಚ್ಚುತ್ತಿದ್ದ ಆ ದಿನಗಳಲ್ಲಿ ಕ್ರಮೇಣ ಲಲ್ಲವಾಖ್‌ಗಳಲ್ಲಿ ಪರ್ಷಿಯನ್ ಪದಗಳು ಸೇರಿವೆ. ಹೀಗಾಗಿ ನಮ್ಮಲ್ಲಿ ಸರ್ವಜ್ಞ ಮೊದಲಾದವರ ಹಾಗೆ ಲಲ್ಲವಾಖ್‌ಗಳಲ್ಲಿ ಎಷ್ಟು ಆಕೆಯವು, ಎಷ್ಟು ಸೇರ್ಪಡೆ ಆದವು ಎಂಬುದನ್ನು ಗುರುತಿಸುವುದು ಕಷ್ಟ. ಅವಳದೇ ಶೈಲಿಯಲ್ಲಿ ಅನೇಕರು ರಚನೆ ಮಾಡಿರಬಹುದು.

ಸಾಮಾನ್ಯವಾಗಿ ಲಲ್ಲವಾಖ್‌ಗಳನ್ನು ಅವಳ ಬದುಕಿನ ಬಗ್ಗೆ ತಿಳಿಸುವಂಥವು, ಲೋಕಕ್ಕೆ ಬೋಧಿಸುವಂಥವು ಮತ್ತು ಆಧ್ಯಾತ್ಮ ವಿಚಾರಗಳನ್ನು ಹೇಳುವಂಥವು ಎಂದು ಮೂರು ವಿಭಾಗಗಳಾಗಿ ವಿಂಗಡಿಸಿಕೊಳ್ಳುತ್ತಾರೆ.

ಕೆಲವು ಲಲ್ಲವಾಖ್‌ಗಳು :

ಕಣ್ಣೀರು ಕರೆಯುವೆನು ನಿನಗಾಗಿ ಓ ಜೀವ
ಜಗದ ದಂಡೆಗೆ ನೀನು ಹಾಕಿರುವೆ ಲಂಗರವ
ಜಗದ ನೆರಳೂ ಜೊತೆ ಬರವು ನೀನು ಸಾರ ಜಾವ
ನಿಜದ ನಿಲುಮೆಯ ಯಾಕೆ ಮರೆತೆಯೆ ನನ ಜೀವ ?

ಗುರು ನನಗೆ ನೀಡಿದ ಒಂದೇ ಮಾತು :
ಹೊರಗಿನ ನೋಟವ ಒಳಗಿಡು ಎಂದು
ಗುರು ಅಂದ ನುಡಿಯೆ ದೇವನದೆಂದು
ಕುಣಿಯತೊಡಗಿದೆ ಬತ್ತಲಾಗಿಂದು

ಇರುವುದೆಲ್ಲವೂ ಎಲ್ಲೆಲ್ಲೂನೂ ಶಿವನೆ ಇರುವ ಮನೆ
ಹಿಂದೂ ಬೇರೆ ಮುಸ್ಲಿಮ ಬೇರೆ-ಗೆರೆಗಳ ಹಾಕದಿರು
ತಿಳಿದು ಅರಿತುಕೊ ನಿನ್ನನು ನಿನ್ನಲ್ಲೇ
ಇದುವೆ ಪರಮನ ನಿಜದರಿವಿನ ಕಲ್ಪತರು.
ಸದಾ ಮಾನಕೆ ಚಳಿಯರಿ ಮೈಗೆ ನಿನಗೆ ಅದೇ ರಕ್ಷೆ!
ಊಟಕ್ಕೆ ಹುಲ್ಲು; ಕುಡಿಯಲು ನೀರು-ಜೀವಕಷ್ಟೆ ಸಾಕು
ಯಾರು ಹೇಳಿದರೂ ಬಲಿಯ ನೀಡಲು ಬ್ರಾಹ್ಮಣ ನಿನಗೆ
ಜೀವವಿಲ್ಲದ ಕಲ್ಲಿನ ಮುಂದೆ ಕುರಿಯ ಮರಿಯ ತಂದು ?
ಶಿವಾ ಶಿವಾ ಶಿರಗುಡುವರು ಸಾಸ ಹಂಸವಾಲಿಸುವರು
ದಿನ ದಿನ ಬೇಹಾರದಲಿ ಬಿದ್ದಿದ್ದರೂ
ಅಂಟು ಜಂಟಿಯ ಮನ ಬಿಡಿಸಿ ಕೂಡಿಕೊಂಡು
ಸುರು ಗುರುನಾಥನನ್ನೊಲಿಸುವರು

ನಾಲಿಗೆ ತೀಟೆ ಬಣ್ಣದ ದಿರಿಸು ನಿತ್ಯ ಶಾಂತಿ ತಾರವೋ
ತಿಳಿದವ ತಿಳಿವ ಲೋಕದ ಬಯಕೆ ನಂಬಿಕೆ ಎಲ್ಲ ದಂಡ
ಮೃತ್ಯು ಭೀತಿಯ ಚಿಂದಿ ಮಾಡಿ ಮೇಲಕ್ಕೇರರೋ
ಇಂಥ ತೃಪ್ತಿಯ ಬಾಳು ಬಾಳುವ ಮಂದಿ ಅಲ್ಲ ಕಾಗೆಗೆ ಪಿಂಡ.

ಒಡಲ ಬಳಲಿಸಬೇಡ ಹಸಿವು ತೃಷೆಗಳಲಿ
ಹಸಿವಾದಾಗ ಒಂದು ಹಿಡಿ ಅನ್ನ ಉಣ್ಣು
ವಿಧಿ ನೇಮ ಪೂಜೆಗಳು ಹಾಳಾಗಿ ಹೋಗಲಿ
ಒಳಿತನೇ ಮಾಡು - ನಿನ್ನ ಧರ್ಮವಿಟ್ಟು

ಲೋಭ ಕಾಮ ಕ್ರೋಧ - ಮೂವರಸುರರ ಕೊಲ್ಲು
ನಿನ್ನನೆ ಕೊಲಲು ಅಂಬನೆಸೆವರು ಅವರು
ಹುಷಾರು, ವಿವೇಕ ಸಂಯಮಗಳ ಊಟವಿಕ್ಕವರಿಗೆ;
ಹಸಿದ್ದಸಿದು ರಕ್ಕಸರು ಸೊರಗಿ ಹೋಗುವರು.
ಪೆದ್ದ ಪೆಕರರು ಶಾಸ್ತ್ರಪುಸ್ತಕಗಳನ್ನೋದುವರು
ಗಿಳಿ ಹಾಗೆ ಉಲಿಯುವರು ರಾಮ ರಾಮ
ಮಜ್ಜಿಗೆ ಅಂಬಂತೆ ನೀರನ್ನೆ ಕಡೆಯುವರು
ಫಲವಿಲ್ಲ ಯತ್ನದಲಿ; ಆಹ, ಕೊಬ್ಬ ಮೆರೆಯುವರು

ನಿನಗೂ ಆರು ನನಗೂ ಆರು, ನೀಲಿಕೊರಳದೇವ
ದೂರಕೆ ಸರಿದು ನರಳುತಾ ಇದೆ ಯಾಕೆ ನನ್ನ ಜೀವ ?
ಸೇನಾರಕೆ ಒಡೆಯ; ಆ ಆರೂ ಸೇರಿ ಪೂರ್ತಿ
ನನ್ನ ಲೂಟಿಸಿದಂದು ಶುರುವೋ ಭಿನ್ನಭಾವ

(ಇಲ್ಲಿ ಆರು ಎಂದರೆ ಮಿತಿಗೋ ಮಾಯೆ (ಸಂಕೋಚ ಶಕ್ತಿ), ಕಲೆ (ಕಲ್ಮಶ), ವಿದ್ಯೆ (ಸೀಮಿತ ಅರಿವು) ರಾಗ (ಬಂಧನ), ಕಾಲ (ನಶ್ವರತೆ), ನಿಯತಿ (ವಿಧಿನಿಯಮ) ಮತ್ತು ಇನ್ನೊಂದು ಆರು ಕಂಚುಕಗಳು ಎಂದು ಅರ್ಥೈಸುತ್ತಾರೆ)

ನಾನು ಲಲ್ಲ ನನ್ನ ಮನಸಿನ ವನದ ಬಾಗಿಲ ಸಾರಿದೆ
ಶಿವನು ಶಕ್ತಿಯು ಕೂಡಿಕೊಂಡಿದ್ದ ಸುಖವನು ನೋಡಿದೆ
ಅಲ್ಲೀಗೆ ಆಗಲೆ ಆನಂದಕೊಳದ ನೀರಲಿ ಮಿಂದೆ
ಜೀವನ್ನು ಕಳ ಹಿಡಿದುಕೊಂಡದು ಜಗತ್ತು ಕಾಡುವುದೆ ?

ಬಯಸಲಿಲ್ಲ ಯಾವುದನೂ, ನಂಬಲಿಲ್ಲ ಏನನೂ
ನನ್ನ ವಾಖ್ ತಂದೀಯಿತು ನಾನು ಕುಡಿವ ಮಧುವನು
'ವಾಖಿ'ನ ತಾಖತ್ತಿನಿಂದ ಒಳಗುತ್ತವೆ ಹಿಡಿದುಕೊಂಡೆ
ಸುರುಳಿ ಸುತ್ತಿ ಬಡಿದು ನೆಲದ ಮೇಲೆ ಅದನು ಚಿಂದಿಮಾಡಿದೆ.

ಈಗ ಹರಿವ ನದಿ ಕಂಡೆ
ಈಗ ಸೇತುವೆ ಇಲ್ಲ ದಡವೂ ಇಲ್ಲ
ಈಗ ಹೂತ ಪೊದೆ ಕಂಡೆ
ಈಗ ಗುಲಾಬಿ ಇಲ್ಲ ಮುಳ್ಳೂ ಇಲ್ಲ.

ಪರಮ ಹಂಸ ಯೋಗಿ ತೊರೆದು ತನ್ನೂರನ್ನು
ಪೀಠಪೀಠಗಳಲಿ ಸುಳಿದ
ತನ್ನ ಒಳಗಿನೊಳಗೆ ನೆಲೆಗೊಂಡು ಇರುವಂಥ
ಅವನ ಕಾಣಲು ಹೊರಗೆ ಅಲೆದ

ಇಲ್ಲಿ ಮಾತಿಲ್ಲ ಭಾವಗಳಿಲ್ಲ, ಕುಲ, ಅಕುಲ ಇಲ್ಲ
ಮೌನಮುದ್ರೆ, ಇತ್ಯಾದಿಗಳಿಗೆ ಬರಲಪ್ಪಣೆ ಇಲ್ಲ
ಶಿವನದ್ದಾಗಲಿ ಶಕ್ತಿಯದಾಗಲಿ ಸುಳಿವುನೂ ಇಲ್ಲ
ಅರಿತಾಗ ಬೇಕಾದುದಿನ್ನೂ ಏನೋ ಉಳಿದುಕೊಂಡಿದೆಯಲ್ಲ

ತನುವನು ಕೊಟ್ಟೆ ಮನವನು ಕೊಟ್ಟೆ
ಬಾರಿಸಿತು ಸತ್ಯದ ಗಂಟೆ
ಧಾರಣೆಯಲ್ಲಿ ಮನಸನು ನೆಟ್ಟೆ
ಆಕಾಶ ಪ್ರಕಾಶ ಹಾದೆ.

ಗಾಲಿಯ ನಾಡಿಸಿ ಕೂಡಲೆ ತಿರುಗಿಸಬಲ್ಲೆ ಗಿರಣಿಯ
ಮನಸೇ ಗೂಟ ಗಿರಣಿಯ ತಾ ತಿರುಗಿಸಬಲ್ಲದು
ಒಮ್ಮೆ ತಿರುಗಿದರಾಯ್ತು ನುಣ್ಣಗೆ ನುರಿನುರಿಸಬಲ್ಲದಯ್ಯ
ಅಲ್ಲಿಂದಾಚೆ ಗಿರಣಿಗೆ ದವಸ ತಾನೇನೆ ಬರುವುದು.

ಕುದುರೆಯು ಶಿವನು ಕೇಶವನು ಜೀನು
ಅಲಂಕಾರ ಚಾಟಿಗೆ ಬ್ರಹ್ಮನು
ಯೋಗದಿಂದ ಯೋಗಿ ಹಿಡಿವನು ಖೂನು-
ಸರದಾರ ಯಾವನೋ ಅವನು ?

ಹೆದ್ದಾರಿಯಿಂದ ಬಂದೂ ಅದ ಹಿಡಿದು ಹೋಗಲಿಲ್ಲ
ದಿನ ಇಳಿಯುತಿರುವುದಲ್ಲ ಈ ಪರಿ ನಡುವಿನಲ್ಲಿ
ತಡಕಿ ನೋಡಿಕೊಂಡೆ ಚಿಕ್ಕಾಸು ಕೂಡ ಇಲ್ಲ
ಅಂಬಿಗನ ಕೂಲಿಯನ್ನು ನಾ ಹೇಗೆ ನೀಡಬಲ್ಲೆ ?

ಡಾ|| ವಿಜಯಾ
ಪತ್ರಕರ್ತರು, ಇಳಾ ಪ್ರಿಂಟರ್ಸ್, ೧೫೩, ೪ನೇ ಮೇನ್, ೮ನೇ ಕ್ರಾಸ್, ಚಾಮರಾಜಪೇಟೆ, ಬೆಂಗಳೂರು - ೫೬೦ ೦೧೮

# ಲಾಲ್ ಬಹದ್ದೂರ್ ಶಾಸ್ತ್ರಿ



ಐವತ್ತರ ದಶಕದ ಮಧ್ಯಭಾಗದಲ್ಲಿ ತಮಿಳ್ನಾಡಿನ ಅರಿಯಲೂರಿನಲ್ಲಿ ಸಂಭವಿಸಿದ ಭೀಕರ ರೈಲ್ವೆ ಅಪಘಾತದಲ್ಲಿ ಭಾರಿ ಸಂಖ್ಯೆಯ ಸಾವು ನೋವುಗಳಾದುವು. ಆ ದುರಂತ ಘಟನೆಯ ನೈತಿಕ ಹೊಣೆಗಾರಿಕೆಯನ್ನು ತಮ್ಮದಾಗಿಸಿಕೊಂಡು ಆಗಿನ ರೈಲ್ವೆಮಂತ್ರಿ ರಾಜಿನಾಮೆ ನೀಡಿದರು. ಪ್ರಾಯಶಃ ಅದು ಸ್ವತಂತ್ರ ಭಾರತದಲ್ಲಿ ನೈತಿಕ ಹೊಣೆಗಾರಿಕೆಯ ಕಾರಣ ಮಂತ್ರಿಯೊಬ್ಬರು ರಾಜಿನಾಮೆ ನೀಡಿದ ಮೊದಲನೇ ಪ್ರಕರಣವಾಗಿರಬಹುದು. ಹಾಗೆ ರಾಜಿನಾಮೆ ನೀಡಿದ ಮಂತ್ರಿ ಲಾಲ್ ಬಹದ್ದೂರ್ ಶಾಸ್ತ್ರಿಅವರು.

ಕುರ್ಚಿ ವ್ಯಾಮೋಹದಿಂದ, ತಾವು ನಂಬಿ ಪ್ರತಿಪಾದಿಸುತ್ತ ಬಂದಿದ್ದ ವಿಚಾರಗಳಿಗೆ ಎಳ್ಳು ನೀರು ಬಿಡುವ ವ್ಯಕ್ತಿಗಳಿಗೆ ಹೋಲಿಸಿದರೆ, ಶಾಸ್ತ್ರೀಯವರು ನಮಗೆ ಪುರಾತನರಂತೆ ಕಾಣಿಸುವುದರಲ್ಲಿ ಆಶ್ಚರ್ಯವಿಲ್ಲ.

ತೊಂಬತ್ತೈದು ವರ್ಷಗಳ ಹಿಂದೆ (2.10.1904) ಉತ್ತರಪ್ರದೇಶದ ಮುಘಲ್ ಸರಾಯನಲ್ಲಿ ಶಾಸ್ತ್ರಿಯವರು ಜನಿಸಿದರು. ಬೆನ್ನಿಗಂಟಿದ ಬಡತನದ ಜೊತೆಗೇ ಅವರ ವಿದ್ಯಾಭ್ಯಾಸ ಮುಂದುವರಿಯಿತು. ದೂರದ ಶಾಲೆಗೆ ಪ್ರತಿದಿನ ನಡೆದೇ ಹೋಗುತ್ತಿದ್ದರು. ಬದಲಾಯಿಸಲು ಬಟ್ಟೆಗಳಿರುತ್ತಿರಲಿಲ್ಲ. ಕೆಲವೊಮ್ಮೆ ಅವರು ತೊಟ್ಟ ಬಟ್ಟೆ ಮತ್ತು ಪುಸ್ತಕಗಳನ್ನು ಗಂಟು ಕಟ್ಟಿ ತಲೆಯ ಮೇಲಿಟ್ಟುಕೊಂಡು ಹೊಳೆ ದಾಟುವುದಿತ್ತು. ಅವರ ವಿದ್ಯೆಯ ಹಂಬಲ ಪ್ರವಾಹದ ಸೆಳೆವಿಗಿಂತ ಶಕ್ತಿಯುತವಾಗಿತ್ತು! 'ಶಾಸ್ತ್ರಿ' ಎಂಬುದು ಕಾಶಿ ವಿದ್ಯಾಪೀಠ ಅವರಿಗೆ ನೀಡಿದ ಪದವಿ !

ವಿದ್ಯಾರ್ಥಿ ದೆಸೆಯಲ್ಲೇ ಸ್ವಾತಂತ್ರ್ಯ ಚಳುವಳಿಯತ್ತ ಆಕರ್ಷಿತರಾದ ಅವರು, ಸಾಮಾನ್ಯ ಕಾರ್ಯಕರ್ತರಾಗಿ ಉತ್ತರ ಪ್ರದೇಶದ ಕಾಂಗ್ರೆಸ್ ವಲಯದಲ್ಲಿ ತಮ್ಮ ಸರಳ, ಸವಿನಯ ನಡತೆಯಿಂದ ಎಲ್ಲರಿಗೂ ಅಚ್ಚುಮೆಚ್ಚಾದರು. ಸಮಾಜ ಸೇವೆಯಲ್ಲಿ ನಿರತರಾಗಿದ್ದರು. ಚಳವಳಿಯಲ್ಲಿ ಭಾಗವಹಿಸಿ ಹಲವಾರು ಬಾರಿ ಜೈಲು ವಾಸ ಅನುಭವಿಸಿದರು. ಸ್ವಾತಂತ್ರ್ಯದ ನಂತರ ಉತ್ತರ ಪ್ರದೇಶದಿಂದ ರಾಜಕೀಯ ಪ್ರವೇಶ ಮಾಡಿದರು. ಆಗ ಜವಹರಲಾಲರ ಗಮನ ಇವರತ್ತ ಸೆಳೆಯಲ್ಪಟ್ಟಿತು.

ಪಂಡಿತ ಜವಹರಲಾಲ ನೆಹರೂ ನಿಧನರಾದಾಗ, ಶಾಸ್ತ್ರಿಯವರು ಪ್ರಧಾನಿಯ ಸ್ಥಾನ ಪಡೆದರು. ಅವರು ಪ್ರಧಾನಿಯಾಗಿದ್ದ ಒಂದೆರಡು ವರ್ಷಗಳ ಅವಧಿಯಲ್ಲಿ ಭಾರತ ಸಂಕಷ್ಟದ ಪರಿಸ್ಥಿತಿಯನ್ನು ಎದುರಿಸಬೇಕಾಗಿ ಬಂದಿತು. 1965ರ ಅಂತ್ಯಕ್ಕೆ ಪಾಕಿಸ್ತಾನ ಭಾರತದ ಮೇಲೆ ಆಕ್ರಮಣ ನಡೆಸಿತು. ಅಂಥ ಬಿಕ್ಕಟ್ಟಿನ ಸ್ಥಿತಿಯನ್ನು ನಿಭಾಯಿಸುವುದು ಸುಲಭವಾಗಿರಲಿಲ್ಲ. ಆ ಹಿನ್ನೆಲೆಯಲ್ಲಿ ಮುಂಬೈಯಲ್ಲಿ ಸಾರ್ವಜನಿಕ ಸಭೆಯೊಂದನ್ನು ಉದ್ದೇಶಿಸಿ ಮಾತನಾಡುವಾಗ ಶಾಸ್ತ್ರಿಯವರು ಹೇಳಿದರು : ''ಶಾಸ್ತ್ರಿ ಒಬ್ಬ ಕುಳ್ಳ, ಜೋರಾಗಿ ಗಾಳಿ ಬೀಸಿದರೆ ತೂರಿಕೊಂಡು ಹೋಗುತ್ತಾನೆ, ಎಂಬ ಭಾವನೆಯಿಂದ ಪಾಕಿಸ್ತಾನದ ಮಿಲಿಟರಿ ನಾಯಕ ನಮ್ಮ ದೇಶದ ಮೇಲೆರಗಿಬಂದಿದ್ದಾನೆ. ಶಾಸ್ತ್ರಿ ಗಟ್ಟಿಗ, ಏಕೆಂದರೆ ಇಡೀ ಭಾರತದ ಜನ ಅವನೊಂದಿಗಿದ್ದಾರೆ ಎಂಬುದನ್ನು ಆತನಿಗೆ ತಿಳಿಸಿ ಕೊಡೋಣ.'' ಶಾಸ್ತ್ರಿಯವರದು ಪುಟ್ಟ ಆಕಾರವಾದರೂ ದಿಟ್ಟ ವ್ಯಕ್ತಿ ಎಂಬುದನ್ನು ರುಜುವಾತು ಪಡಿಸುವಂತೆ, 'ಜೈ ಜವಾನ್ ಜೈ ಕಿಸಾನ್' ಘೋಷಣೆಯ ಮೂಲಕ ದೇಶಕ್ಕೆ ಹೊಸ ಹುರುಪು ನೀಡಿದರು. ಸೋತ ಪಾಕಿಸ್ತಾನ ಭಾರತದೊಂದಿಗೆ ಸಂಧಾನ ಮಾಡಿಕೊಳ್ಳಬೇಕಾಯಿತು.

1966 ಜನವರಿ 11ರಂದು ತಾಷ್ಕೆಂಟ್ ನಗರದಲ್ಲಿ ಅಂದಿನ ಸೋವಿಯತ್ ಒಕ್ಕೂಟದ ಪ್ರಧಾನಿ ಅಲೆಕ್ಸೀ ಕೊಸಿಯಗಿನ್ ಅವರ ಸಮಕ್ಷಮದಲ್ಲಿ ನಮ್ಮ ಪ್ರಧಾನಿ ಲಾಲ್ ಬಹದ್ದೂರ್ ಶಾಸ್ತ್ರಿ ಮತ್ತು ಪಾಕಿಸ್ತಾನದ ಅಧ್ಯಕ್ಷ ಅಯೂಬ್ ಖಾನರು ಭಾರತ- ಪಾಕಿಸ್ತಾನ ಶಾಂತಿ ಒಪ್ಪಂದಕ್ಕೆ ಸಹಿ ಹಾಕಿ ಸ್ನೇಹದಿಂದ ಕೈ ಕುಲುಕಿದರು.

ಆದರೆ, ಅದೇ ದಿನ ರಾತ್ರಿ ನಿದ್ದೆಯಲ್ಲಿದ್ದ ಶಾಸ್ತ್ರಿಯವರು ತೀವ್ರ ಹೃದಯಾಘಾತದಿಂದ ನಿಧನರಾದರು. ಈ ಆಕಸ್ಮಿಕ ಮರಣವನ್ನು ಸಹ ನಮ್ಮ ದೇಶದ ಕೆಲವರು ತೀರಾ ಹೀನ ರೀತಿಯಲ್ಲಿ ಸೋವಿಯತ್ ಒಕ್ಕೂಟದವರು ಶಾಸ್ತ್ರಿಯವರಿಗೆ ವಿಷಪ್ರಾಶನ ಮಾಡಿಸಿದರೆಂಬ ವದಂತಿ ಹಬ್ಬಿಸಿ ಸಂತೋಷಪಟ್ಟುಕೊಂಡರು. ಇತ್ತೀಚಿನ ಯುದ್ಧ ಸನ್ನಿವೇಶವನ್ನು ಪರಿಹರಿಸಲು ಅಮೆರಿಕದ ಮಧ್ಯಪ್ರವೇಶಕ್ಕೆ ಹಾತೊರೆದ ಆ ಜನ ಈಗೇನೆನ್ನುತ್ತಾರೊ !

-ವಿಚಾರಗ್ರಾಹಿ



## ಎರಡು ಹನಿಗವನಗಳು

### ಜಾತಿ

ಚುನಾವಣೆಯಲ್ಲಿ ಈಗ<br>
ತತ್ವಕ್ಕಿಂತ<br>
ಜಾತಿಗೇ ಮಹತ್ವ<br>
ನಮ್ಮದು ಜಗತ್ತಿನಲ್ಲೇ<br>
ಅತೀ ದೊಡ್ಡ<br>
ಪ್ರಜಾ(ತಿ) ಪ್ರಭುತ್ವ !

### ಪುಢಾರಿಯ ಸ್ವಗತ

ಕಾಂಗ್ರೆಸ್‌ನಲ್ಲಾದರೂ ಇರು<br>
ಭಾಜಪದಲ್ಲಾದರೂ ಇರು<br>
ದಳದಲ್ಲಾದರೂ ಇರು<br>
ಎಂದೆಂದಿಗೂ ನೀ<br>
ಸಚಿವನಾಗಿರು !

- ಎಚ್. ಡುಂಡಿರಾಜ್

## ಮಿಲನಿಯಮ್ ಸರಣಿಯ ಪುಸ್ತಕಗಳು ಲೇ : ಪೂರ್ಣಚಂದ್ರ ತೇಜಸ್ವಿ

ಶತಮಾನ ಸಂಧ್ಯೆ ಹತ್ತಿರವಾಗುತ್ತಾ ಇದೆ. ಈ ಶತಮಾನದ ವಿಶೇಷವೇನೆಂದರೆ ಕ್ರಿಸ್ತ ಹುಟ್ಟಿದ ತರುವಾಯ ಶತಮಾನದೊಂದಿಗೇ ಮುಗಿಯುತ್ತಿರುವ ಎರಡನೆಯ ಸಹಸ್ರಮಾನ. ಈ ಶತಮಾನದ ಅಂತ್ಯದಲ್ಲಿ ನಿಂತು ಇಪ್ಪತ್ತನೆಯ ಶತಮಾನವನ್ನು ಪರಿಭಾವಿಸಿದಾಗ ಕಂಡ, ಕೇಳಿದ, ಓದಿದ, ನೋಡಿದ ಕುತೂಹಲಕರ ರೋಮಾಂಚಕ ವಿಚಾರಗಳನ್ನು ತೇಜಸ್ವಿ ಯವರು ತಮ್ಮ ನೆನಪಿನ ಲಹರಿಯ ಅಲೆದಾಟಕ್ಕೆ ಅನುಸಾರವಾಗಿ ಇಲ್ಲಿ ಚಿತ್ರಿಸುತ್ತಾ ಹೋಗಿದ್ದಾರೆ. ಇದರ ಬೇರುಗಳೂ ಬಿಳಲುಗಳೂ ಶತಮಾನವನ್ನೂ ಮೀರಿ ಮಿಲನಿಯಮ್‌ವರೆಗೂ ವ್ಯಾಪಿಸಿರುವುದರಿಂದ ಇದನ್ನು ಮಿಲನಿಯಮ್ ಸರಣಿ ಎಂದು ಕರೆದಿದ್ದೇವೆ. ಈ ಸರಣಿ ಶತಮಾನ ಕೊನೆಯಾಗುವವರವಿಗೂ ಬರುತ್ತದೆ.

- ಪ್ರಕಾಶಕ


ಹುಡುಕಾಟ ರೂ.45


ಜೀವನ ಸಂಗ್ರಾಮ ರೂ.45


ಪೆಸಿಫಿಕ್ ದ್ವೀಪಗಳು ರೂ.45


ಚಂದ್ರನ ಚೂರು ರೂ.45


ನೆರೆಹೊರೆಯ ಗೆಳೆಯರು ರೂ.45


ಮಹಾಯುದ್ಧ-1 ರೂ.45


ಮಹಾಯುದ್ಧ-2 ರೂ.45


ಮಹಾಯುದ್ಧ-3 ರೂ.45


ದೇಶವಿದೇಶ-1 ರೂ.45


ದೇಶವಿದೇಶ-2 ರೂ.45


ದೇಶವಿದೇಶ-3 ರೂ.45


ದೇಶವಿದೇಶ-4 ರೂ.45

## ನಮ್ಮ ಇತರ ಪ್ರಕಟಣೆಗಳು

### ಪೂರ್ಣಚಂದ್ರ ತೇಜಸ್ವಿಯವರ ಪುಸ್ತಕಗಳು

| ಪುಸ್ತಕ | | ಬೆಲೆ |
|---|---|---|
| ಕಿರಗೂರಿನ ಗಯ್ಯಾಳಿಗಳು | ... ... | 50-00 |
| ಕರ್ವಾಲೊ | ... ... | 66-00 |
| ಚಿದಂಬರ ರಹಸ್ಯ | ... ... | 72-00 |
| ಸಹಜ ಕೃಷಿ | ... ... | 36-00 |
| ಪರಿಸರದ ಕತೆ | ... ... | 50-00 |
| ಮಿಸ್ಸಿಂಗ್ ಲಿಂಕ್ | ... ... | 50-00 |
| ಅಲೆಮಾರಿಯ ಅಂಡಮಾನ್ ಹಾಗೂ ಮಹಾನದಿ ನೈಲ್ | ... | 60-00 |
| ಜುಗಾರಿ ಕ್ರಾಸ್ | ... ... | 72-00 |
| ಏರೋಪ್ಲೇನ್ ಚಿಟ್ಟೆ ಮತ್ತು ಇತರ ಕತೆಗಳು | ... ... | 40-00 |
| ಫ್ಲೈಯಿಂಗ್ ಸಾಸರ್ಸ್ (1) | ... ... | 43-00 |
| ಫ್ಲೈಯಿಂಗ್ ಸಾಸರ್ಸ್ (2) | ... ... | 43-00 |
| ಕಾಡಿನ ಕತೆಗಳು (1) | ... ... | 43-00 |
| ಕಾಡಿನ ಕತೆಗಳು (2) | ... ... | 43-00 |
| ಕಾಡಿನ ಕತೆಗಳು (3) | ... ... | 43-00 |
| ಕಾಡಿನ ಕತೆಗಳು (4) | ... ... | 43-00 |
| ಕನ್ನಡ ನಾಡಿನ ಹಕ್ಕಿಗಳು (1) -ಮಿಂಚುಳ್ಳಿ | ... ... | 72-00 |
| ರುದ್ರಪ್ರಯಾಗದ ಭಯಾನಕ ನರಭಕ್ಷಕ | ... ... | 66-00 |
| ಅಣ್ಣನ ನೆನಪು | ... ... | 96-00 |
| ಹೆಜ್ಜೆ ಮೂಡದ ಹಾದಿ (ಕನ್ನಡ ನಾಡಿನ ಹಕ್ಕಿಗಳು ಭಾಗ-2) | ... | 72-00 |
| ವಿಸ್ಮಯ -1 | ... ... | 43-00 |
| ವಿಸ್ಮಯ -2 | ... ... | 43-00 |
| ವಿಸ್ಮಯ -3 | ... ... | 43-00 |
| ಅಬಚೂರಿನ ಪೋಸ್ಟಾಫೀಸ್ | ... ... | 50-00 |
| ಹುಲಿಯೂರಿನ ಸರಹದ್ದು, ನಿಗೂಢ ಮನುಷ್ಯರು | ... ... | 60-00 |
| ಹಕ್ಕಿ ಪುಕ್ಕ | ... ... | 260-00 |
| ಬರ್ಮುಡಾ ಟ್ರ್ಯಾಂಗಲ್ | ಪ್ರದೀಪ ಕೆಂಜಿಗೆ | 43-00 |
| ಅದ್ಭುತಯಾನ | ಪ್ರದೀಪ ಕೆಂಜಿಗೆ ... | 43-00 |
| ಭೂಕಂಪದ ಅಂತರಂಗ | ಬಿ.ಪಿ. ಬಸವರಾಜು ... | 36-00 |
| ಅಚ್ಚಗನ್ನಡ ನುಡಿಕೋಶ | ವಿದ್ವಾನ್ ಶ್ರೀ ಕೋಳಂಬೆ ಪುಟ್ಟಣ್ಣಗೌಡರು | 360-00 |
| ಮೃಗಯಾ | ಚದುರಂಗ ... | 42-00 |
| ಸೈಕಲ್‌ವಾಲ | ಎಂ. ಶಿವಕುಮಾರ್ ... | 40-00 |
| ಒಂದೇ ದಿನದಲ್ಲಿ ಕಂಪ್ಯೂಟರ್ ಕಲಿಯಿರಿ | ಚಿದಾನಂದ ... | 43-00 |
| ಸಾವಯವ ಕೃಷಿ | ನರೇಂದ್ರ ರೈ ... | 36-00 |
| ಹೆಜ್ಜಾಲ | ಚದುರಂಗ ... | 106-00 |

'ಪುಸ್ತಕ ಪ್ರಕಾಶನ' ಕನ್ನಡ ಪ್ರಕಾಶನ ಕ್ಷೇತ್ರದಲ್ಲಿ ಒಂದು ಅಸದೃಶ ಸಾಹಸ. ವಸ್ತು ವಿಷಯ, ಪುಸ್ತಕದ ಕಾಗದ, ರಕ್ಷಾಪುಟ ವಿನ್ಯಾಸ, ಶ್ರೇಷ್ಠ ಮುದ್ರಣ, ಓದುಗರಿಗೆ ವಿಚಾರ ತಲುಪಿಸುವ ಗದ್ಯಶೈಲಿ, ಪ್ರತಿಯೊಂದರಲ್ಲೂ ಜಗತ್ತಿನ ಅತ್ಯುತ್ತಮ ಪ್ರಕಾಶನಗಳಿಗೆ ಸರಿಗಟ್ಟುವ ಸಾಧನೆ ಮಾಡಬೇಕೆಂಬ ನಿರ್ಧಾರದಿಂದ ನಾಡಿನ ಅಗ್ರಮಾನ್ಯ ಲೇಖಕರ, ಕಲಾವಿದರ, ತಂತ್ರಜ್ಞರ, ಮುದ್ರಕರ ಅವಿರತ ಶ್ರಮ, ಸಾಧನೆ, ಸಹಕಾರಗಳೊಂದಿಗೆ ಹೊರಟಿರುವ ಸಾಹಸ. ನೆನಪಿರಲಿ 'ಪುಸ್ತಕ ಪ್ರಕಾಶನ' ಕೇವಲ ಪುಸ್ತಕಗಳನ್ನು ಬಿಕರಿ ಮಾಡುವ ವ್ಯಾಪಾರಿ ಸಂಸ್ಥೆಯಲ್ಲ. ಅದೊಂದು ಗುರಿ ಮತ್ತು ಆದರ್ಶಗಳನ್ನುಳ್ಳ ಉದ್ದೇಶಪೂರ್ವಕ ಸಾಹಸ.


# ಪುಸ್ತಕ ಪ್ರಕಾಶನ

91, 9ನೇ ಮುಖ್ಯರಸ್ತೆ, ಸರಸ್ವತಿಪುರಂ, ಮೈಸೂರು - 570 009

ಅಂಚೆಪೆಟ್ಟಿಗೆ ಸಂಖ್ಯೆ 58, ಮೂಡಿಗೆರೆ - 577 132

# ಜನಾರೋಗ್ಯ-ಒಂದು ಚಿಂತನೆ

ಡಾ॥ ಪ್ರಕಾಶ್ ಸಿ. ರಾವ್

ಆರೋಗ್ಯಕ್ಕೆ ಸಂಬಂಧಪಟ್ಟ ವಿಜ್ಞಾನ ಹಾಗೂ ತಂತ್ರಜ್ಞಾನದಲ್ಲಿ ಸಾಕಷ್ಟು ಸಂಶೋಧನೆಗಳು ಹಾಗೂ ಬೆಳವಣಿಗೆಗಳಾಗಿವೆ. ಆದರೆ ಕೇವಲ ಸಂಶೋಧನೆ ಹಾಗೂ ಬೆಳವಣಿಗೆ ಸಾಲದು. ಅದು ಜನಸಾಮಾನ್ಯರಿಗೆ ತಲುಪುವಂತಾಗಬೇಕು. ಭಾರತದಲ್ಲಿ ಶಿಶುಮರಣ ಸಂಖ್ಯೆ, ಮಾತೃಮರಣ ಸಂಖ್ಯೆ, ಕ್ಷಯ ರೋಗಿಗಳ ಸಂಖ್ಯೆ ಮುಂತಾದ ಅಂಕಿ ಅಂಶಗಳಿಂದ ಭಾರತದ ಆರೋಗ್ಯ ಪರಿಸ್ಥಿತಿ ಚಿಂತಾಜನಕವಾಗಿದೆಯೆಂದು ಸ್ಪಷ್ಟವಾಗುತ್ತದೆ. ಭಾರತದಲ್ಲಿ ಜನಸಂಖ್ಯಾ ಹೆಚ್ಚಳವು ಅಮೆರಿಕಾದಕ್ಕಿಂತ ಎರಡರಷ್ಟು, ಜರ್ಮನಿಯದಕ್ಕಿಂತ ಮೂರರಷ್ಟು ಜಾಸ್ತಿ. ಆದರೆ ಶಿಶು ಮರಣವು ಆ ದೇಶಗಳಲ್ಲಿರುವುದಕ್ಕಿಂತ ಎಂಟರಷ್ಟು ಜಾಸ್ತಿ. ಮಾತೃ ಮರಣವು ಆ ದೇಶಗಳಿಗೆ ಹೋಲಿಸಿದರೆ ಐದರಷ್ಟಿದೆ. ಆರೋಗ್ಯದ ಬಗೆಗಿನ ವೆಚ್ಚ ನೋಡಿದರೆ ಆ ದೇಶಗಳಲ್ಲಿರುವುದರ ಐದನೇ ಒಂದರಷ್ಟಿದೆ. ಆಯುಷ್ಯದ ಪ್ರಮಾಣದಲ್ಲಿ ಸಹ ಗಮನಾರ್ಹ ವ್ಯತ್ಯಾಸವಿದೆ. ಕ್ಯೂಬಾದಂತಹ ಚಿಕ್ಕ ರಾಷ್ಟ್ರದೊಡನೆ ಹೋಲಿಸಿ ನೋಡಿದರೂ ನಮ್ಮ ದೇಶದ ಆರೋಗ್ಯ ಪರಿಸ್ಥಿತಿ ಸಾಕಷ್ಟು ಹತಾಶೆಯನ್ನುಂಟುಮಾಡುವಂತಿದೆ.

### ಮೂಲ ಸಮಸ್ಯೆ

ಭಾರತದಲ್ಲಿ ಸೋಂಕುರೋಗಗಳು ಮತ್ತು ಪೌಷ್ಟಿಕ ಆಹಾರದ ಕೊರತೆಯಿಂದುಂಟಾದ ರೋಗಗಳು ಮೂಲಭೂತ ಸಮಸ್ಯೆಗಳಾಗಿವೆ. ಸೋಂಕುರೋಗಗಳನ್ನು ಗುಣಪಡಿಸಬಹುದಾಗಿದೆ, ಹಾಗೂ ಅವುಗಳು ಬಾರದಂತೆ ತಡೆಗಟ್ಟಬಹುದಾಗಿದೆ. ಆದರೆ ಈ ರೋಗಗಳು ದಿನೇ ದಿನೇ ಹೆಚ್ಚುತ್ತಲಿವೆ. ಸುಮಾರು ಒಂದು ಕೋಟಿ ಮೂವತ್ತು ಲಕ್ಷದಷ್ಟು ಕ್ಷಯರೋಗಿಗಳು, ಹದಿಮೂರು ಲಕ್ಷದಷ್ಟು (ಜಗತ್ತಿನ ಮೂರನೇ ಒಂದು ಭಾಗ) ಕುಷ್ಟರೋಗಿಗಳು ನಮ್ಮ ದೇಶದಲ್ಲಿದ್ದಾರೆ. ಮಲೇರಿಯಾ, ಮೆದುಳು ಜ್ವರದ ರೋಗ, ಕಾಮಾಲೆ ರೋಗ, ಏಡ್ಸ್ ಮುಂತಾದ ರೋಗಗಳು ಹಬ್ಬುತ್ತಲಿವೆ. ಈ ರೋಗಗಳನ್ನು ಹತೋಟಿಯಲ್ಲಿಡುವ ರಾಷ್ಟ್ರೀಯ ಕಾರ್ಯಕ್ರಮಗಳಿದ್ದಾಗ್ಯೂ ಅವು ಫಲಕಾರಿಯಾಗಿಲ್ಲ. ಸರಕಾರ ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡರೂ ಮೂಲತಃ ಈ ಯೋಜನೆಗಳು ಕಾರ್ಯರೂಪಕ್ಕೆ ಬರುತ್ತಿಲ್ಲ. ಈ ರಾಷ್ಟ್ರೀಯ ಕಾರ್ಯಕ್ರಮಗಳಲ್ಲಿ ಕೇವಲ ಕ್ಷಯರೋಗಕ್ಕೆ ಹೆಚ್ಚಿನ ಮಹತ್ವವಿದ್ದು ಇತರ ಕಾರ್ಯಕ್ರಮಗಳನ್ನು ಕಡೆಗಣಿಸಲಾಗಿದೆ.

ಸರಕಾರ "ಕ್ರಿ.ಶ. 2000ದ ಹೊತ್ತಿಗೆ ಎಲ್ಲರಿಗೂ ಆರೋಗ್ಯ", ಮುಂತಾದ ಘೋಷಣೆಗಳಿಗೆ ಮಹತ್ವ ಕೊಟ್ಟಿದೆ. ಆದರೆ ಕಾರ್ಯಸಾಧನೆಗಲ್ಲ. ಸೋಂಕು ರೋಗಗಳ ಹತೋಟಿಗೆ ನೈರ್ಮಲ್ಯ ಸಾಧನೆ ಅತ್ಯಗತ್ಯ. ನೈರ್ಮಲ್ಯ ಸಾಧನೆಗೆ ಒಂದು ವ್ಯಾಪಕ ಕಾರ್ಯಕ್ರಮವನ್ನು ಹಮ್ಮಿಕೊಳ್ಳುವ ಬದಲು ಅದಕ್ಕಾಗಿ ಖಾಸಗೀ ಕ್ಷೇತ್ರವನ್ನು ನಂಬಿ ಕುಳಿತಿದೆ.

### ಅಪೌಷ್ಟಿಕತೆ

ಪೌಷ್ಟಿಕ ಆಹಾರವು ಆರೋಗ್ಯ ಸಾಧನೆಯಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ. ಭಾರತದಲ್ಲಿ ಆಹಾರೋತ್ಪಾದನೆ ಹೆಚ್ಚುತ್ತಿದ್ದರೂ ಅಪೌಷ್ಟಿಕತೆಯಿಂದ ಲಕ್ಷ ಲಕ್ಷ ಜನರು ಸಾವು ನೋವಿನಿಂದ ಬಳಲುತ್ತಿದ್ದಾರೆ. ಭಾರತದ ಪರಿಸ್ಥಿತಿಯನ್ನು 'ಸಮೃದ್ಧತೆಯಲ್ಲಿ ಬಡತನ' ಎಂದು ವರ್ಣಿಸಬಹುದಾಗಿದೆ. ಈ ಪರಿಸ್ಥಿತಿ ಮಕ್ಕಳ ಹಾಗೂ ಮಹಿಳೆಯರ ಆರೋಗ್ಯದ ಮೇಲೆ ಕೆಟ್ಟ ಪರಿಣಾಮ ಬೀರುತ್ತಿದೆ. ಆಹಾರ ಉತ್ಪಾದನೆ ಕ್ರಮೇಣ ಹೆಚ್ಚುತ್ತಿದೆಯಾದರೂ ಅದನ್ನು ಜನರಿಗೆ ತಲುಪಿಸುವ ವ್ಯವಸ್ಥೆ ನಮ್ಮಲ್ಲಿ ಕ್ಷೀಣವಾಗುತ್ತಿರುವುದರಿಂದ ಮತ್ತು ಜನರಿಗೆ ಕೊಳ್ಳುವ ಸಾಮರ್ಥ್ಯ ಇಲ್ಲದಿರುವುದರಿಂದ ಇಂದಿನ ಪರಿಸ್ಥಿತಿ ಉದ್ಭವವಾಗಲು ಕಾರಣವಾಗಿದೆ. ಕುಡಿಯುವ ನೀರು ಆರೋಗ್ಯ ಸಾಧನೆಗೆ ಅತಿ ಮುಖ್ಯವಾಗಿದೆ. ಆದರೆ ಅದನ್ನು ನಾವು ನಡೆಸಿಕೊಳ್ಳುತ್ತಿರುವ ರೀತಿ ತೀರಾ ಅಸಮರ್ಪಕ. ಒಂದೆಡೆ ನೀರಿನ ಕೊರತೆ ಇದ್ದರೆ, ಇನ್ನೊಂದೆಡೆ ನೀರು ಕಲುಷಿತಗೊಂಡಿದೆ. ಮಾನವನ ದಿನನಿತ್ಯದ ಕ್ರಿಯೆಗಳು ಹಾಗೂ ಕೈಗಾರಿಕೀಕರಣದಿಂದ ಎಲ್ಲೆಡೆಯಲ್ಲೂ ವಿಪರೀತವಾಗಿ ಕಲುಷಿತಗೊಳ್ಳುತ್ತಿದೆ. ಇಂದು ಭಾರತದಲ್ಲಿ ಮುಖ್ಯ ನದಿಗಳು ಸಹ ಕಲುಷಿತಗೊಂಡಿವೆ ಹಾಗೂ ಅನೇಕ ಸ್ಥಳಗಳಲ್ಲಿ ಭೂಮಿಯ ನೀರು ಅನೇಕ ಲವಣಗಳನ್ನು ಹೊಂದಿದ್ದು (ಫ್ಲೂರೈಡ್ಸ್, ಆರ್ಸನಿಕ್) ಜನಾರೋಗ್ಯಕ್ಕೆ ಮಾರಕವಾಗಿದೆ.

ನಮ್ಮಲ್ಲಿ ಮಹಿಳೆಯರು ಮತ್ತು ಮಕ್ಕಳು ಜನಸಂಖ್ಯೆಯ ಅರ್ಧಕ್ಕಿಂತ ಹೆಚ್ಚಾಗಿದ್ದಾರೆ ಆ ವಿಭಾಗದವರ ಆರೋಗ್ಯಕ್ಕೆ ಹೆಚ್ಚು ಗಮನ ನೀಡಿಲ್ಲ. ಸತತ ಹೆರಿಗೆ, ಗರ್ಭಪಾತಗಳು, ಅನೈರ್ಮಲ್ಯ ವಾತಾವರಣ ಇತ್ಯಾದಿಗಳ ನಡುವೆ ವಿಶ್ರಾಂತಿರಹಿತ ಕೆಲಸ, ಪೌಷ್ಟಿಕ ಆಹಾರದ ಕೊರತೆ ಮುಂತಾದವು ಮಹಿಳೆಯ ಆರೋಗ್ಯಕ್ಕೆ ಮಾರಕವಾಗಿವೆ. ಮಹಿಳೆಯ ಸಾಮಾಜಿಕ ಸ್ಥಿತಿಗತಿ ಇವೆಲ್ಲಕ್ಕೆ ಮುಖ್ಯಕಾರಣ ಎಂದು ಹೇಳಬಹುದಾಗಿದೆ.

ಮಕ್ಕಳು ಪೌಷ್ಟಿಕಾಂಶಗಳ ಕೊರತೆ ಹಾಗೂ ಲಸಿಕೆಯಿಂದ ತಡೆಗಟ್ಟಬಹುದಾದ ಮಾರಕ ರೋಗಗಳಿಂದ ಸಾವನ್ನಪ್ಪುತ್ತಿದ್ದಾರೆ. ಇದರ ಪರಿಣಾಮವಾಗಿ ಶಿಶುಮರಣ ಸಂಖ್ಯೆ ಭಾರತದಲ್ಲಿ ಇತರ ದೇಶಗಳಿಗೆ ಹೋಲಿಸಿದಲ್ಲಿ ಹೆಚ್ಚಾಗಿದೆ.

| ದೇಶ | ಶಿಶು ಮರಣ ಸಂಖ್ಯೆ (100,000 ಜೀವಂತ ಹೆರಿಗೆ ಪೈಕಿ) |
|---|---|
| ಭಾರತ | 89 |
| ಬ್ರಿಟನ್ | 9 |
| ಅಮೆರಿಕ | 11 |

### ಚಿಕಿತ್ಸೆ ದುಬಾರಿ

ನಗರ ಪ್ರದೇಶಗಳಲ್ಲಿ ವೈದ್ಯಕೀಯ ಸೌಲಭ್ಯ ಸುಲಭವಾಗಿ ದೊರಕಿದರೂ ದುಬಾರಿಯಾಗಿದೆ. ರೋಗ ತಡೆಗಟ್ಟುವ ಬದಲು, ರೋಗ ಚಿಕಿತ್ಸೆಗೆ ಹೆಚ್ಚಿನಮಹತ್ವ ಕೊಡಲಾಗುತ್ತಿದೆ. ಇಂದು ಹೊಸ ಹೊಸ ರೋಗ ಕಂಡುಹಿಡಿಯುವ ವಿಧಾನಗಳು ಬಳಕೆಗೆ ಬಂದಿವೆ. ಅವುಗಳು ದುಬಾರಿ ಹಾಗೂ ಹೆಚ್ಚಿನ ಸನ್ನಿವೇಶಗಳಲ್ಲಿ ಅನಗತ್ಯ. ಆದರೂ ಅವುಗಳನ್ನು ಹೇರುವ ಕೆಲಸ ಭರದಿಂದ ಸಾಗಿದೆ. ಅಪಾರ ಹಣ ಗಳಿಸುವುದಷ್ಟೇ ಇದರ ಉದ್ದೇಶ. ಕೇವಲ ಸರಕಾರಿ ಆಸ್ಪತ್ರೆಗಳೇ ಇಂದು ಲಕ್ಷಾಂತರ ಬಡಜನರಿಗೆ ಚಿಕಿತ್ಸೆ ಪಡೆಯಲು ಕೇಂದ್ರಗಳಾಗಿವೆ. ಆದರೆ ಅಲ್ಲಿ ವೈದ್ಯ, ಔಷಧಿ ಸೌಲಭ್ಯ ಹಾಗೂ ಸಿಬ್ಬಂದಿಯ ಕೊರತೆ ಯಾವಾಗಲೂ ಇರುತ್ತದೆ.

ಅಲ್ಲದೆ ಅನೇಕ ಸರಕಾರಿ ವೈದ್ಯರು ಖಾಸಗಿಯಾಗಿ ಚಿಕಿತ್ಸೆ ನಡೆಸಿ ಹಣ ವಸೂಲಿ ಮಾಡುತ್ತಾರೆ. ಇಂದು ಗ್ರಾಮೀಣ ಸ್ಥಳಗಳಲ್ಲಿ ಪ್ರಾಥಮಿಕ ಆರೋಗ್ಯ ವ್ಯವಸ್ಥೆಯನ್ನು ಬಲಪಡಿಸುವ ಬದಲು ಪಟ್ಟಣಗಳಲ್ಲಿ ಸುಸಜ್ಜಿತ ಆಸ್ಪತ್ರೆಗಳನ್ನು ತೆರೆಯಲು ಪ್ರೋತ್ಸಾಹ ಕೊಡಲಾಗುತ್ತಿದೆ. ಕೆಲವೇ ಜನರಿಗೆ ವಿಶೇಷ ಚಿಕಿತ್ಸೆ ದೊರಕಿಸಿ ಕೊಡಲು ಹೆಚ್ಚು ಜನರು ಅತಿ ಸಾಮಾನ್ಯ ರೋಗ ಚಿಕಿತ್ಸೆಯಿಂದ ವಂಚಿತರಾಗುತ್ತಿದ್ದಾರೆ. ಇದಕ್ಕಿಂತಲೂ ದೊಡ್ಡ ಸಾಮಾಜಿಕ ಅಪರಾಧ ಉಂಟೆ ? ಇಂದು ಸರಕಾರಿ ಆಸ್ಪತ್ರೆಗಳು ಸಹ ವಿಶೇಷ ಚಿಕಿತ್ಸೆಗೆ ಶುಲ್ಕ ವಿಧಿಸುತ್ತವೆ. ಈ ಬದಲಾವಣೆ ವಿಶ್ವಬ್ಯಾಂಕ್ ಹಾಗೂ ಐ.ಎಂ.ಎಫ್. ಆದೇಶದ ನಂತರ ಕಂಡುಬಂದರೆ ಖಾಸಗೀಕರಣ ಮತ್ತು ಉದಾರೀಕರಣಗಳ ಹಾದಿ ಹಿಡಿಯುತ್ತಿರುವ ನಮ್ಮ ದೇಶಕ್ಕೆ ಇಂತಹ ಜನವಿರೋಧಿ ಆದೇಶಗಳನ್ನು ಪಾಲಿಸುವುದು ಅನಿವಾರ್ಯವೆಂದು ಸರ್ಕಾರದ ವಕ್ತಾರರು ಹೇಳುತ್ತಾರೆ. ನಮ್ಮ ಬಡಜನರನ್ನು ಕೊಲ್ಲಿರೆಂದು ಹೇಳುವ ಯಜಮಾನನಿಗೆ ತಲೆಬಾಗುವುದು ಯಾವ ಸಾರ್ವಭೌಮತ್ವದ ಲಕ್ಷಣ ?

### ಸಾಮಾಜಿಕ ರೋಗಗಳು

ಔದ್ಯೋಗೀಕರಣ ಭರದಿಂದ ಸಾಗುತ್ತಿರುವ ಸಂದರ್ಭದಲ್ಲಿ ಉದ್ಯೋಗಕ್ಕೆ ಸಂಬಂಧಪಟ್ಟ ಸಾಮಾನ್ಯ ರೋಗಗಳನ್ನು ಬಹುಮಟ್ಟಿಗೆ ಗುರುತಿಸಲಾಗಿದೆ. ಆದರೆ ಕಾರ್ಮಿಕರಿಗೆ ಅಗತ್ಯವಿರುವ ವೈದ್ಯಕೀಯ ರಕ್ಷಣಾವ್ಯವಸ್ಥೆ ಕೇವಲ ಕಚೇರಿ ಕಡತಗಳಲ್ಲಿ ಕಾಣಬಹುದಾಗಿದೆ. ಔದ್ಯೋಗಿಕ ಕ್ಷೇತ್ರದಲ್ಲಿ ಉಂಟಾಗುತ್ತಿರುವ ಸಾವುನೋವು ಪರಿಹಾರಕ್ಕೆ ವ್ಯವಸ್ಥಿತ ಪ್ರಯತ್ನ ಮಾಡಲಾಗುತ್ತಿಲ್ಲ. ಕೆಲಸ ಮಾಡಲು ಒಳ್ಳೆಯ ವಾತಾವರಣ, ಚಿಕಿತ್ಸಾ ಸೌಲಭ್ಯ, ಕೆಲಸ ಸ್ಥಳದಲ್ಲಿ ದುರ್ಘಟನೆಯನ್ನು ತಡೆಯುವುದು. ದುರ್ಘಟನೆಯಿಂದ ಅಂಗಾಂಗಗಳು ಊನವಾದರೆ ಸರಿಯಾದ ಪರಿಹಾರ ಕ್ರಮಗಳನ್ನು ಒದಗಿಸುವ ಸೌಕರ್ಯದ ಆವಶ್ಯಕತೆ. ಇವಕ್ಕೆಲ್ಲಾ ಆದ್ಯತೆ ನೀಡದೆಯೇ ಔದ್ಯೋಗಿಕ ಬೆಳವಣಿಗೆಯನ್ನು ಸಾಧಿಸಲಾದೀತೆ ?

ಇಂದು ಸಾಮಾಜಿಕ ರೋಗಗಳೆಂದು ಗುರುತಿಸಲಾದ ಏಡ್ಸ್ ಮದ್ಯಪಾನದಿಂದುಂಟಾದ ಕಾಯಿಲೆಗಳು,

ಹೆಪೆಟೈಟಿಸ್ ಬಿ. ಹಾಗೂ ಮಾದಕ ದ್ರವ್ಯಗಳ ಸೇವನೆಯ ದುಷ್ಪರಿಣಾಮಗಳು ವೈದ್ಯನ ಚಿಕಿತ್ಸೆಗಿಂತ ಜನಾರೋಗ್ಯ ಸೂತ್ರಗಳಿಂದ ಹತೋಟಿಯಲ್ಲಿಡಬೇಕಾದವು. ಆದ್ದರಿಂದ ಮೂಲಭೂತವಾಗಿ ಜನಾರೋಗ್ಯ ಸೂತ್ರಗಳನ್ನು ಬಲಪಡಿಸುವುದು ತುರ್ತಿನ ಅಗತ್ಯ. ಹೆಪೆಟೈಟಿಸ್ ಬಿ ತಡೆಗಟ್ಟಲು ''ಹಣವಿದ್ದರೆ ಲಸಿಕೆ ಹಾಕಿಸಿಕೊಳ್ಳಿ'' ಎಂಬ ಬೇಜವಾಬ್ದಾರಿ ನೀತಿಗೆ ನಾವು ಶರಣಾಗಿದ್ದೇವೆ. ಈ ನೀತಿಯನ್ನು ಪ್ರೋತ್ಸಾಹಿಸುವವರು ತಜ್ಞವೈದ್ಯರೇ ಎಂಬುದು ಶೋಚನೀಯ.

### ಅಂಗವಿಕಲರು

ನಮ್ಮ ಸಮಾಜದ ಶೇಕಡಾ 18ರಷ್ಟು ಜನರು ಅಂಗವಿಕಲರು. ಅಂಗವಿಕಲತೆ ತಡೆಗಟ್ಟುವುದು ಹಾಗೂ ಅಂಗವಿಕಲರಿಗೆ ವಿಶೇಷ ವೈದ್ಯಕೀಯ ಸವಲತ್ತು ಮತ್ತು ಜೀವನಾಧಾರವನ್ನು ಕಲ್ಪಿಸಿಕೊಡುವುದು ಯಾವುದೇ ಸಮಾಜದ ಜವಾಬ್ದಾರಿ. ಈ ಸಾಧನೆಯಲ್ಲಿ ನಾವು ಬಹಳ ಹಿಂದುಳಿದಿದ್ದೇವೆಂದೇ ಹೇಳಬೇಕು. ಸ್ವಾತಂತ್ರ್ಯ ಬಂದು 52 ವರ್ಷಗಳಾದರೂ ಸ್ವಾಭಾವಿಕ ದುರ್ಘಟನೆಗಳು (ಮಹಾಪೂರ, ಭೂಕಂಪ) ಸಂಭವಿಸುವಂತೆಯೇ ಮಾನವ ನಿರ್ಮಿತ ದುರ್ಘಟನೆಗಳೂ (ಭೋಪಾಲ್ ದುರಂತ, ಅಣುಬಾಂಬು) ಘಟಿಸುತ್ತಿವೆ. ಇಂತಹ ದುರ್ಘಟನೆಯಿಂದಾದ ತೊಂದರೆಯ ಉಪಶಮನ ಮಾಡಲು ಕೂಡ ಆಗುತ್ತಿಲ್ಲ. ಪೋಕ್ರಾನ್ ಎರಡರ ನಂತರ ಭಾರತದಲ್ಲಿ ಅಣುಬಾಂಬಿನ ದುರಂತಗಳ ಸಾಧ್ಯತೆ ಹೆಚ್ಚಿದೆ. ಅದೇನಾದರೂ ಆದರೆ ಹಿರೋಷಿಮಾ, ನಾಗಾಸಾಕಿಯಂತಹ ಪರಿಸ್ಥಿತಿ ಉಂಟಾಗುವುದನ್ನು ತಡೆಯಲು ನಾವು ಅಸಮರ್ಥರು. ಮಾನವನ ದುರಾಸೆ ಹಾಗೂ ಸಮಾಜದ ಬಗ್ಗೆ ಕಳಕಳಿ ಇರದೇ ಇರುವುದು ಈ ಬೆಳವಣಿಗೆಗೆ ಕಾರಣ. ಅದರಿಂದಾಗಿ ಅನೇಕ ದಶಕಗಳವರೆಗೆ ಉಲ್ಬಣವಾಗುವ ಅನಾರೋಗ್ಯ ಪರಿಸ್ಥಿತಿಯನ್ನು ನಾವು ಎದುರಿಸಬೇಕಾಗಿ ಬರುತ್ತದೆ.

> *ಪ್ರತಿಯೊಬ್ಬ ಸುಖೀ ಪುರುಷನ ಮನೆಯ ಬಾಗಿಲಿನ ಹಿಂದೆಯೂ ಸುತ್ತಿಗೆ ಕೈಯ್ಯಲ್ಲಿ ಹಿಡಿದವನೊಬ್ಬ ವ್ಯಕ್ತಿ ನಿಂತಿರಬೇಕು. ಅವನು ಸದಾ ಬಾಗಿಲು ಬಡಿದು ಆ ಸುಖೀ ಪುರುಷನಿಗೆ ಜ್ಞಾಪಕಮಾಡಿಕೊಡುತ್ತಿರಬೇಕು : ''ಪ್ರಪಂಚದಲ್ಲಿ ಸುಖ ಪಡಲು ಸಾಧ್ಯವಿಲ್ಲದವರು ನೂರಾರು ಜನರಿದ್ದಾರೆ; ನೀನೇನೋ ಇಂದು ಸುಖವಾಗಿದ್ದೀಯೆ, ಆದರೆ ಜೀವನವು ನಾಳೆ ನಿನ್ನನ್ನೂ ಆದರ ಮೊನಚಾದ ಉಗುರುಗಳಿಂದ ಪರಚುತ್ತದೆ. ಇತರರ ದುಃಖಮಯ ಜೀವನದತ್ತ ಕಣ್ಣು ಹಾಯಿಸಲು ನಿನಗೆ ಇಂದು ವ್ಯವಧಾನವಿಲ್ಲ, ಅಲ್ಲವೆ? ನಾಳೆ ನಿನಗೆ ಅನಾಹುತ ಸಂಭವಿಸಿದಾಗ ಯಾರಾದರೂ ಬಂದು ಸಹಾನುಭೂತಿ ತೋರುತ್ತಾರೆಂದು ಎಣಿಸುತ್ತೀಯೇನು? ಬೇರೆಯವರ ಅನಾರೋಗ್ಯ, ಬಡತನ, ಬೇರೇನೊ ನಷ್ಟ - ಇವೆನ್ನೆಲ್ಲಾ ಅಷ್ಟು ಉಪೇಕ್ಷಿಸುತ್ತಿರುವೆಯಲ್ಲ!''*
>
> - ಆಂಟನ್ ಚೆಕಾವ್

ಸದ್ಯದಲ್ಲೇ ಭಾರತದ ಜನಸಂಖ್ಯೆ ನೂರು ಕೋಟಿ ಮೀರಲಿದೆ. ಹೆಚ್ಚಿನ ಜನಸಂಖ್ಯೆಯುಳ್ಳ ಚೀನಾ ಜನಸಂಖ್ಯೆಯನ್ನು ಜನಸಂಪತ್ತನ್ನಾಗಿ ಪರಿಗಣಿಸುತ್ತದೆ. ಆದರೆ ನಾವು ಜನಸಂಖ್ಯಾ ನಿಯಂತ್ರಣಕ್ಕೆ ಹೆಚ್ಚು ಮಹತ್ವ ಕೊಟ್ಟಿದ್ದೇವೆ. ಹಾಗೂ ಆರೋಗ್ಯ ಮುಂಗಡ ಪತ್ರದಲ್ಲಿ ಹೆಚ್ಚು ಹಣವನ್ನು ಜನಸಂಖ್ಯಾ ನಿಯಂತ್ರಣಕ್ಕೆ ಮೀಸಲಿಟ್ಟಿದ್ದೇವೆ. ಆದರೂ ಯಶಸ್ಸು ಗಳಿಸುವುದರಲ್ಲಿ ಸೋತಿದ್ದೇವೆ. ಜನಸಂಖ್ಯೆಯನ್ನು ಒಂದು ಮಿತಿಗೆ ಒಳಪಡಿಸಲು ಅಪಾಯಕರ ವಿಧಾನಗಳನ್ನು ಉಪಯೋಗಿಸುತ್ತಾ ಜನಾರೋಗ್ಯವನ್ನು ಕಡೆಗಣಿಸುತ್ತಿದ್ದೇವೆ. ಅದರ ಪರಿವೆಯು ಜನಸಾಮಾನ್ಯರಿಗಿರಲಿ, ಎಷ್ಟೋ ವೈದ್ಯರಿಗೂ ಇಲ್ಲ. ಆರ್ಥಿಕ ಬೆಳವಣಿಗೆ ಹಾಗೂ ಸುರಕ್ಷ ವಿಧಾನಗಳಿಗೆ ಆದ್ಯತೆ ಕೊಡಬೇಕಾದ್ದು ನಮ್ಮ ಜವಾಬ್ದಾರಿ.

### ಹಣ ವಿನಿಯೋಗ ಎಲ್ಲಿ?

ಸಮಾಜದ ಏಳ್ಗೆಗೆ ಒಂದು ಮುಖ್ಯ ಸಾಧನವಾದ ಜನಾರೋಗ್ಯ ಸುಧಾರಣೆಗೆ ಪ್ರಾಮುಖ್ಯತೆ ಕೊಡದೆ ಬೇರೆ ಉಪಾಯವೇ ಇಲ್ಲ. ಅದಕ್ಕೆ ಮೊದಲು ನಮಗೆ ಜನಪರ ಆರೋಗ್ಯ ನೀತಿಯ ಅಗತ್ಯವಿದೆ. ಇಂದಿನ ಆರೋಗ್ಯ ನೀತಿಯಲ್ಲಿರುವ ಲೋಪದೋಷಗಳನ್ನು ಪರಿಶೀಲಿಸಿ ಅವನ್ನು ಸರಿಪಡಿಸುವುದು ಮೊದಲ ಕೆಲಸವಾಗಬೇಕು. ಭಾರತದಲ್ಲಿ ಪ್ರತಿ ಪಂಚವಾರ್ಷಿಕ ಯೋಜನೆಯಲ್ಲೂ ಆರೋಗ್ಯಕ್ಕೆ ಮೀಸಲಿಡಲಾದ ಹಣವನ್ನು ಗಮನಿಸಿದರೆ ಅದು ಯೋಜನೆಯಿಂದ ಯೋಜನೆಗೆ ಕಡಿಮೆಯಾಗುತ್ತ ಬಂದಿರುವುದು ಕಾಣುತ್ತದೆ. ಹಾಗೂ ಆರೋಗ್ಯಕ್ಕೆ ಮೀಸಲಿಡಲಾದ ಹಣದ ಹೆಚ್ಚಿನ ಪಾಲು ಸಂಬಳ ಹಾಗೂ ಆಡಳಿತದ ಖರ್ಚಿಗೆ ಉಪಯೋಗಿಸಲಾಗುತ್ತಿದೆ. ವಿಶ್ವಬ್ಯಾಂಕ್ ಹಾಗೂ ಐ.ಎಮ್.ಎಫ್ ಆದೇಶದಂತೆ ಈ ವೆಚ್ಚವನ್ನು ಇನ್ನೂ ಕಡಿಮೆ ಮಾಡಲು ಪ್ರಯತ್ನಿಸಲಾಗುತ್ತಿದೆ.

ಆರೋಗ್ಯ ವೆಚ್ಚ ಭಾರತದ ಮುಂಗಡ ಪತ್ರದಲ್ಲಿ
(ಶೇಕಡಾವಾರು)

| | | | |
|---|---|---|---|
| 1951-56 | 3.32 | 1956-61 | 3.01 |
| 1961-66 | 2.63 | 1966-69 | 2.15 |
| 1969-74 | 2.12 | 1974-80 | 1.92 |
| 1980-85 | 1.86 | 1985-90 | 1.88 |
| 1990-95 | 1.70 | | |

ಇದರಲ್ಲಿ ಇನ್ನೊಂದು ವಿಶೇಷವೆಂದರೆ, ಈ ಆರೋಗ್ಯ ಖರ್ಚಿಗೆ ಸರಿಸಮನಾಗಿ ಕುಟುಂಬ ಯೋಜನೆಗೆ ಹಣ ವ್ಯಯವಾಗುತ್ತಿದೆ. ಆರೋಗ್ಯ ಕ್ಷೇತ್ರ ಜನಪರವಾಗಿ ಕೆಲಸಮಾಡಲು ಹೆಚ್ಚಿನ ಹಣದ ಆವಶ್ಯಕತೆ ಇದೆ. ಇಂದು ನಾವು ಅಣ್ವಸ್ತ್ರ ಸಾಧನಗಳೂ ಸೇರಿದಂತೆ ಯುದ್ಧದ ಉಪಕರಣಗಳನ್ನು ತಯಾರಿಸಲು ಹೆಚ್ಚು ಖರ್ಚು ಮಾಡುತ್ತಾ ಆರೋಗ್ಯವನ್ನು ಮೂಲೆಗುಂಪಾಗಿಸಿದ್ದೇವೆ. ಹಣದ ಆವಶ್ಯಕತೆ ಇದೆಯೆಂದು ಸಾಲ ತೆಗೆದುಕೊಳ್ಳುತ್ತೇವೆ. ಆಗ ಅವರು ಹೇಳಿದಂತೆ ಕೇಳುತ್ತಾ ನಮ್ಮ ಅಗತ್ಯಗಳನ್ನು (ಆರೋಗ್ಯ ನೀತಿಯನ್ನು) ಕಡೆಗಣಿಸುತ್ತೇವೆ. ಇದೆಲ್ಲದರ ಪುನರ್ವಿಮರ್ಶೆ ಮಾಡಬೇಕಾದ ಸನ್ನಿವೇಶ ಬಂದಿದೆ.

ಔಷಧಿ ಕ್ಷೇತ್ರದ ಬೆಳವಣಿಗೆಯೂ ಚಿಂತಾ



ಜನಕವಾಗಿದೆ. ಇಂದಿನ ಔಷಧಿ ನೀತಿಯ ಒಂದು ವಿಶೇಷವೆಂದರೆ, ಅಗತ್ಯ ಹಾಗೂ ಅನಗತ್ಯ ಔಷಧಿಗಳನ್ನು ಸರಕಾರ ಪ್ರೋತ್ಸಾಹಿಸುತ್ತಿರುವುದು ಹಾಗೂ ಅದರಲ್ಲಿರುವ ವ್ಯತ್ಯಾಸ ವೈದ್ಯರಿಗೇ ತಿಳಿಯದಂತೆ ಮಾಡಿರುವುದು. ಔಷಧಿಗಳು ಜನರಿಗೆ ಪ್ರಯೋಜನವಾಗುವ ಬದಲು ಔಷಧಿ ಕಂಪನಿಗಳಿಗೆ ಲಾಭ ತರುವ ಸಾಧನಗಳಾಗಿವೆ. ಔಷಧಿ ಬೆಲೆಯನ್ನು ಸರ್ಕಾರದ ಔಷಧ ನಿಯಂತ್ರಕ ವಿಭಾಗವು ನಿಗದಿಪಡಿಸದೇ ಸ್ವತಃ ಔಷಧಿ ಕಂಪನಿಗಳೇ ನಿಗದಿಪಡಿಸುವುದರಿಂದ ಔಷಧಿ ಬೆಲೆಗಳು ದಿನೇ ದಿನೇ ಹೆಚ್ಚುತ್ತಿವೆ ಹಾಗೂ ಮಾರುಕಟ್ಟೆಯಲ್ಲಿ ಅನಗತ್ಯ ಔಷಧಿಗಳು ತುಂಬಿಕೊಳ್ಳುತ್ತಿವೆ. ಭಾರತದಲ್ಲಿ ಸುಸಜ್ಜಿತ ಭಾರತೀಯ ಉದ್ಯಮವಿದ್ದು ಆ ಉದ್ಯಮ ಔಷಧಿಗಳನ್ನು ತಯಾರಿಸಲು ಸಮರ್ಥವಾಗಿದ್ದರೂ ಬಹುರಾಷ್ಟ್ರೀಯ ಕಂಪನಿಗಳಿಗೆ ಪ್ರೋತ್ಸಾಹ ದೊರೆಯುತ್ತಿದೆಯೆಂಬುದು ಒಂದು ವಿಪರ್ಯಾಸ, ಒಂದು ಕೇಡು. ಈಗಾಗಲೇ ನಮ್ಮ ಪೇಟೆಂಟ್ ಕಾನೂನು ತಿದ್ದುಪಡಿ ಮಾಡಿದ್ದೇವೆ. ಇದರ ಪರಿಣಾಮವಾಗಿ ಭಾರತೀಯ ಔಷಧಿ ಕಂಪನಿಗಳಿಗೆ ಪೆಟ್ಟು ಬೀಳುವುದು ಖಂಡಿತ. ಜನಪರ ಆರೋಗ್ಯ ನೀತಿಯು ಈ ಹಿನ್ನೆಲೆಯಲ್ಲಿ ಮೂಡುವ ಸಂಭವ ತೀರಾ ಕಡಿಮೆ. ಆದ್ದರಿಂದಲೇ ಆರೋಗ್ಯ ಕಾರ್ಯಕ್ರಮಗಳಲ್ಲಿ ಜನರ ಪಾಲುಗೊಳ್ಳುವಿಕೆ ಅಗತ್ಯವಾಗಿದೆ. ಈ ನಿಟ್ಟಿನಲ್ಲಿ ಸರಕಾರ, ಆರೋಗ್ಯಕ್ಕೆ ಸಂಬಂಧಪಟ್ಟ ಸಂಘಸಂಸ್ಥೆಗಳು ಹಾಗೂ ಸಾರ್ವಜನಿಕರು ಒಂದಾಗಿ ಕೆಲಸ ಮಾಡಬೇಕಾಗಿದೆ. ಜನರು ಸುಮ್ಮನೆ ಕುಳಿತು ಸುಧಾರಣೆ ಅಪೇಕ್ಷಿಸಿದರೆ ಅದು ಲಭಿಸಿಬಿಡುವುದಿಲ್ಲ.

**ಡಾ|| ಪ್ರಕಾಶ ಸಿ. ರಾವ್**
ನಂ. ೭೩/೨, ೧ನೇ ರಿಸರ್ವಾಯರ್ ಬ್ಲಾಕ್, ರಾಜಾಜಿನಗರ,
ಬೆಂಗಳೂರು - ೫೬೦ ೦೧೦



















ಸ್ವಯಂ ಮಾರಕ ಅಣ್ವಸ್ತ್ರ ನೀತಿ

# ಪೂರ್ವ ತಿಮೋರ್‌ನ ವಿಮೋಚನೆಯ ದುರಂತ

ಸೀಯಾರ್ಕೆ

ಮುನ್ನೂರು ವರ್ಷಗಳು ಪೋರ್ಚುಗೀಸ್ ವಸಾಹತು ಶಾಹಿಗಳ ಆಳ್ವಿಕೆಯಲ್ಲಿ, ಕಾಲು ಶತಮಾನದ ಇಂಡೋನೇಷ್ಯದ ಆಡಳಿತೆಯಲ್ಲಿ ನಲುಗಿಹೋಗಿರುವ ಪೂರ್ವ ತಿಮೋರ್‌ನ ಜನರ ವಿಮೋಚನೆ ಇನ್ನೂ ಕಷ್ಟ ಸಾಧ್ಯವೇ. ಇಂಡೋನೇಷ್ಯ ಸರಕಾರದ ಸ್ವಾಯತ್ತೆ ನೀಡಿಕೆಯ ಸಲಹೆಯನ್ನು ತಿರಸ್ಕರಿಸಿದ ಜನ ಇತ್ತೀಚೆಗೆ ವಿಶ್ವಸಂಸ್ಥೆ ಆಶ್ರಯದಲ್ಲಿ ಜರುಗಿದ ಜನಮತ ಸಂಗ್ರಹಣೆಯಲ್ಲಿ ಅತ್ಯಧಿಕ ಸಂಖ್ಯೆಯಲ್ಲಿ (ಸುಮಾರು ಶೇ. ೭೮) ಪೂರ್ಣ ಸ್ವಾತಂತ್ರ್ಯ ಅಪೇಕ್ಷಿಸಿದ್ದಾರೆ. ನಿರೀಕ್ಷಿಸಿದ್ದಂತೆಯೇ ಇಂಡೋನೇಷ್ಯ ಪರವಾದಿಗಳಿಂದ ಹಿಂಸಾಚಾರ ಪ್ರಾರಂಭವಾಗಿದೆ. ಪರಿಸ್ಥಿತಿಯ ಪ್ರಯೋಜನ ಪಡೆದುಕೊಂಡ ಇಂಡೋನೇಷ್ಯ ಸರಕಾರ ಈ ದ್ವೀಪದಲ್ಲಿ ಸೈನ್ಯಾಡಳಿತೆ ಜಾರಿಗೆ ತಂದಿದೆ. ತೀವ್ರವಾದ ದಬ್ಬಾಳಿಕೆ ಪ್ರಾರಂಭಿಸಿದೆ.

ಪೂರ್ವ ತಿಮೋರ್ ಇಂಡೋನೇಷ್ಯ ದ್ವೀಪಸ್ತೋಮದಲ್ಲಿರುವ ಪುಟ್ಟ ದ್ವೀಪದ ಒಂದು ಭಾಗ. ಪಶ್ಚಿಮದ ಭಾಗ ಇಂಡೋನೇಷ್ಯದ ಆಡಳಿತದಲ್ಲೇ ಇದೆ. ೧೬ನೇ ಶತಮಾನದ ನಡುವಿನಲ್ಲಿ ಈ ದ್ವೀಪದ ಮೇಲೆ ಪೋರ್ಚುಗೀಸರು ಕಾಲಿರಿಸಿದಾಗಲೇ ತಿಮೋರ್‌ನ ಜನರ ಬವಣೆ ಪ್ರಾರಂಭವಾಯಿತು. ದ್ವೀಪದ ಪಶ್ಚಿಮ ಭಾಗ ಡಚ್ಚರ ವಶಕ್ಕೆ ಹೋದರೆ, ಪೂರ್ವ ಭಾಗ ಪೋರ್ಚುಗೀಸರ ಹಿಡಿತದಲ್ಲಿ. ಈ ಮಧ್ಯೆ ಬ್ರಿಟಿಷರೂ ಎರಡನೇ ಮಹಾಯುದ್ಧದ ಕಾಲದಲ್ಲಿ ಜಪಾನೀಯರೂ ಈ ದ್ವೀಪವನ್ನು ಆಕ್ರಮಿಸಿಕೊಂಡಿದ್ದರು. ವಸಾಹತುಶಾಹಿಗಳಿಂದ ತೀವ್ರವಾದ ಶೋಷಣೆಗೀಡಾಗಿದ್ದ ಪೂರ್ವ ತಿಮೋರ್‌ನ ಜನ ಸಶಸ್ತ್ರ ಹೋರಾಟ ನಡೆಸಿ ಗಳಿಸಿದ ಸ್ವಾತಂತ್ರ್ಯ ಕ್ಷಣಿಕ. ೧೯೭೫ರಲ್ಲಿ ಪೂರ್ವ ತಿಮೋರ್‌ನಿಂದ ಪೋರ್ಚುಗೀಸರು ಕಾಲ್ತೆಗೆದ ಮೇಲೆ ಇಂಡೋನೇಷ್ಯದ ಸೇನೆ ಆಕ್ರಮಿಸಿಕೊಂಡಿತು. ಆಗ ನಡೆದ ದೌರ್ಜನ್ಯದಲ್ಲಿ ೨೦೦,೦೦೦ ಕ್ಕೂ ಹೆಚ್ಚು ಜನ ಸಾವಿಗೀಡಾದರು. ಆ ಬಗ್ಗೆ ಮಾನವಹಕ್ಕುಗಳು ತಮ್ಮ ಸ್ವತ್ತೆಂದು ಸದಾ ಹೇಳಿಕೊಳ್ಳುವ ಯಾವ ಪಶ್ಚಿಮ ರಾಷ್ಟ್ರಗಳೂ ಅದರ ಬಗ್ಗೆ ಚಕಾರವೆತ್ತಲಿಲ್ಲ. ಈಗ ಪೂರ್ವ ತಿಮೋರ್‌ನ ಪರಿಸ್ಥಿತಿ ಬಗ್ಗೆ ಅವಕ್ಕೆ ಕಾಳಜಿ. ಅಮೆರಿಕ ಇದರಲ್ಲಿ ಮುಂದೆ ಇದೆ.




ಪೋರ್ಚುಗೀಸರ ಆಡಳಿತೆ ಕೊನೆಗೊಳ್ಳುತ್ತಿರುವಾಗ ಈ ದ್ವೀಪದಲ್ಲಿ ಕಮ್ಯುನಿಸ್ಟರ ಪ್ರಾಬಲ್ಯ ಅಧಿಕವಾಗಿದ್ದುದರಿಂದ ಅಮೆರಿಕಗೆ ಕಳವಳವಾಗಿತ್ತು. ಆಗ್ನೇಯ ಏಷ್ಯಾದಲ್ಲೊಂದು ಕ್ಯೂಬಾ ತಿಮೋರ್ ದ್ವೀಪ ಆದೀತೆಂದು ಭೀತಿ ಇತ್ತು. ಆದ್ದರಿಂದಲೇ ತಮ್ಮ ಮಿತ್ರನಾಗಿದ್ದ ಇಂಡೋನೇಷ್ಯದ ಸರ್ವಾಧಿಕಾರಿ ಜನರಲ್ ಸುಹಾರ್ತೊಗೆ ಕುಮ್ಮಕ್ಕು ನೀಡಿ ಪೂರ್ವ ತಿಮೋರ್‌ನ ಆಕ್ರಮಣಕ್ಕೆ ಅಣಿ ಮಾಡಿಕೊಟ್ಟಿತು. ಸುಹಾರ್ತೊ ಅಧಿಕಾರದಲ್ಲಿರುವವರೆಗೆ ಅಮೆರಿಕ ಪೂರ್ವ ತಿಮೋರ್‌ನಲ್ಲಿ ಏನೇ ದಬ್ಬಾಳಿಕೆ ನಡೆದರೂ ಮಾನವ ಹಕ್ಕುಗಳ ಉಲ್ಲಂಘನೆಯ ಸೊಲ್ಲೆತ್ತಲಿಲ್ಲ. ಪೂರ್ವ ತಿಮೋರ್‌ನ ಜನ ಜಕಾರ್ತಾದ ಆಳ್ವಿಕೆಯಿಂದ ಮುಕ್ತರಾಗಲು ಸಶಸ್ತ್ರ ಹೋರಾಟದ ಜೊತೆಗೆ, ಕ್ಯಾಥೊಲಿಕ್ ಚರ್ಚ್ ನೇತೃತ್ವದಲ್ಲಿ ಅಸಹಕಾರ ಚಳವಳಿಯನ್ನೂ ನಡೆಸಿದ್ದಾರೆ. ಇವೆಲ್ಲ ಈಗ ಇತಿಹಾಸ.

ಪೂರ್ವ ತಿಮೋರ್‌ನ ವಿಮೋಚನೆ ಇತರ ದ್ವೀಪಗಳಲ್ಲೂ ಹರಡೀತೆಂಬ ಭೀತಿ ಇಂಡೋನೇಷ್ಯಕ್ಕೆ ಇದೆ. ಆದರೆ ಅದು ಅದರ ಆಂತರಿಕ ವಿಷಯ. ಪೂರ್ವ ತಿಮೋರ್‌ನ ವಿಮೋಚನೆಯನ್ನಂತೂ ದಬ್ಬಾಳಿಕೆಯಿಂದ ತಡೆಯುವುದು ದುಸ್ಸಾಧ್ಯ.

### ಪ್ಯಾಲಸ್ಟೈನ್-ಇಸ್ರೇಲ್ ಒಪ್ಪಂದ : ಮುಗಿಯದ ಕತೆ

ಪ್ಯಾಲಸ್ಟೈನ್ ಅರಬ್ ಜನತೆಯ ಸ್ವತಂತ್ರ ನಾಡಿನ ಬಯಕೆ ಇನ್ನೂ ಕನಸಾಗಿಯೇ ಇದೆ. ಐವತ್ತು ವರ್ಷಗಳ ಹಿಂದೆ ಪಶ್ಚಿಮ ಏಷ್ಯಾದಲ್ಲಿ ಇಸ್ರೇಲ್ ಸ್ಥಾಪನೆಯಾದಾಗಲೇ ಪ್ಯಾಲಸ್ಟೈನ್ ಅರಬ್ಬರ ಸಂಕಷ್ಟ ಪ್ರಾರಂಭವಾಯಿತು. ಇಸ್ರೇಲಿನ ಸ್ಥಾಪನೆಯೊಂದಿಗೆ ಪ್ಯಾಲಸ್ಟೈನ್‌ನ ನಿರ್ಮಾಣವೂ ಆಗಿದ್ದರೆ ಪರಿಸ್ಥಿತಿ ಭಿನ್ನವಾಗಿರುತ್ತಿತ್ತು. ಪಾಶ್ಚಾತ್ಯ ರಾಷ್ಟ್ರಗಳ, ಮುಖ್ಯವಾಗಿ ಅಮೆರಿಕದ ಬೆಂಬಲ ಪಡೆದಿರುವ ಇಸ್ರೇಲಿನ ವಿಸ್ತರಣಾವಾದಿ ನೀತಿ ಹಾಗೂ ನಿರಂತರವಾಗಿ ಬದಲಿಸುತ್ತಿರುವ ಅದರ ನಿಲುವಿನಿಂದಾಗಿ ಪ್ಯಾಲಸ್ಟೈನ್ ಜನತೆಗೆ ಆತಂಕ ಸ್ಥಿತಿ.

ಇಸ್ರೇಲ್‌ನ ಸ್ಥಾಪನೆಯ ನಂತರ ಜರುಗಿದ ಅರಬ್ ಇಸ್ರೇಲಿ ಯುದ್ಧಗಳಲ್ಲಿ ಅರಬ್ಬರು ಗಳಿಸಿದ್ದಕ್ಕಿಂತ ಕಳೆದುಕೊಂಡದ್ದೇ ಹೆಚ್ಚು. ಅರಬ್ ರಾಷ್ಟ್ರಗಳ ಅನೈಕ್ಯತೆಯೇ ಪ್ಯಾಲಸ್ತೀನಿಯನ್ನರ ಇಂದಿನ ಸ್ಥಿತಿಗೆ ಮೂಲಕಾರಣ. ಅಮೆರಿಕದ ಒತ್ತಡಕ್ಕೆ ಮಣಿದು ಇಸ್ರೇಲಿನ ಜೊತೆ ಮಾಡಿಕೊಂಡ ಪ್ರತ್ಯೇಕ ಒಪ್ಪಂದಗಳು ಇಸ್ರೇಲಿನ ದಾಹವನ್ನು ಹೆಚ್ಚಿಸಿದುವೇ ಹೊರತು ಬೇರೇನಾಗಲಿಲ್ಲ.

ಪ್ಯಾಲಸ್ಟೈನ್ ಜನತೆ ಯಾಸರ್ ಅರಾಫತ್ ನಾಯಕತ್ವದಲ್ಲಿ ನಡೆಸಿದ ಹೋರಾಟಕ್ಕೆ ಇನ್ನೂ ಫಲ ದೊರೆಯದೇ ಇರುವುದು ಸ್ಪಷ್ಟ. ವಿಶ್ವಸಂಸ್ಥೆಯ ನಿರ್ಣಯಗಳ ಆಧಾರದ ಮೇಲೆ ಜೆರೂಸಲೆಮ್ ರಾಜಧಾನಿಯಾಗಿ ಪ್ಯಾಲಸ್ಟೈನ್ ರಾಜ್ಯದ ಸ್ಥಾಪನೆ ಇನ್ನೂ ದೂರದ ಕನಸು. ಇಸ್ರೇಲ್ ಜೆರೂಸಲೆಮ್ ತನಗೆ ಸೇರಿದ್ದೆಂದು ರಾಜಧಾನಿ ಸ್ಥಾಪಿಸಿಕೊಳ್ಳುತ್ತಿದೆ. ಅರಬ್ ರಾಜ್ಯಗಳು ಅನುಸರಿಸಿದ ಮಾರ್ಗದಲ್ಲೇ ಯಾಸೆರ್ ಅರಾಫತ್ ಇಸ್ರೇಲಿನೊಂದಿಗೆ ಮಾಡಿಕೊಂಡಿರುವ ಒಪ್ಪಂದಗಳು ಪೂರ್ಣವಾಗಿ ಅನುಷ್ಠಾನವಾಗುತ್ತಿಲ್ಲ. ಒಪ್ಪಂದವನ್ನು ಕಾರ್ಯಗತ ಮಾಡಲು ಇನ್ನೊಂದು ಒಪ್ಪಂದ ಈಚೆಗೆ ಆಗಿದೆ. ಅದೂ ಅಮೆರಿಕ ಮತ್ತು ಈಜಿಪ್ಟ್ ಮಧ್ಯಸ್ಥಿಕೆಯಿಂದಾದುದು. ಸೀಮಿತ ಸ್ವಾಯತ್ತ ಆಡಳಿತೆ ಅರಾಫತ್ ಪಾಲಿಗೆ ಬಂದಿದ್ದರೂ ನಿರಾಶ್ರಿತರ, ರಾಜಕೀಯ ಖೈದಿಗಳ ಬಿಡುಗಡೆಯ ಸಮಸ್ಯೆ ಬಗೆಹರಿಯದೆ ಇದೆ. ಅರಾಫತ್ ಒತ್ತಾಯಗಳಿಗೆ ಮಣಿದು ಮಾಡಿಕೊಂಡಿರುವ ಒಪ್ಪಂದಗಳಿಗೆ ಎಲ್ಲ ಪ್ಯಾಲಿಸ್ತೀನಿಯನ್ನರ ಬೆಂಬಲವಿಲ್ಲ. ನಂಬಿಕಾರ್ಹವಲ್ಲದ ಇಸ್ರೇಲಿನೊಂದಿಗೆ ಮಾಡಿಕೊಂಡಿರುವ ಒಪ್ಪಂದಗಳೆಲ್ಲ ಮುಗಿಯದಂತೆ ಕಾಲಹರಣ ಮಾಡುವುದಾಗಿದೆ. ಇದರಲ್ಲಿ ವಂಚಿತರು ಪ್ಯಾಲಸ್ಟೈನ್ ಜನತೆ ಅಷ್ಟೆ.

### ಚೀಣಾ ತನ್ನ ಐತಿಹಾಸಿಕ ಪಾತ್ರ ವಹಿಸೀತೆ ?

ಐವತ್ತು ವರ್ಷಗಳ ಹಿಂದೆ ಚೀಣೀ ಗಣರಾಜ್ಯ ಸ್ಥಾಪನೆಗೊಂಡಾಗ ಏಷ್ಯಾದಲ್ಲೊಂದು ನವತಾರೆ ಬೆಳಗಿತೆಂದು ಸ್ವಾಗತಿಸಿದ ನೆನಪು ಇನ್ನೂ ಅಳಿಸಿಲ್ಲ. ವಸಾಹತುಶಾಹಿ ನೊಗವನ್ನು ಕಳಚಿ ಹೊಸದಾಗಿ ಸ್ವತಂತ್ರ್ಯ ಗಳಿಸಿಕೊಂಡಿದ್ದ ಏಷ್ಯ, ಆಫ್ರಿಕಾ, ಲ್ಯಾಟಿನ್ ಅಮೆರಿಕದ ರಾಷ್ಟ್ರಗಳಿಗೆ ಚೀಣಿ ಜನತಾ ಗಣರಾಜ್ಯದ ಸ್ಥಾಪನೆ ಹೊಸ ವಿಶ್ವಾಸ ಮೂಡಿಸಿತು. ಸಮಾಜವಾದೀ ಪಥದಲ್ಲಿ ಅಡಿಯಿರಿಸಿದ ಕಮ್ಯುನಿಸ್ಟ್ ಚೀಣ, ಸೋವಿಯತ್ ಒಕ್ಕೂಟಗಳು ಸಾಮ್ರಾಜ್ಯಶಾಹಿ ವಿರೋಧಿ ಹೋರಾಟಕ್ಕೆ ಹೊಸ ತಿರುವು ನೀಡುವುವೆಂಬ ಅಪೇಕ್ಷೆ ಯಥಾರ್ಥವಾಗಿ ಮೂಡಿತ್ತು. ಭಾರತದ ಮಟ್ಟಿಗೆ ಚೀಣಿ ಗಣರಾಜ್ಯ ಹೊಸ ವಿಶ್ವಾಸಾರ್ಹ ಮಿತ್ರನಾಗಿತ್ತು. ಭಾರತ, ಸೋವಿಯತ್ ಒಕ್ಕೂಟ ಮತ್ತು ಚೀಣಾಗಳ ಮೈತ್ರಿ ಜಾಗತಿಕ ರಾಜಕಾರಣದಲ್ಲಿ ಪ್ರಮುಖ ಪಾತ್ರ ವಹಿಸುವ ನಿರೀಕ್ಷೆ ಇದ್ದುದು ಭ್ರಮೆ ಏನಾಗಿರಲಿಲ್ಲ.

ಆದರೆ ಈ ಐವತ್ತು ವರ್ಷಗಳಲ್ಲಿ ಆಗಿರುವ ಬದಲಾವಣೆಗಳು ಹಲವು ನಿರೀಕ್ಷೆಗಳನ್ನು ಭ್ರಮನಿರಸನಗೊಳಿಸಿವೆ. ಚೀಣಿ ಗಣರಾಜ್ಯದ ಸ್ಥಾಪನೆಯ ಹತ್ತು ವರ್ಷಗಳಲ್ಲಿಯೇ ಅದು ಪ್ರಾರಂಭವಾಯಿತು. ಸೋವಿಯೆತ್ ಒಕ್ಕೂಟದೊಂದಿಗೆ ವಿರಸ, ಭಾರತದೊಂದಿಗೆ ಗಡಿ ಯುದ್ಧ, ಅಂತರರಾಷ್ಟ್ರೀಯ ಕಮ್ಯುನಿಸ್ಟ್ ಚಳವಳಿಯಲ್ಲಿ ಒಡಕು, ಎಲ್ಲವೂ ಸಾಮ್ರಾಜ್ಯಶಾಹಿ ವಿರೋಧಿ ಚಳುವಳಿಗೆ ಮಾರಕವೇ. ಅಂತರರಾಷ್ಟ್ರೀಯತೆಯ ಭಾವನೆಯ ಮೇಲೆ ರಾಷ್ಟ್ರೀಯತೆಯ ಭಾವನೆ ಮೇಲುಗೈ ಪಡೆದುಕೊಂಡಿದೆ, ಇದಕ್ಕೆ ಚೀಣೀಯರ ಕೊಡುಗೆಯೇ ಪ್ರಧಾನ.

ಚೀಣಿ ಗಣರಾಜ್ಯ ಇಂದು ತನ್ನ ೫೦ನೇ ವಾರ್ಷಿಕೋತ್ಸವವನ್ನು ಆಚರಿಸುತ್ತಿದೆ. ಈಗಲೂ ಚೀಣಾ ತನ್ನ ಐತಿಹಾಸಿಕ ಪಾತ್ರದಲ್ಲಿ ತೊಡಗಿಕೊಳ್ಳಲು ಕಾಲ ಮಿಂಚಿಲ್ಲ. ಬವಲಾಗಿರುವ ಇಂದಿನ ಪರಿಸ್ಥಿತಿಯಲ್ಲಿ, ಅದರಲ್ಲೂ ಏಕಶಕ್ತಿ ಕೇಂದ್ರದ ಜಗತ್ತಿನಲ್ಲಿ, ಚೀಣಾ, ಭಾರತ ಮತ್ತು ರಷ್ಯಾಗಳು ಒಂದುಗೂಡಿದಲ್ಲಿ ಅಂತರರಾಷ್ಟ್ರೀಯ ವ್ಯವಹಾರಗಳಲ್ಲಿ ಪ್ರಮುಖ ಪಾತ್ರ ವಹಿಸಬಲ್ಲವಾಗಿವೆ. ಚೀಣಾ ಈ ದಿಶೆಯಲ್ಲಿ ಅಡಿಯಿರಿಸೀತೆಂದು ಹಾರೈಸೋಣ. ಸುವರ್ಣ ಮಹೋತ್ಸವದ ಸಂದರ್ಭದಲ್ಲಿ ಚೀಣೀ ಜನತೆಗೆ ಶುಭ ಕೋರೋಣ.

ಸೀಯಾರ್ಕೆ

# ಗಿಡಗಳನ್ನು ಬೆಳೆಸುವುದು ಹೇಗೆ?

ನಮ್ಮ ಕೃಷಿ ಮಿತ್ರರೊಬ್ಬರಿಗೆ ತಮ್ಮ ತೋಟದಲ್ಲಿ ಮೋಟು ಬೆಳೆಸುವ ಆಸೆ. ಇದು ಅವರೊಬ್ಬರ ಆಸೆ ಏನಲ್ಲ, ಈ ಶತಮಾನದಲ್ಲಿ ಮಾನವ ಕಂಡ ಹೊಸ ದಿಶೆ ನೋಟದಿಂದ ಆನಂದ ಪರಿಗಣಿಸಬಹುದು, ಆರೋಗ್ಯ ಪರಿಗಣಿಸಬಹುದೆಂಬ ಭಾವ, ಭಾಷೆ.

ಈಗಾಗಲೇ ತೆಂಗು, ಅಡಿಕೆ, ಬಾಳೆ ನೆಟ್ಟಿದ್ದಾರೆ. ಅರಿಶಿನ, ಶುಂಠಿ ಇಟ್ಟಿದ್ದಾರೆ. ಈಗ ಒಂದು ವರ್ಷದ ಹಿಂದೆ – ''ಜ್ಯಾಕ್ಯಾ ಗಿಡ ಮಾರಾಟಕ್ಕಿದೆಯೇ? ಐವತ್ತು ಬೇಕಾಗಿತ್ತು'' ಎಂದು ನನ್ನಲ್ಲಿ ವಿಚಾರಿಸಿದರು. ನನ್ನಲ್ಲಿ ಅಂದು ಹತ್ತು ಗಿಡಗಳು ಮಾತ್ರ ಇದ್ದವು. ಹಾಗಾದರೆ ಎಲ್ಲಿ ಸಿಗುವುದೆಂದು ವಿಚಾರಿಸಲಾಗಿ, ಲಭ್ಯ ಮಾಹಿತಿ ಕೊಟ್ಟಿದ್ದೆ.

ಒಂದು ವರ್ಷದ ತರುವಾಯ ಈಗ ಮತ್ತೆ ವಿಚಾರಿಸಿದರು –''ಜ್ಯಾಕ್ಯಾ ಕಸಿಗಿಡಗಳು ನನಗೆ ಬೇಕಾಗಿವೆ. ಎಲ್ಲಿ ಸಿಗುವುದು?'' ಮೊದಲಾಗಿ ಎಲ್ಲ ಸಂದರ್ಭಕ್ಕೂ ಹೊಂದುವ ಉತ್ತರ ಕೊಟ್ಟೆ – ''ಗೊತ್ತಿಲ್ಲ''

ಆಮೇಲೆ ಕೇಳಿದೆ – ''ನಿಮಗೆ ಕಸಿ ಗಿಡವೆಂಬ ಮೋಹ ಯಾಕೆ? ಅದಕ್ಕಿಂತ ಬೀಜದ ಗಿಡವೇ ಲೇಸು, ಬೀಜದ ಗಿಡಕ್ಕೆ ರೋಗ ಕಡಿಮೆ, ಆಯುಸ್ಸು ಜಾಸ್ತಿ, ನೀರು, ಗೊಬ್ಬರ, ನಿರ್ವಹಣೆ ಎಲ್ಲವೂ ಕಡಿಮೆ ಸಾಕು. ತಜ್ಞತೆಯ ಅಗತ್ಯವಿಲ್ಲ'' ಎಂದು ಹೇಳಿದೆ.

ಅವರು ಕಸಿಗಿಡವನ್ನು ಅಪೇಕ್ಷಿಸಲು ಸ್ಪಷ್ಟ ಉದ್ದೇಶ ಇತ್ತು – ''ನನಗೆ ಬೇಗ ಇಳುವರಿ ಬೇಕು. ವರ್ಷಗಟ್ಟಲೆ ಕಾಯಲು ಸಾಧ್ಯವಿಲ್ಲ'' ಎಂದರು.

ಆಹಾ ಆಹಾ.... ನಾನು ನಮ್ಮ ಕೃಷಿ ತಜ್ಞರ ವ್ಯವಸ್ಥಿತ ಪ್ರಚಾರ ಸಾಮರ್ಥ್ಯಕ್ಕೆ ಮಾರು ಹೋದೆ. ಕಸಿ ಎಂಬ ಶಬ್ದವೇ ನಮ್ಮ ರೈತರಲ್ಲಿ ಭ್ರಾಂತಿಯನ್ನು ಹುಟ್ಟಿಸುತ್ತಿದೆ. ಇಂದು ಯಾವುದೇ ಗಿಡವಾಗಲೀ, ಬೀಜವಾಗಲೀ ಜೊತೆಗೆ ಕಸಿ ಎಂಬ ಹೆಸರು ಅಥವಾ ಹೈಬ್ರಿಡ್ ಎಂಬ ವಿಶೇಷಣ ಸೇರಿದರೆ ಇನ್ನೂ ಸ್ವಲ್ಪ ಮುಂದುವರಿದು ಇಂಪೋರ್ಟೆಡ್ ಎಂದು ಕೂಡಿಸಿದರೆ ಭಾರೀ ಬೇಡಿಕೆ, ಆತುರದ ವ್ಯಾಪಾರ.

ಇಂದು ಸಾಗುವಾನಿ ಕಸಿಗಿಡಗಳನ್ನು ಮಾಡಿ ಮಾರಲಾಗುತ್ತಿದೆ. ಅದಕ್ಕೆ ವಿಶೇಷ ದರ ಹಾಗೂ ಬೇಡಿಕೆ, ಕಸಿ ಇರುವುದು ಕುಬ್ಜ ಗಿಡದಲ್ಲಿ ಬೇಗ ಫಸಲು ಕೊಡಲು, ಹೆಚ್ಚು ಫಸಲು ಕೊಡಲು. ಗಮನಿಸಿ – ''ಕುಬ್ಜಗಿಡದಲ್ಲಿ''.

ಸಾಗುವಾನಿ ಗಿಡ ಅದೆಂಥಾ ಫಸಲು ಕೊಡಬೇಕು? ಸದೃಢ, ಸಶಕ್ತ, ದೈತ್ಯಗಾತ್ರದ ಮರ ಬೆಳೆಯುವುದಲ್ಲವೇ ಸಾಗುವಾನಿಯ ಉದ್ದೇಶ? ಈ ಉದ್ದೇಶಕ್ಕೆ ಕಸಿ ಹೇಗೆ ಪೂರಕವಾಗಿದೆ ಎಂಬ ಪ್ರಶ್ನೆಗೆ ಉತ್ತರವಿಲ್ಲ ಕಸಿ ಕಟ್ಟಿದ ಜಾಗ ಶಾಶ್ವತ ಅಂಗಊನತೆಯಾಗಿರುತ್ತದೆ. ಸುಲಭದಲ್ಲಿ ಕೀಟಗಳಿಗೆ, ರೋಗಗಳಿಗೆ ಪಕ್ಕಾಗ ಬಲ್ಲುದು. ಗಾಳಿಗೆ ಮುರಿಯಬಲ್ಲುದು. ಮೋಪಿನ ಮರದ ಮೇಲೆಯೂ ಕಸಿ ಎಂಬ ಮೋಹದ ಬಲೆ ಬೀಸಿ ಆ ಮರವನ್ನು, ನಮ್ಮನ್ನು ಒಟ್ಟಾಗಿ ಪ್ರಕೃತಿಯನ್ನು ಕುಬ್ಜಗೊಳಿಸಲಾಗುತ್ತಿದೆ. ಕೆಲವರು ಕೇವಲರು ಹಣ ಮಾಡುವ ದಾರಿ ಇದಾಗಿದೆ.

ಯಾವುದೇ ವಿದ್ಯೆ, ವಿಚಾರಗಳು ವ್ಯಾಪಾರದ ವಸ್ತುವಾಗಿ ಬದಲಾಗುವುದು ಈ ದಿನಗಳ ವಿಶೇಷ. ಕಸಿಯ ಕೆಲವು ಗುಣಗಳನ್ನು ಅಸಂಬದ್ಧವಾಗಿ ಪ್ರಯೋಗಿಸಿ ರೈತರ ಮನಸ್ಸುಗಳನ್ನು ಕೆಡಿಸಲಾಗಿದೆ. ''ಕುಬ್ಜ ಗಿಡದಲ್ಲಿ ಬೇಗ ಫಸಲು, ಅಧಿಕ ಫಸಲು'' ಎಂಬ ವಾಕ್ಯವನ್ನು ಗಮನಿಸಿ. ಆ ಮರದ ಕಾಂಡ ಕುಬ್ಜ, ಬೇರು ಕುಬ್ಜ. ಎಂತಲೇ ಅದರ ನಡೆ ಕುಬ್ಜ. ಅದು ಅದರ ಆಹಾರವನ್ನು ಸ್ವತಂತ್ರವಾಗಿ ತಯಾರಿಸಲಾರದು – ಭೂಮಿಯ ಆಳಕ್ಕೆ ಆಧಾರವನ್ನು ಇಳಿಸಲಾರದು. ನೀರು ಗೊಬ್ಬರವನ್ನು ಹುಡುಕಲಾರದು. ಗಾಳಿಗೆ ತಾಳಲಾರದು. ಕೀಟ ನಿರೋಧಿಸಲಾರದು. ಮರ ನೇರ ಬಾರದು. ಮೋಪಿಗೆ ಆಗದು.

ಎ. ಪಿ. ಚಂದ್ರಶೇಖರ

ನಾವು ಅಪೇಕ್ಷಿಸಿದ ರುಚಿಯ ಹಣ್ಣನ್ನು (ಮುಖ್ಯವಾಗಿ ಮಾವು) ನಮ್ಮಲ್ಲಿ ಪಡೆಯುವ ಉಪಾಯವಾಗಿ ಮಾತ್ರ ಕಸಿತಂತ್ರ, ವಿದ್ಯೆ ಗುಣಾತ್ಮಕವೇ ಹೊರತು ಬೇರೆ ಎಲ್ಲ ರೀತಿಯಲ್ಲೂ ಕಸಿ ದೋಷಯುಕ್ತವೇ ಆಗಿದೆ ಎಂಬುದನ್ನು ರೈತರಾದವರು ಅರಿತು ತಮ್ಮಲ್ಲಿರುವ ಕುಬ್ಜತೆಯನ್ನು ಕಳೆದುಕೊಳ್ಳಬೇಕಾಗಿದೆ. ತಮ್ಮ ತೋಟದಲ್ಲಿ ತಾನಾಗಿ ಹುಟ್ಟಿ ಬೆಳೆದ ಮಾವಿಗೆ ತಾವೇ ಕಸಿ ಮಾಡುವ ಮೂಲಕ ಪ್ರಕೃತಿಯ ಸಮರ್ಥ ಸ್ವಾವಲಂಬನೆಯನ್ನು ಕಾಪಾಡಬಹುದಾಗಿದೆ.

ಬೇಗ ಫಸಲು ಕೊಡುವುದಕ್ಕಾಗಿ ಅವರಿಗೆ ಕಸಿ ಜ್ಯಾಕ್ಯಾ ಗಿಡಗಳು ಬೇಕಾಗಿರುವುದು. [illegible]

[illegible] ಉಪಕ್ರಮಿಸಿದ್ದೇವೆ. ಎತ್ತರದಲ್ಲಿ [illegible] ಉತ್ಸಾಹ ಅತಿಯಾಗಿ ವೇಗ ಹೆಚ್ಚಿಸಿ ಬೇಗ ಹತ್ತಲು ಹೊರಟರೆ ಏನಾದೀತು?.

ಮುಂಡಪ್ಪ ಮಾವಿನ ಹಣ್ಣು ಬಹಳ ರುಚಿ. ಆದರೆ ಅದು ಬಲಿತು ಹಣ್ಣಾಗಲು ರಸಪೂರಿ, ಬಾದಾಮಿಗಳಿಗಿಂತ ಜಾಸ್ತಿ ದಿನ ಬೇಕು. ಬೇಗ ರುಚಿನೋಡುವ ಆಸೆಯಿಂದ ಕಾಯಿಯನ್ನು ಮರದಿಂದ ಬಿಡಿಸಿದರೆ ಏನಾಗುವುದು?

ಮಡದಿ ಬಸುರಾಗಿದ್ದಾಳೆ, ಮಗುವನ್ನು ಮುದ್ದಿಡಲು ಆತುರ, ಬೇಗ ಹೆರಿಗೆ ಮಾಡಿಸೋಣವೇ ?

ಮಗ ವೈದ್ಯನಾಗಿ ಬೇಗ ಮತ್ತು ಹೆಚ್ಚು ಹಣ ಸಂಪಾದಿಸುವುದು ನಮಗೆ ತೀರ ಅನಿವಾರ್ಯ. ಒಂದನೇ ತರಗತಿಗೆ ಸೇರಿಸುವ ಬದಲು ಸೀದ ಎಂ.ಬಿ.ಬಿ.ಎಸ್. ಕೊನೆಯ ವರ್ಷಕ್ಕೆ ಸೇರಿಸಲು ಬರುವುದೇ ?

ಪ್ರಕೃತಿಯಲ್ಲಿ ಪ್ರತಿಯೊಂದು ವಿಷಯಕ್ಕೂ ಅದರದ್ದೇ ಆದ ರೀತಿ–ನೀತಿಗಳಿವೆ. ಅದನ್ನು ಮೀರಿ ''ಬೇಗ''ವನ್ನು ಬಯಸುವುದು ಬೇಗೆಗೆ ಕಾರಣವಾಗುವುದು.

ಅದು ಮಾವಿರಲಿ, ಹಲಸಿರಲಿ, ನೇರಳೆ ಇರಲಿ, ಪೇರಳೆ ಇರಲಿ ಬೀಜದಿಂದ ಗಿಡ ಮಾಡಿದರೂ ಐದರಿಂದ ಹತ್ತು ವರ್ಷಗಳಲ್ಲಿ ಒಳಗೆ ಫಸಲಿಗೆ ಬರುತ್ತದೆ. ಸಕಲ ಸ್ವಾಭಾವಿಕ ಸಾಮರ್ಥ್ಯಗಳನ್ನು ಮೈಗೂಡಿಸಿಕೊಂಡು ಸಹಸ್ರಾರು ವರ್ಷ ಬಾಳಲು ಬೇಕಾದ ಸನ್ನದ್ಧ ಸ್ಥಿತಿಯಲ್ಲಿರುತ್ತದೆ. ಒಂದೊಂದು ಬೀಜದ ಗಿಡವೂ ವೈವಿಧ್ಯಪೂರ್ಣ ಪ್ರಕೃತಿಗೆ ಕೊಡುಗೆಯಾಗಿ ಹೊಸ ರುಚಿಯನ್ನು ಆವಿಷ್ಕರಿಸಿ ಬಂದಿರುತ್ತದೆ. ಪ್ರಕೃತಿಯ ಈ ಸಾಮರ್ಥ್ಯವನ್ನು ಹರಣಮಾಡಿ ಎರಡೋ ಮೂರೋ ವರ್ಷ ಬೇಗ ಫಸಲು ತೆಗೆಯುವ ಅನಿವಾರ್ಯವಾದರೂ ನಮಗೇನು? ನಮ್ಮ ಜೀವಿತದ ಅರವತ್ತು ವರ್ಷಗಳ ಮುಂದೆ ಮೂರು ವರ್ಷ ದೊಡ್ಡ ಸಂಖ್ಯೆ ಇರಬಹುದು. ಆದರೆ ಸಾವಿರ ವರ್ಷ ಬಾಳುವ ಆ ಮರಕ್ಕೆ ಮೂರು ವರ್ಷ ದೊಡ್ಡ ಸಂಗತಿಯೇ ಅಲ್ಲ. ಸಾವಿರ ವರ್ಷ ಬಾಳಬೇಕಾದ ಮರವನ್ನು ಕಸಿಮಾಡಿ ನಮ್ಮ ಅವಸರಕ್ಕೆ ಹೊಂದಿಸಿ ಬೇಗ ಸಾವಿನಂಚಿಗೆ ಸಾಗಿಸುವ ನಮ್ಮ ವರ್ತನೆ ಸಾಧುವಾದದ್ದಲ್ಲ.

ನಮ್ಮ ಸಣ್ಣ ಆಯುಸ್ಸಿನೊಳಗೆ ಪ್ರಕೃತಿಯ ಎಲ್ಲ ಆಗು ಹೋಗುಗಳೂ ನೆರವೇರಿಬಿಡುವ ಅಗತ್ಯವೇನೂ ಇಲ್ಲ. ನಮ್ಮ ಆಯುಸ್ಸು ಸಣ್ಣದೆಂದು ನಮಗೆ ಗೊತ್ತು – ಹಾಗೆಂದೇ ಈ ಅವಧಿಯೊಳಗೆ ಬೇಗ ಹಾಗೂ ಹೆಚ್ಚು ಫಸಲು ತೆಗೆಯುವುದು ನಮ್ಮ ಆಸೆ. ಆದರೆ ಇಷ್ಟು ಸಣ್ಣ ಆಯುಸ್ಸನ್ನು ಕಳೆಯಲು ನಮಗೆ ಎಷ್ಟು ಸಂಗ್ರಹ ಬೇಕು? ಸಂಪತ್ತು ಬೇಕು? ಎಂಬ ಕುರಿತು ನಾವ್ಯಾರೂ ಪ್ರಶ್ನೆ ಮಾಡಿಕೊಂಡಂತಿಲ್ಲ.

ಇಂದು, ಈಗ, ಬೇಗ ಕಸಿಮಾವು, ಹಲಸು, ಜ್ಯಾಕ್ಯಾ ನೆಟ್ಟು ನಾವು ಫಸಲು ತೆಗೆಯುವ ಅನಿವಾರ್ಯತೆ ಬಂದದ್ದು ನಾವು ಪ್ರಕೃತಿಯಲ್ಲಿ ಇದ್ದ ಎಲ್ಲಾ ಮರಗಿಡಗಳನ್ನು ಬೇಗ ಬೇಗ ಕಡಿದು ಮುಗಿಸಿದ್ದರಿಂದ.

ನಾಲ್ಕಾರು ಮಾರ್ಗ ಸೇರುವ ವೃತ್ತದಲ್ಲಿ ಸಿಗ್ನಲ್ ದೀಪ ಕೆಂಪು ತೋರಿಸುತ್ತಿದೆ. ನಮಗೆ ಬೇಗ ಹೋಗುವ ಅವಸರ ಇದೆ. ಮನದಲ್ಲಿ ಉದ್ವೇಗ ತುಂಬಿದೆ. ಆದರೆ ನಾವೆಷ್ಟು ಚಡಪಡಿಸಿದರೂ, ಹಾರ್ನ್ ಹೊಡೆದರೂ ಕಾಲ ಕೂಡಿದಾಗಲೇ ಹಸುರು ದೀಪ ಕಾಣಿಸುವುದು. ಎಲ್ಲ ಜೀವಿಗಳಿಗೂ ಸಮಾನ ಅವಕಾಶ ಕೊಡುವುದು ಪ್ರಕೃತಿ ಧರ್ಮ. ಮೀರಿ ನಡೆದರೆ ಶಿಕ್ಷೆ ಅಪಘಾತ ನಿಶ್ಚಿತ.

ಬಯಲು ಸೀಮೆ – ಮೈಸೂರು – ವಿಶೇಷವಾದ ಗುಣ ವೈಭವವನ್ನು ಹೊಂದಿದೆ. ಕೊಡಗಿನಲ್ಲಿ ಕಾಫಿ ಮೂರು ವರ್ಷಕ್ಕೆ ಫಸಲಿಗೆ ಬರುವುದಾದರೆ ಇಲ್ಲಿ ಒಂದು ವರ್ಷಕ್ಕೇ ಬರುತ್ತದೆ. ದಕ್ಷಿಣ ಕನ್ನಡದಲ್ಲಿ ಗೇರು, ಕಾಡುಮಾವು, ಹಲಸು ಇತ್ಯಾದಿಗಳು ಹತ್ತು ವರ್ಷಗಳನ್ನು ತೆಗೆದುಕೊಂಡರೆ ಇಲ್ಲಿ ಐದಾರು ವರ್ಷಗಳಲ್ಲೇ ಫಸಲಿಗೆ ಬರುತ್ತದೆ. ತವರಾದ ಕೇರಳದಲ್ಲಿ ಜ್ಯಾಕ್ಯಾ ಆರು ವರ್ಷ ಅಪೇಕ್ಷಿಸಿದರೆ ನಮ್ಮೂರಲ್ಲಿ ಮೂರು ವರ್ಷಕ್ಕೆ ಕಾಯಿ ಕಚ್ಚುತ್ತದೆ. ಎಲ್ಲವೂ ಇಷ್ಟೊಂದು ಬೇಗ ಬರುವ ಪ್ರಕೃತಿಯನ್ನು ಇನ್ನಷ್ಟು ಶೋಷಿಸುವ ಬದಲು–

ಜ್ಯಾಕ್ಯಾ ಗಿಡ ಇಲ್ಲಿ ಮೂರು ವರ್ಷಕ್ಕೆ ಫಸಲಿಗೆ ಬರುತ್ತದೆ. ಕಸಿ ಗಿಡ ನೆಟ್ಟರೆ ಎರಡು

(ಮುಂದಿನ ಪುಟ ನೋಡಿ)

# ಕೃಷಿ ಎಂಬ ಮಾಯಾಲೋಕ

ಈ ಕೆಳಗಿನ ವಿಷಯಗಳನ್ನು ಸ್ವಲ್ಪ ಗಮನಿಸಿ....

ಹತ್ತಿಯ ಬೀಜಗಳನ್ನು ಆಕಳ ಸಗಣಿಯಲ್ಲಿ ಹುದುಗಿಸಿ, ಗೋಮೂತ್ರದಿಂದ ಅನೇಕಾವರ್ತಿ ತೋಯಿಸಿ, ಕೊನೆಗೆ ಚೆನ್ನಾಗಿ ಒಣಗಿಸಿ, ಬಿತ್ತುವ ಕಾಲಕ್ಕೆ ಆಕಳ ಸಗಣಿಯನ್ನು ನೀರಿನಲ್ಲಿ ಕಸಲಿ ಆ ನೀರನ್ನು ಬೀಜವನ್ನು ಹಾಕಿದ ಮೇಲೆ ಆ ಸಾಲುಗಳಲ್ಲಿ ಹಾಕುತ್ತಾ ಬಂದರೆ ಅವೆಲ್ಲವೂ ನಿಂಬೆಯ ಗಿಡಗಳಾಗಿ ಹುಟ್ಟುವವು.

ಮಾವಿನ ಬೀಜವನ್ನು ಅಂಕೋಲೆ ಹಣ್ಣಿನ ಕಷಾಯದಲ್ಲಿ ನೆನೆಯಿಸಿ ಫಲವತ್ತಾದ ಭೂಮಿಯಲ್ಲಿ ಪಾತ್ರೆಯನ್ನು ಮಾಡಿ ಅದರಲ್ಲಿ ಬಿತ್ತಿ ಮಾಂಸ, ಮೇಕೆಯ ಹಾಲು, ಎಣ್ಣೆ ಗಾಣದ ಹಿಂಡಿ ಇವುಗಳನ್ನು ಕಲಸಿ ಕೊಳೆಯಿಟ್ಟು ಗೊಬ್ಬರವನ್ನು ಮಾಡಿ ಹಾಕಬೇಕು. ಹೀಗೆ ಹಾಕಿದ ಮಾವಿನ ಬೀಜವು ಗಿಡವಾಗುವುದರ ಬದಲು ಬಳ್ಳಿಯಾಗಿ ಸವೆದಾ ಕಾಯಿ ಹಣ್ಣುಗಳನ್ನು ಬಿಡುತ್ತಿರುತ್ತದೆ.

ಇಂತಹವೇ ಹಲವಾರು ನುಡಿ ಮುತ್ತುಗಳಿರುವ ಪ್ರತ್ಯಕ್ಷ ಚಮತ್ಕಾರ ಚಂದ್ರಿಕೆ ಎಂಬ ಪುಸ್ತಕ ಮಾರಾಟಕ್ಕೆ ನವೀನ ಪದ್ಧತಿಗಳನ್ನು ಅನುಸರಿಸಲಾಗುತ್ತಿದೆ. ಇದು ಯಾವ ಪುಸ್ತಕದ ಅಂಗಡಿಯಲ್ಲೂ ದೊರೆಯುವುದಿಲ್ಲವಂತೆ. ಪ್ರಕಾಶಕರೇ ನೇರವಾಗಿ ಆಸಕ್ತಿ ಇರುವವರಿಗೆ ಮಾತ್ರ ಕೊಡುತ್ತಾರಂತೆ. ಜನರಲ್ಲಿ ಈ ಪುಸ್ತಕದ ಬಗ್ಗೆ ಆಸಕ್ತಿ ಕುದುರಿಸಲೂ ಒಂದು ವಿಧಾನ ಬೇಕಲ್ಲವೆ ? ಅದು ಬಹಳ ಸುಲಭ. ಇಂದು ರಾಸಾಯನಿಕ ಕೃಷಿಯಿಂದ ಬೇಸತ್ತ ಅನೇಕ ರೈತರು ಬೇರೆ ಕೃಷಿ ವಿಧಾನಗಳ ಅನ್ವೇಷಣೆಯಲ್ಲಿರುವುದು ಸರಿಯಷ್ಟೇ ? ಇಂತಹ ರೈತರನ್ನು ಸೆಳೆಯಲು ಇಂದು ಎಲ್ಲೆಲ್ಲೂ ಅನೇಕ ಸೆಮಿನಾರುಗಳು, ಕಾರ್ಯಾಗಾರಗಳೂ ಸದಾ ನಡೆಯುತ್ತಿರುತ್ತವೆ. ಸುಸ್ಥಿರ ಕೃಷಿ ,ಸಾವಯವ ಕೃಷಿ ಹೆಸರಿನಲ್ಲಿ ನಡೆಯುವ ಈ ಸೆಮಿನಾರುಗಳಿಗೆ ಒಂದಷ್ಟು ದುಡ್ಡು ಕೊಟ್ಟುಹೋದ ರೈತರಿಗೆ ತಲೆ ಸವರಿ ಅವರಿಗೆ ಚಮತ್ಕಾರ ಚಂದ್ರಿಕೆಯಂತಹ ಹಲವಾರು ಪುಸ್ತಕಗಳನ್ನು ಗಂಟುಹಾಕುವ ಒಂದು ಗುಂಪೇ ಹುಟ್ಟಿಕೊಂಡಿದೆ. ಕೃಷಿಯ ಹೆಸರಿನಲ್ಲಿ ಇನ್ಯಾವುದೋ ಮೌಢ್ಯಗಳನ್ನು ಬಿತ್ತರಿಸುವ hidden agenda ಇರುವ ಈ ಚಂದ್ರಿಕೆಯನ್ನು ೧೯೩೩ರಲ್ಲಿ ಬರೆದ ಶ್ರೀಸಿದ್ಧಾಂತ ವಿರೂಪಾಕ್ಷ ಶಾಸ್ತ್ರಿಗಳ ಉದ್ದೇಶ ಏನಿತ್ತೋ ಗೊತ್ತಿಲ್ಲ. ಮಾರಾಟ ಮಾಡಿದ ಪ್ರತಿ ಪುಸ್ತಕಕ್ಕೂ ತಮ್ಮ ಸಹಿ ಹಾಕಿ ಮಾರುವ ಇಂದಿನ ಪ್ರಕಾಶಕರಾದ ಡಾ|| ಹೆಚ್.ಎಂ. ಜಗದೀಶರವರ 'ಗ್ರಂಥ ಕರ್ತರ ದಸ್ಕತ್ತು ಇಲ್ಲದೆ ಗ್ರಂಥವನ್ನು ಯಾರು ಪಡೆದಾಗ್ಯೂ ಅವರು ಕಳವು ತಪ್ಪಿತಕ್ಕೆ ಗುರಿಯಾಗುತ್ತಾರೆ'. ಎಂಬ ಬೆದರಿಕೆಯನ್ನು ನೋಡಿದರೆ ಅವರ ಉದ್ದೇಶಗಳ ಬಗ್ಗೆ ಅನುಮಾನ ಉಂಟಾಗುತ್ತದೆ.



ಸೆಮಿನಾರುಗಳಲ್ಲಿ ರೈತರನ್ನು ಮೋಡಿಮಾಡಲು ಬೇಕಾದ ಮಾತುಗಾರಿಕೆಯನ್ನು ಕಲಿತ, ಯಾವುದೋ ಡಿಗ್ರಿಗಳನ್ನು ಪಡೆದು ತಾವು ವಿಜ್ಞಾನಿಗಳೆನಿಸಿಕೊಂಡು ಬಿಟ್ಟಿರುವ ಕೆಲವು ಮಂದಿ ಈ ಪುಸ್ತಕದಲ್ಲಿ ಮೇಲೆ ಮೇಲೆ ಉದಾಹರಿಸಿದಂತಹ ಮೌಢ್ಯಗಳಿಗೆ ತಮ್ಮ ದಿವ್ಯ ವೈಜ್ಞಾನಿಕ ವಿವರಣೆಗಳನ್ನು ಕೊಡುವ ಹಿಂದಿನ ಉದ್ದೇಶಗಳೂ ಅಷ್ಟೇನೂ ನಿಗೂಢವಲ್ಲ. ಪರಂಪರಾಗತವಾಗಿ ಯಾವುದೋ ನಂಬಿಕೆ ಆಚರಣೆಗಳಲ್ಲಿ ಹೂತುಹೋಗಿದ್ದ ರೈತ ಸಮುದಾಯವನ್ನು ಹೊರಗೆಳೆದು ತರಲು ಕಳೆದ ಐದು ದಶಕಗಳಲ್ಲಿ ಸಂಪೂರ್ಣ ಯಶಸ್ಸು ಸಾಧಿಸಿದ್ದೇವೆ ಎಂದು ಧೈರ್ಯವಾಗಿ ಇಂದು ನಾವು ಹೇಳುವಂತಿಲ್ಲ. ಉತ್ತಮ ಉದ್ದೇಶಗಳನ್ನು ಹೊಂದಿದ್ದ ಹಸಿರು ಕ್ರಾಂತಿ ಹೆಸರಿನಲ್ಲಿ ಕೆಲವು ತಪ್ಪು ಹೆಜ್ಜೆಗಳನ್ನು ನಾವು [illegible] ಸರಿಯಷ್ಟೇ. ಇಂದು ರೈತರನ್ನು ರಾಸಾಯನಿಕ ಕೃಷಿಯ ತಪ್ಪುಗಳಿಂದ ಹೊರತಂದು ವೈಜ್ಞಾನಿಕವಾಗಿ ಸಿದ್ಧಪಟ್ಟ ಸುಸ್ಥಿರ ಕೃಷಿಯೆಡೆಗೆ ದಾರಿ ತೋರಬೇಕಾದದ್ದು ಎಲ್ಲಾ ಪ್ರಜ್ಞಾವಂತರ ಕರ್ತವ್ಯ.

ಪಾರಂಪರಿಕ ಜ್ಞಾನಕ್ಕೆ, ರೈತರ ಅನುಭವಗಳಿಗೆ , ಅವುಗಳ ಒಳನೋಟಗಳಿಗೆ ತನ್ನದೇ ಆದ ಬೆಲೆ ಇದೆ. ಪಾರಂಪರಿಕ ಜ್ಞಾನವೂ ವೈಜ್ಞಾನಿಕವೇ. ರೈತರ ಅನುಭವಗಳನ್ನು ಮೀರಿದ ಪ್ರಯೋಗಗಳಿರಲು ಸಾಧ್ಯವಿಲ್ಲ. ಇಂದು ರೈತರ ಒಳನೋಟ ವಿಜ್ಞಾನಿಗಳ ಆಧುನಿಕ ಜ್ಞಾನ ಒಟ್ಟಿಗೆ ಬರಬೇಕಿದೆ. ಆದರೆ ಈ ಪಾರಂಪರಿಕ ಜ್ಞಾನ ಇರುವುದು ಮೇಲಿನಂತಹ ಎಡಬಿಡಂಗಿ ಹೆಸರಿನಲ್ಲಿ, ಸ್ಥಳೀಯ ಬೀಜಸಂರಕ್ಷಣೆಯ ಹೆಸರಿನಲ್ಲಿ ಸಂಪ್ರದಾಯವಾದಿಗಳು ತಮ್ಮ ಬೇಳೆ ಬೇಯಿಸಿಕೊಳ್ಳುವ ಹುನ್ನಾರಗಳ ಬಗ್ಗೆ ರೈತರು ಎಚ್ಚರದಿಂದಿರುವುದು ಅವಶ್ಯಕ.

ಆದರೆ ರೈತರ ದುರದೃಷ್ಟ ನೋಡಿ. ತಮ್ಮ ಮಕ್ಕಳಿಗೆ ವಿದ್ಯೆ ಕಲಿಸಲು ಅವರು ಪಡೆದ ಶ್ರಮವಿಲ್ಲ. ಆದರೆ ಇಲ್ಲೂ ಅವರಿಗೆ ದಿಕ್ಕು ತಪ್ಪಿಸುವ ಹುನ್ನಾರಗಳೇ ಹೆಚ್ಚು. ಇಂದು ಎಲ್ಲೆಲ್ಲೂ ಜೆ.ಓ.ಸಿ ಕೋರ್ಸುಗಳ ಕಾಲ ಶುರುವಾಗಿಬಿಟ್ಟಿದೆ. ಒಂದೇ ಒಂದು ಹಸು ಸಾಕಲೂ ಸ್ಥಳವಿಲ್ಲದಂತಹ ಶಾಲೆಗಳಲ್ಲೂ ಡೈರಿ ಡಿಪ್ಲಮೋ(?) ಕೋರ್ಸುಗಳು ಪ್ರಾರಂಭವಾಗಿವೆ. ಒಂದು ಗುಂಟೆಯಷ್ಟು ರೇಷ್ಮೆ ಬೆಳೆಯಲು ಯೋಗ್ಯತೆಯಿಲ್ಲದ ಶಾಲೆಗಳು ಸಿರಿಕಲ್ಚರ್ ಡಿಪ್ಲಮೋ(?) ತರಗತಿಗಳನ್ನು ನಡೆಸುತ್ತಿವೆ. ಎಸ್.ಎಸ್.ಎಲ್.ಸಿ. ನಂತರ ಪಿ.ಯು.ಸಿ ಮಾಡಿ ಯಾವುದಾದರೂ ಪದವಿಯನ್ನಾದರೂ ಪಡೆಯುವ ಅವಕಾಶವನ್ನು ತಪ್ಪಿಸಿ ಹಳ್ಳಿಯ ಮಕ್ಕಳನ್ನೆಲ್ಲ ದಿಕ್ಕು ತಪ್ಪಿಸಲಾಗುತ್ತಿದೆ. ಕೃಷಿ, ಹೈನುಗಾರಿಕೆ, ರೇಷ್ಮೆ ಮುಂತಾದ ವಿಷಯಗಳ ಬಗ್ಗೆ ರೈತರಿಗೆ ಬೇಕಾದ ಆಧುನಿಕ ತಂತ್ರಜ್ಞಾನಗಳ ಬಗ್ಗೆ ತರಬೇತಿ ಕೊಡಬೇಕೆಂಬುದರಲ್ಲಿ ಎರಡು ಮಾತಿಲ್ಲ. ಆದರೆ ಯಾವುದಕ್ಕೂ ಬಾರದ ಅಯೋಗ್ಯರೆಲ್ಲಾ ಶಾಲೆಗಳೆಂಬ ಅಂಗಡಿಗಳನ್ನು ತೆರೆದು ರೈತರ ಮಕ್ಕಳಿಗೆ ಯಾವ ರೀತಿಯ ಮಾರ್ಗದರ್ಶನ ಕೊಡಲು ಸಾಧ್ಯ ?. ಕೇಂದ್ರ ಸರ್ಕಾರದಿಂದ ಬರುವ ಒಂದಷ್ಟು ಅನುದಾನವನ್ನು ದೋಚಲು ಪ್ರಾರಂಭಿಸಿರುವ ಈ ಕೋರ್ಸುಗಳ ಬಗ್ಗೆ ರೈತರು ಸದಾ ಎಚ್ಚರವಾಗಿರಬೇಕು. ತಮ್ಮ ಮಕ್ಕಳಿಗೆ ಅತ್ಯುತ್ತಮವಾದ ವಿದ್ಯಾಭ್ಯಾಸ ಕೊಡಿಸುವುದು ರೈತರ ಹಕ್ಕು. ಹಾಗೆಂದು ವಿದ್ಯೆ ಕಲಿತವರೆಲ್ಲ ಕೃಷಿ ಕೈ ಬಿಡಬೇಕೆಂಬ ನಿಯಮವಿಲ್ಲ. ಇಂದು ಮರ್ಯಾದೆಯಾಗಿ ಇತರರಿಗೆ ಹೊರೆಯಾಗದೆ, ಬದುಕುತ್ತಿರುವವರು ರೈತರು ಮಾತ್ರ ಎಂಬುದನ್ನು ಮರೆಯದಿರೋಣ. ಆದರೆ ಈ ರೈತರ ದಿಕ್ಕು ತಪ್ಪಿಸುವ ಕೆಲಸ ಮಾಡುತ್ತಿರುವ ಮಾಫಿಯಾಗಳನ್ನು ಬಯಲಿಗೆಳೆಯೋಣ.

ಡಾ|| ಜಿ. ಎನ್. ಎಸ್. ರೆಡ್ಡಿ
ಮುಖ್ಯ ಕಾರ್ಯಕ್ರಮ ಸಂಯೋಜನ ಅಧಿಕಾರಿಗಳು, ಬೈಫ್ ಗ್ರಾಮೀಣ ಅಭಿವೃದ್ಧಿ ಸಂಸ್ಥೆ (ಕ), ಕಾಮಧೇನು,
ಅಂ. ಪೆ. ೩, ಶಾರದಾನಗರ, ತಿಪಟೂರು - ೫೭೨ ೨೦೨

---

(ಹಿಂದಿನ ಪುಟದಿಂದ)

ವರ್ಷಕ್ಕೆ ಬರುತ್ತದೆ ಎಂದೇ ಇಟ್ಟುಕೊಳ್ಳೋಣ, ಏನೂ ದೋಷಗಳಿಲ್ಲ ಎಂದೇ ತಿಳಿಯೋಣ, ಒಂದು ವರ್ಷ ಲಾಭವೆಂದೇ ಹಿಗ್ಗೋಣ. ಆದರೆ ಮಾನ್ಯರು ನನ್ನಲ್ಲಿ ಜ್ಯಾಕ್ಫ್ರೂಟ್ ಗಿಡ ನೆಡುವ ಬಗ್ಗೆ ವಿಚಾರಿಸಿ ಒಂದು ವರ್ಷ ಆಯಿತು. ಅಂದೇ ನೆಟ್ಟಿದ್ದರೆ, ಮನಕ್ಕಿರುವ ಬೇಗದ ಕಲ್ಪನೆಯನ್ನು ಕೈಗೆ ಕೊಟ್ಟಿದ್ದರೆ, ಮೈ ಚಳಿ ಬಿಟ್ಟಿದ್ದರೆ, ಕಸಿ ಇಲ್ಲದೆಯೂ ಬೇಗ ಆಗುತ್ತಿತ್ತಲ್ಲವೇ? ಹೆಚ್ಚು ಫಸಲಿಗಾಗಿ ಹೆಚ್ಚು ಕೆಲಸ ಮಾಡುವ ಪ್ರವೃತ್ತಿಯನ್ನು ಬೆಳೆಸುವುದು ಶ್ರೇಯವಲ್ಲವೇ?

ನಾಳೆ ಮಾಡುವ ಕೆಲಸವನ್ನು ಇಂದು ಮಾಡು
ಇಂದಿನ ಕೆಲಸವನ್ನು ಈಗ ಮಾಡು
ನಿನ್ನ ಕೆಲಸವನ್ನು ನೀನು ಮಾಡು
ಬೇರೆಯವರ ಮೇಲೆ ಅವಲಂಬನೆಯನ್ನು ಬಿಡು
ಈಗ ಎಲ್ಲ ಕೆಲಸಗಳೂ ಬೇಗ ಆಗುವುದನ್ನು ನೋಡು
ಗಿಡಗಳಿಗೆ ಪ್ರೀತಿಕೊಡು
ಪ್ರಾಕೃತಿಕ ಬೆಳವಣಿಗೆಗೆ ಅವಕಾಶ ಕೊಡು

ನಮಗೆ ಬೇಕಾದುದನ್ನು, ಅದಕ್ಕಿಂತ ಹೆಚ್ಚಾಗಿ ಬೇಡವಾದುದನ್ನು, ಬೇಗ ಬೇಗ ತಿಂದು ತೇಗಿ ಮುಗಿಸಿಬಿಟ್ಟರೆ ಸಂಪತ್ತು ಹಿಮಾಲಯದಷ್ಟಿದ್ದರೂ ಕರಗಿ ಹೋಗುವುದು. [illegible] ಶಬ್ದವು ಸದುಪಯೋಗವಾಗಲಿ ಎಂದು ಆಶಿಸೋಣ.

[illegible]
'ಇಂದ್ರಪ್ರಸ್ಥ', ಸಾವಯವಫಾರ್ಮ ಮತ್ತು [illegible]

# ಜೀವ ಕೈಯಲ್ಲಿ ಹಿಡಿದಿರುವವರು!

ಲೇ : ಎಸ್. ಜಿ. ಶಿವಶಂಕರ್

ಇಂತಹವರು ಯಾರು? ಎಲ್ಲಿದ್ದಾರೆ? ಕ್ಷಣಕಾಲ ಯೋಚಿಸಿದರೆ ಗೊತ್ತಾಗುವುದು ಜೀವ ಕೈಯಲ್ಲಿ ಹಿಡಿದಿರುವವರು ಎಲ್ಲೆಲ್ಲೂ ಇದ್ದಾರೆ. ನಮ್ಮ ನಡುವೆಯೇ ಇದ್ದಾರೆ; ನಮ್ಮ ಮನೆಯಲ್ಲೇ ಇದ್ದಾರೆ! ಇಂತಹವರನ್ನು ನಾವು ಗುರುತಿಸಿರುವುದಿಲ್ಲ ಅಷ್ಟೆ!

ಕಾರ್ಖಾನೆಯಲ್ಲಿ ಕೆಲವು ದಿನಗಳ ಹಿಂದೆ ನಡೆದ ಘಟನೆ ಇದು, ನನ್ನ ಸೀಟಿಗೆ ಬರುವ ಮುಂಚೆ ರಘುಪತಿಯ ಟೇಬಲ್ಲು ಸಿಗುತ್ತದೆ. ಅವನ ಟೇಬಲಿನ ಮುಂದೆ ಹಾದು ಹೋಗುವಾಗ ಸುಮ್ಮನೆ ಹೋಗಲಾದೀತೆ..? ಅದರಲ್ಲಿಯೂ ಸ್ನೇಹಿತನೆಂದ ಮೇಲೆ! ಅವನ ಕಡೆಗೊಮ್ಮೆ ನೋಡಿ, 'ಹಲೋ...' ಇಲ್ಲಾ.. 'ಹಾಯ್..?' - ಮುಂತಾಗಿ ಹೇಳುವುದು ಸಾಮಾನ್ಯ. ಅಂದು ಅವನ ಸೀಟಿನ ಮುಂದೆ ಹಾದು ಹೋಗುವಾಗ ಆತ ತನ್ನ ಕುರ್ಚಿಯಲ್ಲಿ ಕುಳಿತಿರದೆ ಪಕ್ಕಕ್ಕೆ ತಿರುಗಿ ನಿಂತು ಕಿಟಕಿಯ ಕಡೆಗಿದ್ದ ತನ್ನ ಬೀರುವಿನಲ್ಲಿ ತಲೆ ಹುದುಗಿಸಿದ್ದ.

ನಾನು ಬಂದ ಶಬ್ದಕ್ಕೆ ನನ್ನ ಮಿತ್ರ ತಿರುಗಿ ನೋಡಿದ, 'ಹಲೋ... ಒಂದ್ನಿಮಿಷ ಕೂತ್ಕೊ..' ಎಂದು ಮತ್ತೆ ಬೀರುವಿನ ಕಡೆ ತಿರುಗಿದ. ಅದೇನು ಅಷ್ಟೊಂದು ಆಸಕ್ತಿ. ಆ ಬೀರುವಿನಲ್ಲೇನಿಟ್ಟಿದ್ದಾನೆ? ಎಂಬ ಕೆಟ್ಟ ಕುತೂಹಲ ಉಂಟಾಗಿ ಸೀದಾ ಅವನ ಬೀರುವಿನ ಬಳಿಗೆ ಹೋಗಿ ಅವನ ಭುಜದ ಒಂದು ಪಾರ್ಶ್ವದಿಂದ ಇಣುಕಿ ನೋಡಿದೆ. ಯಾವುದೋ ಕಾರ್ಖಾನೆಗೆ ಸಂಬಂಧಿಸಿದ ಕಡತವನ್ನು ತಡಕುತ್ತಿರಬಹುದೆಂದುಕೊಂಡರೆ ಬೀರುವಿನ ಕಪಾಟಿನ ಮೇಲೆ ಕಾಗದವೊಂದರಲ್ಲಿ ಐದಾರು ಬೆಳ್ಳುಳ್ಳಿಯ ಇಲಕುಗಳನ್ನು ಇಟ್ಟುಕೊಂಡು ಸಣ್ಣಸಣ್ಣದಾಗಿ ಚಾಕುವಿನಿಂದ ಕತ್ತರಿಸುತ್ತಿದ್ದ! 'ಎತ್ತಣ ಮಾಮರ.. ಎತ್ತಣ ಕೋಗಿಲೆ..' ಎಂಬಂತೆ ಕಾರ್ಖಾನೆಯಲ್ಲಿ ಕೆಲಸ ಮಾಡುವವರಿಗೂ ಈ ಬೆಳ್ಳುಳ್ಳಿಯ ಇಲಕುಗಳಿಗೂ ಯಾವ ಪಲಕು? ಎಂಬ ಯೋಚನೆ ನಿಮಗಾಗಿರ ಬಹುದು! ಈ ಬೆಳ್ಳುಳ್ಳಿಗೂ ರಘುಪತಿಗೂ ಅದೆಂತಾ ಸಂಬಂಧವಿದೆ ಎಂಬುದು ನನಗೆ ಗೊತ್ತು ಆದರೆ ನಿಮಗೆ ಗೊತ್ತಿಲ್ಲವಲ್ಲ!

'ಏನೋ.. ಇದು..? ಇದಕ್ಕಿಂತ ಉತ್ತಮ ಕೆಲಸವಿಲ್ಲವೆ?' ನಾನು ಆಕ್ಷೇಪಿಸಿದೆ.

ರಘುಪತಿ ನನ್ನ ಮೌಢ್ಯಕ್ಕೆ ಮರುಗಿ ನಸುನಕ್ಕು ಹೇಳಿದ;

'ಇದಕ್ಕಿಂತಾ ಉತ್ತಮ ಕೆಲಸ ಬೇರಾವುದಿದ್ದೀತು? ಬೆಳ್ಳುಳ್ಳಿ ಹೃದಯಕ್ಕೆಷ್ಟು ಒಳ್ಳೆಯದೆಂದು ನಿನ್ನಂತಹವನಿಗೆಲ್ಲಿ ಗೊತ್ತಿರಬೇಕು [illegible]? ನೋಡು ಪ್ರತಿ ದಿನ ಬೆಳಗ್ಗೆ ಐದು ಬೆಳ್ಳುಳ್ಳಿಯ ಇಲಕುಗಳನ್ನು ತಿಂದರೆ ನಿನ್ನ ಹೃದಯ [illegible]!'

'[illegible] ಆ ಹಾಳು ಬೆಳ್ಳುಳ್ಳಿ... [illegible]' ಎಂದು ನಾನು [illegible] [illegible] [illegible]?

'[illegible] ಹಾರ್ಟು ಕೈಕೊಟ್ಟರೆ ನನ್ನ ಹತ್ತಿರ ಬರಬೇಡ' ಎಂಬ ಎಚ್ಚರಿಕೆಯನ್ನಿತ್ತ ಕಿತಾಪತಿ... ಕ್ಷಮಿಸಿ.. ರಘುಪತಿ.

'ಹಾರ್ಟು ಕೈಕೊಟ್ಟರೆ ಹೃದಯ ತಜ್ಞರ ಬಳಿ ಹೋಗುತ್ತೇನೆ... ನಿನ್ನಂತ ಮೆಕ್ಯಾನಿಕಲ್ ಇಂಜಿನಿಯರ್ ಹತ್ತಿರ ಬಂದರೆ ನೀನೇನು ಮಾಡೀಯ...'

ಎಂದು ಹಂಗಿಸಿ ನನ್ನ ಸೀಟಿಗೆ ತೆರಳಿದೆ. ರಘುಪತಿಯ ಜೀವನಾಸಕ್ತಿ ಬರೀ ಬೆಳ್ಳುಳ್ಳಿಗೆ ಮಾತ್ರ ಮೀಸಲಲ್ಲ. ಅವನು ಎಂಟೂವರೆಗೆ ಬೆಳ್ಳುಳ್ಳಿ ತಿಂದರೆ ಮತ್ತೆ ಹತ್ತೂವರೆಗೆ ಎರಡು ಟೊಮ್ಯಾಟೋಗಳನ್ನು ಹದವಾಗಿ ಕತ್ತರಿಸಿ ಹೋಳುಗಳಿಗೆ ಸಕ್ಕರೆಯನ್ನು ಎರೆದುಕೊಂಡು ತಿನ್ನುತ್ತಾನೆ. ಟೊಮ್ಯಾಟೋಗೆ ಕ್ಯಾನ್ಸರನ್ನು ತಡೆಯುವ



ಗುಣವಿದೆಯಂತೆ! ಹನ್ನೊಂದಕ್ಕೆ ರಘು ಕಪ್ಪು ಬಣ್ಣದ ಚಹವನ್ನು ಕುಡಿಯುತ್ತಾನೆ. ಅದಕ್ಕೆ ಬಿಸಿ ನೀರನ್ನು ಕ್ಯಾಂಟೀನಿನಿಂದ ತರಿಸಿಕೊಂಡು ಮನೆಯಿಂದ ಟೀ ಬ್ಯಾಗುಗಳನ್ನು ತರುತ್ತಾನೆ. ಮಧ್ಯಾಹ್ನ ಕ್ಯಾಂಟೀನಿನಲ್ಲಿ ಊಟ ಮಾಡುತ್ತಾನೆ ಆದರೆ ನೀರು ಕುಡಿಯುವುದಿಲ್ಲ; ಅಶುದ್ಧ ನೀರಿನಿಂದ ಕಾಯಿಲೆ ಬರುವುದಂತೆ! ನಮ್ಮ ಕಾರ್ಖಾನೆಯ ಉಗ್ರಾಣದಲ್ಲಿ ವಸ್ತುಗಳನ್ನು ತೂಕ ಮಾಡುವ ಯಂತ್ರವೊಂದಿದೆ!, 'ಮಧ್ಯಾಹ್ನ ಊಟ ಮುಗಿಸಿ ಅದರಲ್ಲಿ ತನ್ನ ತೂಕ ನೋಡಿಕೊಳ್ಳುತ್ತಾನೆ. ಎತ್ತರ ಮತ್ತು ತೂಕ ಪ್ರಮಾಣಬದ್ಧವಾಗಿರಬೇಕಂತೆ! ಇಂತಹ ನೂರಾರು ಜೀವ ಪ್ರೀತಿಸುವ ಕ್ರಮಗಳನ್ನು ಅವನು ಅಳವಡಿಸಿಕೊಂಡಿರುವನು ಎಂದು ನನ್ನ ಖಚಿತವಾದ ನಂಬಿಕೆ ! ಅವನ ನೂರಾರು ಪ್ರಸಂಗಗಳಲ್ಲಿ ಹತ್ತಾರು ಪ್ರಸಂಗಗಳಷ್ಟೇ ನನ್ನ ಗಮನಕ್ಕೆ ಬಂದಿರುವುದು. ಇಂತಾ ಜೀವವನ್ನು ಪ್ರೀತಿಸುವ ಮನುಷ್ಯನನ್ನು ನಾನು ಇದುವರೆಗೂ ನೋಡಿಲ್ಲ ಬಿಡಿ. ಆದ್ದರಿಂದಲೇ ಜೀವ ಕೈಯಲ್ಲಿ ಹಿಡಿದುಕೊಂಡಿರುವವರಲ್ಲಿ ರಘುವಿಗೆ ಪ್ರಥಮ ಸ್ಥಾನ!

'ಆರತಿ ತಗೊಂಡರೆ ಉಷ್ಣ! ತೀರ್ಥ ತಗೊಂಡರೆ ಶೀತ!' ಎನ್ನುವ ಗಾದೆ ಮಾತು ಇಲ್ಲಿ ನೆನಪಾಗುವುದಲ್ಲವೆ?

ಜೀವ ಕೈಯಲ್ಲಿ ಹಿಡಿಯುವವರ ಗುಂಪಿಗೆ ಸೇರಿದ ತೀರಾ ಹತ್ತಿರದಿಂದ ನೋಡಿದ ವ್ಯಕ್ತಿಗಳಲ್ಲಿ ನನ್ನ ನೆನಪಿಗೆ ಬರುವವಳು ನನ್ನ ಅಕ್ಕ. ಬೆಳೆಯುವ ಪೈರು ಮೊಳಕೆಯಲ್ಲಿ ಎಂಬಂತೆ ಅವಳು ಚಿಕ್ಕವಳಿದ್ದಾಗ ಬಿದ್ದೋ..ಇಲ್ಲಾ ಕೈಯನ್ನು ಕೊಯ್ದುಕೊಂಡಾಗಲೋ ಅತ್ತು ಗೋಳಾಡುತ್ತಿದ್ದುದು ಆ ವಯಸ್ಸಿಗೆ ಸಹಜವಾದುದು! ಆದರೆ ದೊಡ್ಡವಳಾದ ಮೇಲೂ ಹಾಗೇ ಆಡುವುದನ್ನು ಮುಂದುವರಿಸಿದ್ದಳು! ಇದಷ್ಟೇ ಅಲ್ಲ... ಆಕೆಯ ಶರೀರದಲ್ಲಿ ಏನಾದರೂ ಹೆಚ್ಚು ಕಮ್ಮಿಯಾದರೆ ಅದನ್ನು ದಿನದಲ್ಲಿ ಒಂದು ಹತ್ತು ಬಾರಿಯಾದರೂ ಸುತ್ತ ಇರುವವರಿಗೆ ಹೇಳಿ ಅವರ ಸಹಾನುಭೂತಿ ಗಿಟ್ಟಿಸುವುದಲ್ಲದೆ...ಅವರನ್ನೂ ಗೋಳು ಹೊಯ್ದುಕೊಳ್ಳುತ್ತಿದ್ದಳು! ಮುಖದಲ್ಲಿ ಒಂದು ಗುಳ್ಳೆ ಕಂಡರೆ ಸಾಕು...ಏನೋ ಆಗಿಹೋಗಿದೆ, ತನ್ನ ಸೌಂದರ್ಯಕ್ಕೇ ಕುಂದು ಬಂತು ಎಂಬಂತಾಡುತ್ತಿದ್ದಳು. ಅದರ ನಿವಾರಣೆಗೆ ಉಪಯೋಗಿಸಬೇಕಾದ ಆಯಿಂಟು ಮೆಂಟುಗಳು ಮತ್ತು ಕ್ರೀಮುಗಳ ಸಂಶೋಧನೆಗೆ ತೊಡಗುತ್ತಿದ್ದಳು! ಸ್ನಾನ ಮುಗಿದಾಗ ತಲೆಯ ಕೂದಲು ಕೊಂಚ ಒರಟಾಗಿ ಕಾಣಿಸಿದರೆ ಶಾಂಪೂ, ಸೋಪು ಗಳನ್ನೆಲ್ಲಾ ಬೈಯುತ್ತಾ.. ಬೇರೆ ಇನ್ಯಾವ ಸೌಂದರ್ಯ ಸಾಧನಗಳನ್ನು ಉಪಯೋಗಿಸಬೇಕು ಎಂದು ಯೋಚಿಸುತ್ತಿದ್ದಳು! ಒಂದೆರಡು ಕೂದಲು ತಲೆಯಿಂದ ಉದುರಿದರೆ ಸಾಕು ತನ್ನ ತಲೆಯ ಕೂದಲುಗಳೆಲ್ಲಾ ಉದುರಿ ತನ್ನ ತಲೆ ಬೋಳಾಗಿ ಹೋಗುವುದು ಎಂದು ನಮ್ಮಪ್ಪನನ್ನು ಹೆದರಿಸುತ್ತಿದ್ದಳು! ಹತ್ತೊಂಬತ್ತು ವರ್ಷಕ್ಕೆ ಅವಳಿಗೆ ಮದುವೆ ಮಾಡಿ ಅಮೆರಿಕಾಕ್ಕೆ ಸಾಗು ಹಾಕಿ ಅಮ್ಮ-ಅಪ್ಪ ನಿಟ್ಟುಸಿರಿಟ್ಟರು! ಈಗಾಕೆ ದೂರದ ಅಮೆರಿಕಾದಲ್ಲಿ ತನ್ನ ಸಂಸಾರ ಸಾಗರದಲ್ಲಿ ಮುಳುಗಿಹೋಗಿರುವುದರಿಂದ ಅವಳು ಇತ್ತೀಚೆಗೆ ಹೇಗೆ ಬದಲಾಗಿದ್ದಾಳೆ ಎನ್ನುವುದು ತಿಳಿದಿಲ್ಲ. ಅಲ್ಲದೆ ಐದಾರು ವರ್ಷಗಳಿಗೊಮ್ಮೆ ಬಂದಾಗ ಅವಳನ್ನು ಈ ವಿಷಯದಲ್ಲಿ ಗಮನಿಸುವಂತಹ ಪ್ರಸಂಗಗಳು ಬಂದಿಲ್ಲ.

ಜೀವ ಕೈಯಲ್ಲಿ ಹಿಡಿದಿರುವವರ ಸಾಲಿಗೆ ನನ್ನ ಚಡ್ಡಿ ಗೆಳೆಯ ಪರಮೇಶಿಯನ್ನೂ ಸೇರಿಸಲಡ್ಡಿಯಿಲ್ಲ. ಪರಮೇಶಿ ಮತ್ತು ನಾನು ಪಿ.ಯು.ಸಿ.ಯವರೆಗೂ ಒಟ್ಟಿಗೇ ಓದಿದವರು. ಪಿ.ಯು.ಸಿ.ಯ ನಂತರ ನಾನು

> ಮಾನವನೆತ್ತರ ಆಗಸದೆರಿಗೆ
> ಏರುವವರೆಗೂ ಏರೇವು ;
> ಮಾನವ ಹೃದಯ ವಿಶ್ವವಿಶಾಲತೆ
> ಹಾಯುವವರೆಗೂ ಹಾದೇವು. - ವಿ. ಸೀ.

ಇಂಜಿನಿಯರಿಂಗ್ ಓದಿದೆ. ಪರಮೇಶಿ ತಿಣುಕಿ ತಿಣುಕಿ ಬಿ.ಎ. ಓದಿ ತನಗೆ ವಂಶಪಾರಂಪರ್ಯವಾಗಿ ಬಂದಿದ್ದ ಬಟ್ಟೆಯ ವ್ಯಾಪಾರ ಮುಂದುವರಿಸಿದ್ದ. ನಾನು ಇಂಜಿನಿಯರಿಂಗ್ ಮುಗಿಸಿ ಜೈಲು ಸೇರಿದೆ! ಕ್ಷಮಿಸಿ.. ಜೈಲು ಅಂದರೆ ನಿಜವಾದ ಜೈಲಲ್ಲ... ಜೈಲಿನೋಪಾದಿಯಲ್ಲಿರುವ ಕಾರ್ಖಾನೆ! ಇಲ್ಲಿ ಒಮ್ಮೆ ಒಳಗೆ ಬಂದರೆ ಎಂಟು ತಾಸು ಜೈಲೇ! ಕಾರ್ಖಾನೆಯಲ್ಲಿ ಉತ್ಪಾದನೆಯ ಒತ್ತಡ ಹೆಚ್ಚಿದ್ದರೆ ಹತ್ತು ತಾಸು ಒಳಗಿರುವುದೂ ಹೆಚ್ಚೇನಲ್ಲ.

ಓದುವ ದಿನಗಳಲ್ಲೇ ಪರಮೇಶಿ ಬಹಳ ಶಿಸ್ತಿನ ಮನುಷ್ಯ! ವಾರದ ಆರು ದಿನಗಳಲೂ ಶಾಲೆಯಲ್ಲಿ ಓದಿ ದಣಿದ ಕಾರಣ, ಭಾನುವಾರ ಎಣ್ಣೆ ಒತ್ತಿಕೊಂಡು ಸ್ನಾನ ಮಾಡಿ ಮಲಗಿಬಿಡುತ್ತಿದ್ದ. ದೇವರು ಪರಮೇಶಿಗೆ ವಿದ್ಯೆಯೊಂದನ್ನು ಬಿಟ್ಟು ಉಳಿದದ್ದೆಲ್ಲವನ್ನೂ ಧಾರಾಳವಾಗಿ ನೀಡಿದ್ದ. ತಿಂದುಣ್ಣಲು ಕೊರತೆಯೆಂಬುದೇ ಇಲ್ಲ. ಶನಿವಾರ ಸಂಜೆ ಪರಮೇಶಿಯ ಕಡೆಯಿಂದ ನನಗೆ ಮತ್ತು ಇನ್ನೊಬ್ಬ ಗೆಳೆಯನಿಗೆ ಬೆಣ್ಣೆ ಮಸಾಲೆಯ ಪಾರ್ಟಿ. ಒಮ್ಮೊಮ್ಮೆ ಹಾದಿಯಲ್ಲಿ ಚುರುಮುರಿ, ಮೆಣಸಿನಕಾಯಿ ಬೊಂಡಾ, ಮದ್ದೂರುವಡೆ - ಮುಂತಾದುವನ್ನು ತಿಂದು ಹೊಟ್ಟೆ ಭಾರವಾಯಿತು, ಇನ್ನು ಪಚನವಾಗುವುದು ಕಷ್ಟ ಎಂದು ಬೆಣ್ಣೆ ಮತ್ತು ಗುಲ್ಕನ್ನನ್ನು ಶೆಟ್ಟರ ಅಂಗಡಿಯಲ್ಲಿ ತಿಂದು ಢರ್ರನೆ ತೇಗಿ ಮನೆ ಸೇರುತ್ತಿದ್ದೆವು.

ಶಾಲೆಯ ದಿನಗಳಲ್ಲಿ ನನಗೋ ಹಸಿವಿನದೇ ಸಮಸ್ಯೆಯಾಗಿದ್ದರೆ ಪರಮೇಶಿಗೆ ಅಜೀರ್ಣದ ಸಮಸ್ಯೆ! ಎಂಥ ಆಹಾರ ತಿಂದರೂ ಕೇವಲ ಎರಡೇ ಗಂಟೆಗಳಲ್ಲಿ ನನ್ನ ಹೊಟ್ಟೆ ಭಸ್ಮ ಮಾಡುತ್ತಿತ್ತು! ಪರಮೇಶಿ ಹಸಿವಿಲ್ಲ ಎಂದು ಡಾಕ್ಟರರ ಬಳಿ ಹೋಗುತ್ತಿದ್ದ. ಆಗಿದ್ದವರೆಲ್ಲಾ ಬರಿಯ ಎಲ್.ಎಂ.ಪಿ. ಡಾಕ್ಟರುಗಳು! ಬಾಟ್ಲು ಹಿಡಿದು ಹೋದರೇನೇ ಔಷಧಿ! ಇಲ್ಲದಿದ್ದರೆ ಔಷಧಿಯೇ ಇಲ್ಲ! ಈಗ ಬಿಡಿ, ಬಾಟಲಿನಲ್ಲಿ ಬರುವುದು ಬರೀ ಬೀರ್, ಬ್ರಾಂದಿ, ವಿಸ್ಕಿ - ಮುಂತಾದ ನವನಾಗರಿಕ ಪೇಯಗಳು! ಪರಮೇಶಿಯ ಜೀವ ಪ್ರೀತಿ ಎಷ್ಟಿತ್ತೆಂದರೆ ಅವನಿಗೆ ತಲೆಗೆ ಎಣ್ಣೆ ಒತ್ತಲು ಆಳುಗಳಿದ್ದರು! ಕಾಯಿಲೆ ಬಂದರೆ ಡಾಕ್ಟರರ ಬಳಿಗೆ ಆಳೊಬ್ಬ ಸೈಕಲಿನಲ್ಲಿ ಕೂರಿಸಿಕೊಂಡು ಬರುತ್ತಿದ್ದ! ಇಲ್ಲಾ ಟಾಂಗಾದಲ್ಲಿಯೇ ಅವನ ಸವಾರಿ ಡಾಕ್ಟರರ ಶಾಪಿಗೆ ಬರುತ್ತಿತ್ತು! ಈಗಲಂತೂ ಪರಮೇಶಿಯ ಜೀವ ಪ್ರೀತಿ ಅತಿಯಾಗಿ ಹೆಚ್ಚಿದೆ! ಏಕೆಂದರೆ ಎಲ್ಲಾ ಶ್ರೀಮಂತರ ಕಾಯಿಲೆಗಳು ಅವನಲ್ಲಿ ಸೇರಿ ಖಾಯಂ ಆಗಿ ಝಂಡಾ ಹೂಡಿವೆ! ಅವುಗಳಿಗೆ ತಕ್ಕ ಔಷಧಿಗಳು, ಇಂಜೆಕ್ಷನ್ನುಗಳನ್ನು ತೆಗೆದುಕೊಳ್ಳುವ ಪರಮೇಶಿಯ ಪರಿಯನ್ನು ಈ ಲೇಖನದ ವ್ಯಾಪ್ತಿಯಲ್ಲಿ ಹೇಳುವುದು ಸಾಧ್ಯವೇ ಇಲ್ಲ!

ಮನೆಗೆ ಬಂದ ಅತಿಥಿಗಳು ಮಾಡಿದ ತಿನಿಸನ್ನು ತಿನ್ನಲು ಒಲ್ಲೆನೆನ್ನುವಾಗ ಮನೆಯೊಡೆಯ ಅಥವಾ ಮನೆಯೊಡತಿ ತಿನ್ನುವಂತೆ ಬಲವಂತ ಮಾಡುವುದು ಸಾಮಾನ್ಯವಲ್ಲವೆ! ತಿಂದ ಕೆಲ ಸಮಯದ ನಂತರ 'ನನಗದು ಒಗ್ಗೊಲ್ಲ ಅಂದರೂ ಬಲವಂತ ಮಾಡಿದ್ರಿ.. ಈಗ ನೋಡಿ ಹೊಟ್ಟೆ ನನ್ನ ಮೇಲೆ ಸೇಡು ತೀರಿಸ್ಕೋತಾ ಇದೆ' ಎಂದು ಮುಜುಗರವನ್ನುಂಟು ಮಾಡುವ ಮಹನೀಯರು ಮತ್ತು ಮಹಿಳೆಯರು ಸಹ ಜೀವ ಕೈಯಲ್ಲಿ ಹಿಡಿದಿರುವವರ ಸಾಲಿನಲ್ಲಿ ನಿಲ್ಲುತ್ತಾರೆ ಎಂದು ನನ್ನ ಅಭಿಪ್ರಾಯ... ತಾವೇನೆನ್ನುತ್ತೀರಿ?

ದೇಹಕ್ಕೆ ಸ್ವಲ್ಪ ತೊಂದರೆಯಾಗುವ ಪ್ರಸಂಗ ಬಂದಾಗ ಇಂತಾ ವ್ಯಕ್ತಿಗಳು ಏನು ಮಾಡುತ್ತಾರೆ ಎಂಬುದು ತಮ್ಮ ಗಮನಕ್ಕೂ ಬಂದಿರಬಹುದು. ಉದಾಹರಣೆಗೆ ಮೂವರು ಗೆಳೆಯರು ಬಸ್ಸು ಹತ್ತುತ್ತೀರಿ ಎನ್ನಿ, ಕಿಟಕಿ ಸೀಟನ್ನು ಆತುರದಲ್ಲಿ ಆಕ್ರಮಿಸುವವರು ಇಂತಾ ವ್ಯಕ್ತಿಗಳೇ! ಹಾಗೆ ಕಿಟಕಿಯ ಬದಿಯ ಸೀಟು ಸಿಕ್ಕದಿದ್ದರೆ, ಮಧ್ಯದಲ್ಲಿ ಕೂರಲೊಪ್ಪದೆ ಇನ್ನೊಂದು ಕಿಟಕಿ ಬದಿಯ ಸೀಟಿಗೆ ಹೋಗುವವರು ಖಂಡಿತವಾಗಿ ಜೀವ ಕೈಯಲ್ಲಿ ಹಿಡಿದಿರುವವರೇ!

ಇಂತವರು, ಇನ್ನೂ ಒಂದು ಹಂತ ಮೇಲೇರುವ ಸಂದರ್ಭಗಳೂ ಇವೆ! ಅವು ಯಾವುವು ಊಹಿಸಬಲ್ಲಿರಾ...? ಜೀವ ಹೋಗುವ ಪ್ರಸಂಗಗಳು! ಯಾವುದಾದರೂ ಅಪಾಯ ಮುಂದೆ ಬರಲಿದೆ ಎಂದರೆ ಇವರೆಷ್ಟು ಹುಷಾರಾಗುವರು ಎಂಬುದನ್ನು ನೋಡಿಯೇ ತಿಳಿಯಬೇಕು!

ಇಂತವರಿಗೆ ಖಾಯಿಲೆ-ಕಸಾಲೆ ಬಂದರೆ ಹೇಗಾಡುವರು ಗೊತ್ತೆ? ಸಣ್ಣ ಜ್ವರ ಬಂದರೆ ಸಾಕು, ಇನ್ನೇನು ಎಲ್ಲಾ ಮುಗಿದೇಹೋಯಿತು ಎಂಬಂತೆ ಆಡುತ್ತಾ ಎದುರು ಕೂತವರ ಧೈರ್ಯವನ್ನೂ ಕೊಂದುಬಿಡುತ್ತಾರೆ! ಅವರುಗಳು ನೋವಿನಿಂದ ನರಳುವುದೇನು?ಹತಾಶರಾಗಿ ನುಡಿಯುವ ನುಡಿಗಳೇನು? ಇವೆಲ್ಲಾ ಅನುಭವಿಸಿಯೇ ತಿಳಿಯಬೇಕು!

ಮೊನ್ನೆ ಕಾರ್ಖಾನೆಯಿಂದ ಮನೆಗೆ ಮರಳುವಾಗ ಸ್ವಲ್ಪ ಹೊತ್ತಾಗಿತ್ತು. ದಾರಿಯಲ್ಲಿ ಒಂದು ದೊಡ್ಡ ಬಯಲು ಪ್ರದೇಶ ರಸ್ತೆಯ ಬದಿಯಲ್ಲಿ ಸಿಗುತ್ತದೆ. ಅಲ್ಲಿ ರಘುಪತಿಯ ಸ್ಕೂಟರು ನಿಂತಿದ್ದು ನೋಡಿ ಆಶ್ಚರ್ಯವಾಯಿತು. ಬಹುಶಃ ದೇಹದ ಬಾಧೆ ತೀರಿಸಿಕೊಳ್ಳಲು ಸಭ್ಯತೆಯನ್ನು ಮರೆತು ರಸ್ತೆಯ ಬದಿಯಲ್ಲೇ ನಿಂತಿರಬಹುದೆಂದು ಬಯಲಿನತ್ತ ನೋಡಿದೆ. ರಸ್ತೆಯಿಂದ ನೂರಾರು ಅಡಿಗಳ ದೂರದಲ್ಲಿ ರಘುಪತಿ ಬಾಗಿ ಏನನ್ನೋ ಕೀಳುತ್ತಿದ್ದ. ನಾನೂ ಸಹ ಸ್ಕೂಟರನ್ನು ನಿಲ್ಲಿಸಿ ಅವನತ್ತ ನಡೆದೆ. ಮಾಲು ಸಮೇತ ಕಳ್ಳನನ್ನು ಹಿಡಿಯುವ ಪೋಲಿಸರಂತೆ ಅವನ ವಿಲಕ್ಷಣವಾದ ಕೆಲಸ ಪತ್ತೆ ಮಾಡಲು ಸದ್ದಾಗದಂತೆ ಹೋಗಿ ಅವನ ಬೆನ್ನ ಹಿಂದಿಂದ ನೋಡಿದೆ. ಅಲ್ಲೇನಿತ್ತು ಮಣ್ಣು!? ಅಲ್ಲಲ್ಲಿ ಬೆಳೆದಿದ್ದ ತುಂಬೆ ಸಸಿಗಳಿಂದ ತುಂಬೆ ಹೂಗಳನ್ನು ಕೊಯ್ಯುತ್ತಿದ್ದ ಪುಣ್ಯಾತ್ಮ!

'ಇದೇನೋ...ಹೊಸ ಹುಚ್ಚು?' ಹಾಸ್ಯ ಮಾಡಿದೆ.

'ತುಂಬೆ ಹೂಗಳನ್ನು ಜೇನು ತುಪ್ಪದಲ್ಲಿ ನೆನಸಿ ತಿಂದರೆ ಯಾವತ್ತೂ ನೆಗಡಿ ಬರೋದಿಲ್ಲವಂತೆ! ಇದರಲ್ಲಿ ವಿಟಮಿನ್ 'ಸಿ' ಅತ್ಯಧಿಕ ಪ್ರಮಾಣದಲ್ಲಿರುತ್ತೆ' ಎಂಬ ಅಣಿಮುತ್ತುಗಳನ್ನು ಉದುರಿಸಿದ ನನ್ನ ಮಿತ್ರ!

'ಲೋ.. ಅಂದಹಾಗೆ ನಿನಗೆ ಗೋಧಿ ಹುಲ್ಲಿನ ಬಗ್ಗೆ ಗೊತ್ತಿಲ್ಲವೆ?' ಎಂದು ಕೇಳಿದೆ.

'ಏನದು ಗೋಧಿ ಹುಲ್ಲಿನ ವಿಷಯ?' ಮುಗುಮ್ಮಾಗಿ ಕೇಳಿದ.

'ಅದೇ ಗೋಧಿ ಹುಲ್ಲನ್ನು ತಿನ್ನುವವರಿಗೆ ಇಡೀ ಜೀವನದಲ್ಲಿ ಎಂಥಾ ಖಾಯಿಲೆಯೂ ಬರುವುದಿಲ್ಲವಂತೆ'

'ಇದಕ್ಕೆ ಆಧಾರ?'

ಅನುಮಾನದಿಂದ ನನ್ನತ್ತ ನೋಡಿದ! ಏಕೆಂದರೆ ನಾನು ಅವನನ್ನೂ ಅವನ ಪ್ರವೃತ್ತಿಗಳನ್ನೂ ಸಮಯ ಸಿಕ್ಕಾಗಲೆಲ್ಲಾ ಲೇವಡಿ ಮಾಡುವೆ!

'ಇವತ್ತಿನ ದಿನಗಳಲ್ಲಿ ಆರೋಗ್ಯದ ಬಗ್ಗೆ ಎಂತಾ ಪ್ರಜ್ಞೆ ಮೂಡಿದೆಯೆಂದರೆ, ಪ್ರತಿ ತಿಂಗಳೂ ಒಂದೊಂದು ಹೊಸಾ ನಿಯತಕಾಲಿಕೆಗಳು ಬರುತ್ತಿವೆ. ಅವುಗಳಲ್ಲಿ ಯಾವುದೋ ಒಂದು! ನನಗೆ ನೆನಪಿಲ್ಲ'.

'ನನಗೆ ಹುಲ್ಲು ತಿನ್ನಿಸುವ ಪ್ರಯತ್ನ ಅಲ್ಲ ತಾನೆ?'

'ಛೆ... ಛೆ... ನಿನ್ನಂತ ಮಿತ್ರನಿಗೆ ಹೀಗೆಲ್ಲಾ ಮಾಡಿದರೆ ಆ ಭಗವಂತ ಮೆಚ್ಚಿಯಾನೆ?'

'ಭಗವಂತ ಮೆಚ್ಚುವನೋ ಇಲ್ಲವೋ ಗೊತ್ತಿಲ್ಲ! ತಮಾಷೆ ಮಾಡಿದರೆ ನಾನಂತೂ ನಿನ್ನನ್ನು ಸುಮ್ಮನೆ ಬಿಡುವವನಲ್ಲ!' ಎಂದು ಗದರಿಸಿ, ನಾನೂ ತುಂಬೆ ಹೂ ಕೀಳುವಂತೆ ಮಾಡಿದ್ದ ರಘು!

ಇಂತಹ ಮಂದಿಯನ್ನು ನೀವು ನೋಡಿಲ್ಲವೆ? ಖಂಡಿತಾ ನೋಡೇ ಇರುವಿರಿ. ಅಂದಂತೆ ಈಗ ಜೀವ ಕೈಯಲ್ಲಿ ಹಿಡಿದಿರುವವರ ಬಗೆಗೆ ಒಂದು ಸಮೀಕ್ಷೆಯನ್ನು ನಡೆಸಿದ್ದೇನೆ. ಈ ಪಟ್ಟಿಗೆ ನೀವು ಸೇರುತ್ತೀರೋ? ಇಲ್ಲವೋ? ಉತ್ತರಿಸಿದರೆ ನನ್ನ 'ಜೀವ ಕೈಯಲ್ಲಿ ಹಿಡಿದಿರುವವರ' ಸಮೀಕ್ಷೆಗೆ ಸಹಾಯವಾಗುತ್ತದೆ! ತಿಳಿಸುವಿರಿ ತಾನೆ?

ಎಸ್. ಜಿ. ಶಿವಶಂಕರ್
'ಶಿವಲತ', [illegible], ಎಚ್ ಟಿ ಜೋಡಿ ರಸ್ತೆ, ವಿಜಯನಗರ
೨ನೇ ಹಂತ, ಮೈಸೂರು-[illegible]

### ಬಿಡುಗಡೆ



ಕಟ್ಟುಗಳ ಕಳಚಿ
ಬರಬೇಕು ಹೊರಗೆ,
ಕನಸುಗಳ ಹೊತ್ತು
ಜಿಗಿಬೇಕು ನಭಕೆ,
....ಹೊರಗೆ ಹೂವುಂಟು...
ಹಸಿರುಂಟು...
ಪ್ರೀತಿಯ ಹಾಡುಂಟು...
ಬಿಸ್ಸಿರೈ...
ಬೆಳಕಿನೆಡೆಗೆ
ಸತ್ತ ನಿಮ್ಮೆಲ್ಲ ಸ್ವಾರ್ಥಗಳ ತುಳಿದು
ಬಿಡುಗಡೆಗೆ

ರವಿಕುಮಾರ್ ಅಜ್ಜೀಪುರ

# 'ದಿನಾಚರಣೆ'ಗಳ ಅರ್ಥವಂತಿಕೆ ಎಲ್ಲಿ?

ಶ್ರೀನಿವಾಸ್ ವಿ. ಸುತ್ರಾವೆ

'ಸ್ವಾತಂತ್ರ್ಯ ದಿನಾಚರಣೆ', 'ಗಣರಾಜ್ಯೋತ್ಸವ', 'ಗಾಂಧಿ ಜಯಂತಿ', 'ಮಹಾವೀರ ಜಯಂತಿ', ಇತ್ಯಾದಿ ಉತ್ಸವಗಳನ್ನು ನಾವು ಆಚರಿಸುತ್ತಾ ಬಂದಿರುವುದು ಸರಿಯಷ್ಟೆ. ಆದರೆ ಇತ್ತೀಚಿನ ದಿನಗಳಲ್ಲಿ ಈ ಸಮಾರಂಭಗಳಿಗೆ ಏನಾದರೂ ಅರ್ಥ ಇದೆಯೆ ಎಂಬುದನ್ನು ನಾವು ಸರಿಯಾಗಿ ಯೋಚಿಸುತ್ತಿಲ್ಲ.

ಮೊದಲನೆಯದಾಗಿ, ಸ್ವಾತಂತ್ರ್ಯ ದಿನಾಚರಣೆಯ ವಿಷಯವನ್ನೇ ತೆಗೆದುಕೊಳ್ಳೋಣ. ವರ್ಷಾನುಗಟ್ಟಲೆ ಗಾಂಧೀಜಿ ಮುಂತಾದವರ ನೇತೃತ್ವದಲ್ಲಿ ನಾವು ದೇಶದ ಸ್ವಾತಂತ್ರ್ಯಕ್ಕಾಗಿ, ಅಂದರೆ ಬ್ರಿಟಿಷರ ಆಳ್ವಿಕೆಯಿಂದ ಮುಕ್ತಿ ಪಡೆಯಲೆಂದು, ಹೋರಾಡಿ ಕೊನೆಗೂ ಪರಕೀಯರ ದಾಸ್ಯದಿಂದ ಮುಕ್ತರಾದಾಗ ಮೊದಲಬಾರಿಗೆ ನಾವು ಸ್ವಾತಂತ್ರ್ಯ ದಿನಾಚರಣೆಯನ್ನು ಸಂಭ್ರಮದಿಂದ ಆಚರಿಸಿದ್ದು ಸಹಜವೇ ಆಗಿದೆ; ಇಲ್ಲವೆಂದಲ್ಲ. ಆದರೆ ತದನಂತರ ಈಗ ಪ್ರತಿವರ್ಷ ಆಗಸ್ಟ್ 15ಕ್ಕೆ ನಾವು ಆಚರಿಸುತ್ತಿರುವ ಸ್ವಾತಂತ್ರ್ಯ ದಿನಾಚರಣೆಗೆ ಏನಾದರೂ ಅರ್ಥ ಉಳಿದಿದೆಯೇ ಎಂಬುದು ನನ್ನ ಪ್ರಶ್ನೆ. ಏಕೆಂದರೆ, ಗಾಂಧಿ ಯುಗದ ಎಲ್ಲ ಆದರ್ಶಗಳನ್ನು ಗಾಳಿಗೆ ತೂರಿ ಇಡೀ ದೇಶವನ್ನೇ ಭ್ರಷ್ಟಾಚಾರ ಮತ್ತು ಜಾತಿ ರಾಜಕಾರಣದ ಅಸಹ್ಯ ಕೂಪವನ್ನಾಗಿ ಮಾಡಿದ್ದೇವೆ. ದೇಶಕ್ಕಾಗಿ ತಮ್ಮ ಸಿರಿ, ಭೋಗ, ಲಾಲಸೆ, ಪ್ರಾಣ - ಎಲ್ಲವನ್ನೂ ತ್ಯಾಗ ಮಾಡಿದ ಗಾಂಧಿಯುಗದ ಮಹಾನುಭಾವರೆಲ್ಲಿ ಮತ್ತು ಇವತ್ತು ಸಂಪತ್ತಿಗಾಗಿ, ಸುಖಲೋಲುಪತೆಗಾಗಿ, ಸ್ವಾರ್ಥಕ್ಕಾಗಿ, ಅಧಿಕಾರಕ್ಕಾಗಿ ಕಚ್ಚಾಡುವ ನಾಯಕರೆಲ್ಲಿ? ಸ್ವಾತಂತ್ರ್ಯ ಪೂರ್ವದ ನಮ್ಮ ಗೌರವಾರ್ಹ ಜನರಿಗೂ ಇವತ್ತಿನ ನಮ್ಮ ನೀತಿಭ್ರಷ್ಟತೆಗೂ ಎಂತಹ ಅಜಗಜಾಂತರ ವ್ಯತ್ಯಾಸ !

ಹಿಂದೊಮ್ಮೆ ಗಾಂಧಿ ಟೋಪಿಯನ್ನು ಧರಿಸುವುದು, ಖಾದಿ ಬಟ್ಟೆಯನ್ನು ತೊಡುವುದು ಹೆಮ್ಮೆಯ ಹಾಗೂ ಗೌರವದ ಸಂಕೇತವಾಗಿತ್ತು. ಈಗ ಅದೆಲ್ಲ ನಗೆಪಾಟಲಿಗೀಡಾಗಿದೆ.

ಗಾಂಧಿಯವರ ಕರೆಗೆ ಓಗೊಟ್ಟು ಜನಸಾಮಾನ್ಯರಿಂದ ಹಿಡಿದು ಬುದ್ಧಿಜೀವಿಗಳ ವರೆಗೂ ಪ್ರತಿಯೊಬ್ಬರೂ ಗಾಂಧಿಯ ಹಿಂದೆ ಯಾವುದೋ ಮೋಡಿಗೊಳಗಾದ ರೀತಿಯಲ್ಲಿ ಅವರನ್ನು ಹಿಂಬಾಲಿಸಿದ್ದು ಎಂತಹ ದಿವ್ಯ ಇತಿಹಾಸ ! ಎಲ್ಲಿ ಹೋದವು ಆ ದಿನಗಳು ? ಕೇವಲ ಐವತ್ತು-ಐವತ್ತೊಂದು ವರ್ಷಗಳು ಕಳೆಯುವಷ್ಟರಲ್ಲಿ ಅಂದಿನ ಆ ದಿನಗಳು ಮತ್ತೆಂದೂ ಮರಳಿ ಬರದಂತೆ ಓಡಿ ಹೋದವೆ ?

ಇವತ್ತು ಶಾಲೆ-ಕಾಲೇಜುಗಳಲ್ಲಿ, ಮೈದಾನ- ಸ್ಟೇಡಿಯಂಗಳಲ್ಲಿ ನಡೆಯುವ ಧ್ವಜಾರೋಹಣ, ಧ್ವಜ ವಂದನೆ, ಗಾಂಧಿಯ ಬಗೆಗಿನ ಮಾತುಗಳು- ಇವೆಲ್ಲವೂ ಯಾಂತ್ರಿಕವಾಗಿ ನಡೆಯುವ ಅರ್ಥಹೀನ ಕ್ರಿಯೆಯಾಗಿ ತೋರುತ್ತವೆ.

ಇನ್ನು ಗಾಂಧಿ ಜಯಂತಿಗೆ ಬರೋಣ. ಗಾಂಧಿ ಜಯಂತಿಯ ದಿನ ನಮ್ಮಲ್ಲಿ ಮದ್ಯ-ಮಾಂಸದ ಮಾರಾಟ ನಿಷಿದ್ಧ. ಮರುದಿನ ಯಥಾಪ್ರಕಾರ ಮದ್ಯ-ಮಾಂಸದ ಸಂಭ್ರಮ ! (ಗಾಂಧಿ ಜಯಂತಿಯ ದಿನದಂದೂ ಕಳ್ಳತನದಲ್ಲಿ ಯಾರೂ ಮದ್ಯ ಕುಡಿಯುವುದಿಲ್ಲವೆ, ಮಾಂಸ ತಿನ್ನುವುದಿಲ್ಲವೆ ?) ಎಲ್ಲ ಎಷ್ಟು ಹಾಸ್ಯಾಸ್ಪದ !

ಮಹಾವೀರ ಜಯಂತಿಯಂದೂ ಪ್ರಾಣಿ ವಧೆಯಿಲ್ಲ; ಮಾಂಸದ ಮಾರಾಟವಿಲ್ಲ. ಆದರೆ ಅಹಿಂಸೆಯನ್ನು ನಾವು ಕೇವಲ ಒಂದು ದಿನ ಆಚರಿಸಿದರೆ ಸಾಕೆ ?

ನಿರ್ಬಂಧದಿಂದ, ಬಲವಂತದಿಂದ ನಾವು ಏನನ್ನೂ ಸಾಧಿಸಲಾರೆವು. ಯಾವುದೇ ಆಚರಣೆಯಾಗಲಿ, ಒಳ್ಳೆಯ ಕೆಲಸವೇ ಆಗಲಿ ಸ್ವಪ್ರೇರಣೆಯಿಂದ ಆಗಬೇಕಲ್ಲವೆ ?

ಸಕಲ ಜೀವಿಗಳಿಗೂ ದಯೆ ತೋರಿ ಎಂದು ಹೇಳಿದ ಗಾಂಧಿ, ಬುದ್ಧ, ಮಹಾವೀರ, ಬಸವಣ್ಣ - ಇಂತಹ ಮಹಾತ್ಮರನ್ನು ಪಡೆದ ಭಾರತದಲ್ಲಿ ಈಗ ಪ್ರತಿನಿತ್ಯ ಹಿಂಸೆ, ಮೋಸ, ಭ್ರಷ್ಟಾಚಾರ, ಅತ್ಯಾಚಾರ, ಕೊಲೆ, ಸುಲಿಗೆ ! ಹಾಗಾಗಿ, ಸಾಕು ಇನ್ನು ಈ ಕಣ್ಣಾಮುಚ್ಚಾಲೆಯಾಟ, ಈ ಬೂಟಾಟಿಕೆ ಮತ್ತು ಈ ಬಲವಂತದ ಹಾಗೂ ಕಾಟಾಚಾರದ ಆಚರಣೆಗಳು.

ನಾಡಿನ ಇತಿಹಾಸದ ಸವಿನೆನಪುಗಳಿಗಾಗಿ, ಸಂಸ್ಕೃತಿಯ ಪರಂಪರೆಯನ್ನು ಮುಂದುವರೆಸಿಕೊಂಡು ಹೋಗಲಿಕ್ಕಾಗಿ ಆಚರಣೆಗಳು, ಉತ್ಸವಗಳು, ಜಯಂತಿಗಳು ನಡೆಯಬಾರದೆಂದಲ್ಲ. ಆದರೆ ನಾವು ಇವುಗಳನ್ನು ಶ್ರದ್ಧೆಯಿಂದ, ಪ್ರೀತಿಯಿಂದ, ಉತ್ಸಾಹದಿಂದ ಆಚರಿಸಬೇಕು. ಹಾಗಾಗುತ್ತಿಲ್ಲ ಎಂಬುದಕ್ಕಾಗಿಯೇ ಇದೀಗ ಆತ್ಮವಿಮರ್ಶೆಗೆ ಸಕಾಲ. ಬದಲಾವಣೆಗೆ ಹರಿಕಾರರಾಗಬೇಕಾದವರು ಆತ್ಮಶೋಧನೆ ಮಾಡಿಕೊಂಡ ಸಾರ್ವಜನಿಕರೇ ಅಲ್ಲದೆ ಬೇರಾರೂ ಅಲ್ಲ.

ಶ್ರೀನಿವಾಸ್ ವಿ. ಸುತ್ರಾವೆ
೧೬೪೬/೧೪, ಮಹಡಿ,ವಿದ್ಯಾನಗರ, ದಾವಣಗೆರೆ - ೫೭೭ ೦೦೫

## *ಗಾಂಧಿ ಕೊಲೆ ಮತ್ತು ಆರೆಸ್ಸೆಸ್*

*"ಗಾಂಧೀಜಿ ಕೊಲೆಗೆ ಸಂಬಂಧಿಸಿದ ವಿಷಯ ನ್ಯಾಯಾಲಯದ ಮುಂದೆ ಇರುವುದರಿಂದ, ಅದರಲ್ಲಿ ಆರೆಸ್ಸೆಸ್ ಮತ್ತು ಹಿಂದು ಮಹಾಸಭಾ, ಈ ಎರಡೂ ಸಂಸ್ಥೆಗಳ ಕೈವಾಡದ ಬಗ್ಗೆ ನಾನು ಏನೂ ಹೇಳಬಯಸುವುದಿಲ್ಲ. ಆದರೆ ಈ ಎರಡು ಸಂಸ್ಥೆಗಳ, ಮುಖ್ಯವಾಗಿ ಆರೆಸ್ಸೆಸ್‌ನ, ಚಟುವಟಿಕೆಗಳ ಫಲವಾಗಿ ಈ ಘೋರವಾದ ದುರಂತ ಸಾಧ್ಯವಾಗುವಂಥ ವಾತಾವರಣವು ದೇಶದಲ್ಲಿ ಉಂಟಾಯಿತು ಎಂಬುದು ನಮಗೆ ಬಂದಿರುವ ವರದಿಗಳಿಂದ ಖಚಿತಗೊಂಡಿದೆ. ಹಿಂದು ಮಹಾಸಭಾದ ಉಗ್ರಗಾಮಿ ವಿಭಾಗ ಒಳಸಂಚಿನಲ್ಲಿ ತೊಡಗಿತ್ತೆಂಬುದರಲ್ಲಿ ನನಗೆ ಯಾವ ಅನುಮಾನವೂ ಇಲ್ಲ. ಆರೆಸ್ಸೆಸ್‌ನ ಚಟುವಟಿಕೆಗಳು ಸರಕಾರ ಮತ್ತು ರಾಜ್ಯದ ಅಸ್ತಿತ್ವಕ್ಕೆ ನಿಜವಾಗಿ ಅಪಾಯಕಾರಿ."*

***- ವಲ್ಲಭಭಾಯಿ ಪಟೇಲ್** 18-7-48*

*(ಡಾ|| ಶ್ಯಾಮ ಪ್ರಸಾದ್ ಮುಖರ್ಜಿಯವರಿಗೆ ಬರೆದಿದ್ದ ಪತ್ರದಿಂದ. ಸರ್ದಾರ್ ಪಟೇಲರ ಪತ್ರವ್ಯವಹಾರ ಸಂ. VI, ಪುಟ 323 ನವಜೀವನ-1973).*

1948ರ ಸೆಪ್ಟೆಂಬರ್ 11ರಂದು ಸರ್ದಾರ್ ಪಟೇಲ್ ಆರೆಸ್ಸೆಸ್‌ನ ಸರಸಂಗಚಾಲಕರಿಗೆ ಬರೆದಿದ್ದ ಪತ್ರದಿಂದ :

"ಸಂಘದ ನಾಯಕರ ಭಾಷಣಗಳು ವಿಷಪೂರಿತ. ಈ ಸಂಚಿನ ಪರಿಣಾಮದಿಂದಲೇ ಮಹಾತ್ಮಾ ಗಾಂಧಿಯ ಕೊಲೆಯಾದದ್ದು. ಸಂಘದ ಅನುಯಾಯಿಗಳು ಸಿಹಿ ಹಂಚಿ ಗಾಂಧಿ ಕೊಲೆ ಕೊಂಡಾಡಿದ್ದಾರೆ."

("ಆರೆಸ್ಸೆಸ್ ಕಾಲ್, ಆಜ್, ಉದ್ಯಾ" 1983ರ ಪ್ರಕಟಣೆ; ಆರೆಸ್ಸೆಸ್ ಪುಟ : 71)

## ಗಾಂಧಿ ಉವಾಚ

* ನನ್ನದೊಂದು ಕಿವಿಮಾತು. ನಿಮ್ಮ ಮನಸ್ಸು ಗೊಂದಲದಲ್ಲಿ ಸಿಲುಕಿದಾಗಲೆಲ್ಲಾ ಅಥವಾ ಆತ್ಮರತಿ ನಿಮ್ಮನ್ನು ಅತಿಯಾಗಿ ಕಾಡಿದಾಗಲೆಲ್ಲಾ ಈ ಪ್ರಶ್ನೆಗಳನ್ನು ಹಾಕಿಕೊಳ್ಳಿ.

  "ನೀವು ಆಲೋಚಿಸುತ್ತಿರುವ ಕ್ರಮವನ್ನು ಕೈಗೊಳ್ಳುವ ಮೊದಲು ನಿಮ್ಮ ಕಣ್ಣಿಗೆ ಬಿದ್ದಿರಬಹುದಾದ ಕಡುಬಡವ ಅಥವಾ ಅತಿ ಬಲಹೀನ ಮನುಷ್ಯನ ಬವಣೆಯನ್ನು ನೆನಪಿಸಿಕೊಂಡು ಆ ರೀತಿಯ ಕ್ರಮ ಅವನಿಗೆ ಯಾವ ವಿಧದಲ್ಲಿಯಾದರೂ ಪ್ರಯೋಜನವಾಗುವುದೇ ಎಂದು ಪ್ರಶ್ನಿಸಿಕೊಳ್ಳಿ. ಅದರಿಂದ ಅವನಿಗೆ ಏನಾದರೂ ಸಹಾಯವಾಗುವುದೇ ? ಅದು ಅವನಿಗೆ ಲಾಭದಾಯಕವಾಗುತ್ತದೆಯೇ ? ಅದರಿಂದಾಗಿ ತನ್ನದೇ ಬದುಕು ಮತ್ತು ಭವಿಷ್ಯತ್ತಿನ ಮೇಲೆ ಅವನು ಹತೋಟಿ ಪಡೆಯಲು ಸಾಧ್ಯವೇ ? ಎಂದರೆ, ಒಟ್ಟಾರೆ ದೈಹಿಕ ಮತ್ತು ಆಧ್ಯಾತ್ಮಿಕವಾಗಿ ಬಳಲುತ್ತಿರುವ ಮಿಲಿಯಾಂತರ ಜನರ ವಿಮೋಚನೆಗೆ ಆ ರೀತಿಯ ಕ್ರಮ ನಾಂದಿಯಾಗುವುದೇ ?"

  ಆಗ ನಿಮ್ಮ ಸಂದೇಹಗಳು ಹಾಗೂ ಆತ್ಮರತಿ ಕರಗಿಹೋಗುವುದನ್ನು ಕಾಣುತ್ತೀರಿ.

+ ಭಾರತವನ್ನು ರೂಪಿಸುವುದರಲ್ಲಿ ನನ್ನ ಇಡೀ ಜೀವಿತವನ್ನು ಸವೆಸಿದ್ದೇನೆ. ಅದರಲ್ಲಿ ಪ್ರತಿಯೊಬ್ಬ ಮನುಷ್ಯನೂ, ಅವನು ಯಾವ ಮತಧರ್ಮಕ್ಕೆ ಸೇರಿದವನಾಗಿರಲಿ ಸಮಾನ ಸ್ಥಾನ ಹೊಂದಿರುತ್ತಾನೆ. ರಾಜ್ಯ ಪೂರ್ಣವಾಗಿ ಧರ್ಮನಿರಪೇಕ್ಷವಾಗಿರುತ್ತದೆ.

ಸೂಫಿ ಸಂತರ ಕತೆಗಳು

# ಚಹಾದ ಕತೆ

ಕನ್ನಡಕ್ಕೆ : ಬಿ. ಗಂಗಾಧರಮೂರ್ತಿ

ಬಹಳ ಹಿಂದಿನ ಮಾತು. ಚೀನಾ ದೇಶವನ್ನು ಬಿಟ್ಟರೆ ಆಗ ಬೇರಾವ ದೇಶಗಳಲ್ಲೂ ಚಹಾದ ಪರಿಚಯ ಇರಲಿಲ್ಲ. ಹಲವಾರು ದೇಶಗಳಲ್ಲಿ ಪಂಡಿತರು ಪಾಮರರಾದಿಯಾಗಿ ಎಲ್ಲರಲ್ಲೂ ಚಹಾ ಎಂಬ ಎಂಥದ್ದೋ ಒಂದು ಇದೆ ಎಂಬ ವದಂತಿ ಹಬ್ಬಿತ್ತು. ಅದು ಹೇಗಿರಬಹುದು ಎಂಬುದರ ಬಗ್ಗೆ ಪ್ರತಿಯೊಬ್ಬರೂ ತಮ್ಮ ಕಲ್ಪನೆಗೆ ಅಥವಾ ತಮ್ಮ ಆಕಾಂಕ್ಷೆಗೆ ಹೊಂದಿಕೊಳ್ಳುವಂತೆ ಚಹಾ ಎಂದರೆ ಹೀಗಿರುತ್ತದೆ ಎಂದು ಊಹಿಸಿಕೊಳ್ಳುತ್ತಿದ್ದರು.

ಹೀಗಿರುವಾಗ ಇಂಜಾ (''ಇಲ್ಲಿ'') ಎಂಬ ದೇಶದ ದೊರೆಯು ಚೀನಾ ದೇಶಕ್ಕೆ ಗಣ್ಯರ ನಿಯೋಗವೊಂದರ ರಾಯಭಾರವನ್ನು ಕಳುಹಿಸಿದ. ಚೀನಾ ದೇಶದ ಮಹಾರಾಜನು ಇವರೆಲ್ಲರಿಗೂ ಗೌರವ ಸೂಚಕವಾಗಿ ಚಹಾ ಕೂಟ ಏರ್ಪಡಿಸಿದ. ಆ ದೇಶದಲ್ಲಿ ರೈತರಾದಿಯಾಗಿ ತೀರ ಸಾಮಾನ್ಯರು ಕೂಡ ಚಹಾ ಕುಡಿಯುತ್ತಿದ್ದರು. ಇದನ್ನು ಗಮನಿಸಿದ ಇಂಜಾ ದೇಶದ ರಾಯಭಾರಿಗಳು ಇಂತಹ ಸಾಮಾನ್ಯರು ಕುಡಿಯುವ ಪಾನೀಯವಾದ ಚಹಾ ತಮ್ಮ ದೊರೆಗಳ ಘನತೆಗೆ ತಕ್ಕ ಪಾನೀಯವಲ್ಲ ಎಂದು ತೀರ್ಮಾನಿಸಿದರು. ಅಷ್ಟೇ ಅಲ್ಲ ಚೀನಾ ದೇಶದ ಮಹಾರಾಜನು ಯಾವುದೋ ಸಾಮಾನ್ಯವಾದ ಪಾನೀಯವನ್ನು ಚಹಾದಂತಹ ದೇವಲೋಕದ ಪಾನೀಯವೆಂದು ತಮಗೆ ನೀಡಿ ವಂಚಿಸಿರಬಹುದೇ ಎಂಬ ಸಂದೇಹ ಕೂಡ ಅವರಿಗುಂಟಾಯಿತು.

ಅಂಜಾ (''ಅಲ್ಲಿ'') ಎಂಬ ಮತ್ತೊಂದು ದೇಶದಲ್ಲಿ ಪ್ರಖ್ಯಾತವೆನಿಸಿದ ಒಬ್ಬ ತತ್ವಜ್ಞಾನಿ ಇದ್ದ. ಅವನು ಚಹಾದ ಬಗ್ಗೆ ದೊರಕಬಹುದಾದ ಎಲ್ಲ ಮಾಹಿತಿಗಳನ್ನೂ ತನ್ನ ಶಕ್ತ್ಯಾನುಸಾರ ಸಂಗ್ರಹಿಸಿದ್ದ. ಅಂತಹದೊಂದು ವಸ್ತು ಇರುವುದು ಸುಳ್ಳಲ್ಲ. ಆದರೆ ಅದು ಬಹಳ ಅಪರೂಪದ ವಸ್ತು. ಅದನ್ನು ಕೆಲವರು ಗಿಡಮೂಲಿಕೆ ಎಂದು ಕರೆಯುತ್ತಾರೆ. ಇನ್ನು ಕೆಲವರು ಅದನ್ನು ನೀರು ಎಂದು ಕರೆಯುತ್ತಾರೆ. ಕೆಲವರು ಅದರ ಬಣ್ಣ ಹಸಿರು ಎಂದರೆ ಮತ್ತೆ ಕೆಲವರು ಕಪ್ಪು ಎನ್ನುತ್ತಾರೆ. ಕೆಲವರು ಅದನ್ನು ಕಹಿ ಎಂದರೆ ಇನ್ನು ಕೆಲವರು ಸಿಹಿ ಎನ್ನುತ್ತಾರೆ. ಹಾಗಾದರೆ ಇದರಲ್ಲಿ ಯಾವುದು ಸತ್ಯ? ಯಾವುದು ಮಿಥ್ಯ? ಒಟ್ಟನಲ್ಲಿ, ಈ ಎಲ್ಲರ ತಿಳಿವಳಿಕೆಗೆ ಎಟುಕದ ಬೇರೊಂದು




ಗುಣಮಟ್ಟ ಚಹಾಕ್ಕಿದೆ ಎಂಬ ತೀರ್ಮಾನಕ್ಕೆ ಅವನು ಬಂದ.

ಕೋಶಿಷ್ ಹಾಗೂ ಬೆಬಿನೆಮ್ ದೇಶಗಳಲ್ಲಿ ಜನ ಕಣ್ಣಿಗೆ ಕಾಣುವ ಎಲ್ಲ ಗಿಡಮೂಲಿಕೆಗಳನ್ನೂ ಪರೀಕ್ಷೆ ಮಾಡತೊಡಗಿದರು. ಸಾವಿರಾರು ವರ್ಷಗಳ ಕಾಲ ಈ ಸಸ್ಯ ಪರೀಕ್ಷೆಯು ಜಾರಿಯಲ್ಲಿತ್ತು. ಯಾವ ಜಾತಿಯ ಗಿಡಮೂಲಿಕೆಯನ್ನೂ ಬಿಡದೆ 'ಇದು ಚಹ ಇರಬಹುದೇ, ಇದು ಚಹ ಇರಬಹುದೇ' ಎಂದು ಪರೀಕ್ಷಾರ್ಥವಾಗಿ ಹಲವರಿಗೆ ತಿನ್ನಿಸಿದರು. ತಿಂದ ಹಲವರು ಗೊಟಕ್ ಎಂದರು. ಆಶಾದಾಯಕ ಫಲಿತಾಂಶವಂತೂ ಯಾರಿಗೂ ದೊರಕಲಿಲ್ಲ. ಏಕೆಂದರೆ ಆ ದೇಶಗಳ ಭೂಮಿಗೆ ಯಾರೂ ಚಹಾ ಗಿಡವನ್ನು ಪರಿಚಯಿಸಿಯೇ ಇರಲಿಲ್ಲ. ಪರೀಕ್ಷೆಗೆ ಒಡ್ಡಿದ ಯಾವ ಗಿಡಮೂಲಿಕೆಯೂ ಚಹಾ ಗಿಡವಾಗಿರಲು ಸಾಧ್ಯವೇ ಇರಲಿಲ್ಲ. ತಮ್ಮ ಪ್ರಯತ್ನವನ್ನು ಅವರು ಅಷ್ಟಕ್ಕೇ ಬಿಡಲಿಲ್ಲ. ತಮಗೆ ಗೊತ್ತಿರುವ ದ್ರವರೂಪದ ಸರ್ವಸ್ವವನ್ನೂ ಕುಡಿಯಲು ಪ್ರಾರಂಭಿಸಿದರು. ಫಲಿತಾಂಶ ಸೊನ್ನೆಯೇ.

ಮಜಹಬ್ (ಮತಾಂಧತೆ) ಎಂಬ ಮತ್ತೊಂದು ಪ್ರಾಂತ್ಯದ ಜನ ಧಾರ್ಮಿಕ ಸಮಾರಂಭಗಳನ್ನು ಆಚರಿಸುವಾಗ ಪುಟ್ಟದಾದ ಚೀಲದಲ್ಲಿ ಚಹಾವನ್ನು ತುಂಬಿ ಮೆರವಣಿಗೆಯಲ್ಲಿ ಕೊಂಡೊಯ್ಯುತ್ತಿದ್ದರು. ಆದರೂ ಚಹಾ ಯಾವ ರುಚಿಯಂತಿರುತ್ತದೆ ಎಂಬುದರ ಬಗ್ಗೆ ಯಾರೊಬ್ಬರೂ ತಲೆಕೆಡಿಸಿಕೊಂಡವರಲ್ಲ. ಅವರಿಗೆ ಚಹಾದ ರುಚಿಯನ್ನು ತಿಳಿಯುವ ಬಗೆ ಏನೆಂಬುದೇ ಯಾರಿಗೂ ತಿಳಿದಿರಲಿಲ್ಲ. ಚಹಾಕ್ಕೆ ಮಾಂತ್ರಿಕವಾದ ಯಾವುದೋ ವಿಶೇಷ ಗುಣವಿದೆ ಎಂಬ ನಂಬಿಕೆ ಮಾತ್ರ ಅವರಲ್ಲಿ ಆಳವಾಗಿ ಬೇರೂರಿತ್ತು. ''ಅಯ್ಯೋ ಹುಚ್ಚಪ್ಪಗಳೇ, ಅದಕ್ಕೊಂದಿಷ್ಟು ಕುದಿಯುವ ನೀರು ಬೆರೆಸಿ ನೋಡಿ'' ಎಂದು ಒಬ್ಬ ಮುದುಕ ಒಮ್ಮೆ ಸಲಹೆ ನೀಡಿದ. ಅವರ ನಂಬಿಕೆ ಪ್ರಕಾರ ಮುದುಕನ ಸಲಹೆಯಂತೆ ಮಾಡುವುದೆಂದರೆ ಪವಿತ್ರ ಚಹಾವನ್ನು ನಾಶಮಾಡಿದಂತೆಯೇ ಎಂಬುದಾಗಿತ್ತು. ಮುದುಕನ ಮಾತುಗಳು ಆ ಮತಾಂಧರಿಗೆ ಧರ್ಮಭ್ರಷ್ಟನ ಮಾತುಗಳಂತೆ ತೋರಿದವು. ಅವನನ್ನು ನೇಣಿಗೇರಿಸಿ, ಕೆಳಗಿಳಿಸಿ, ಮರಕ್ಕೆ ಒರಗಿಸಿ ಮೊಳೆ ಜಡಿದು ಕೊಂದುಬಿಟ್ಟರು.

ಆದರೆ ಸಾಯುವ ಮುಂಚೆ ಆ ಮುದುಕನು ತಾನು ಕಂಡುಕೊಂಡಿದ್ದ ಸತ್ಯವನ್ನು ಕೆಲವೊಬ್ಬರಿಗೆ ತಿಳಿಸಿದ್ದ. ಅವರು ಹೇಗೋ ಒಂದಿಷ್ಟು ಚಹಾ ಸಂಪಾದಿಸಿ ಅದಕ್ಕೆ ಕುದಿಯುವ ನೀರು ಬೆರೆಸಿ ಗೌಪ್ಯವಾಗಿ ಸೇವಿಸಿ ಆಸ್ವಾದಿಸುತ್ತಿದ್ದರು. ಯಾರಾದರೂ ''ಇದೇನು ಮಾಡುತ್ತಿದ್ದೀರಿ ?'' ಎಂದು ಕೇಳಿದರೆ ಅವರು, ''ಯಾವುದೋ ಕಾಯಿಲೆಗೆ ಮಾಡಿದ ಔಷಧಿ ಇದು'' ಎಂದುಬಿಡುತ್ತಿದ್ದರು.

ಜಗತ್ತಿನ ಎಲ್ಲ ದೇಶಗಳಲ್ಲೂ ಇದು ಹೀಗೇ ನಡೆದು ಬಂದಿತು. ಚಹಾ ಬೆಳೆಯನ್ನು ಕೆಲವರು ಕಣ್ಣಾರೆ ಕಂಡರೂ ಅದನ್ನು ಹಾಗೆಂದು ಗುರುತಿಸದಾದರು. ಬೆಳೆಗಾರರಾದವರು ತಾವು ಕುಡಿಯದೆ ಬೇರೆಯವರಿಗೆ ಕೊಟ್ಟುಬಿಡುತ್ತಿದ್ದರು. ಅದು ತೀರಾ ಸಾಮಾನ್ಯರು ಸೇವಿಸುವ ಪಾನೀಯವೆಂಬ ತಿಳುವಳಿಕೆ ಅವರದ್ದಾಗಿತ್ತು. ಚಹಾ ಹೀಗೆ [illegible]

([illegible])

ಆದರೆ ಅದರ ಬಳಕೆ ತಿಳಿಯದ ಅವರು ಅದನ್ನು ಆರಾಧಿಸತೊಡಗಿದರು. ಚೀನಾ ದೇಶವನ್ನು ಬಿಟ್ಟರೆ ಕೆಲವೇ ದೇಶಗಳಲ್ಲಿನ ಕೆಲವೇ ಜನರು ಮಾತ್ರ ಕದ್ದು ಮುಚ್ಚಿ ಚಹಾ ಆಸ್ವಾದಿಸುವ ಪರಿಸ್ಥಿತಿ ಇತ್ತು.

ಪ್ರಾಜ್ಞನಾದ ವ್ಯಕ್ತಿಯೊಬ್ಬನು ಜನರ ನಡುವೆ ಕಾಣಿಸಿಕೊಂಡ. ''ರುಚಿ ನೋಡುವವನಿಗೆ ಮಾತ್ರ ರುಚಿ ಕಾಣುತ್ತದೆ. ಅಪೇಕ್ಷೆಯೇ ಇಲ್ಲದವನಿಗೆ ಆ ಅನುಭವ ದೊರಕದು'' ಮುಂತಾಗಿ ಚಹಾ ಮಾರಾಟಗಾರರಿಗೆ, ಚಹಾ ಕುಡಿಯುವವರಿಗೆ ಅಷ್ಟೇಕೆ ಸಮಸ್ತರಿಗೂ ಬೋಧಿಸತೊಡಗಿದ. ''ಚಹಾ ಕುರಿತ ಮಾತು ನಿಲ್ಲಿಸಿ. ದೇವಲೋಕದ ಈ ಪಾನೀಯದ ಬಗ್ಗೆ ಬರೀ ಮಾತಾಡುತ್ತಾ ಕಾಲಹರಣ ಮಾಡಬೇಡಿ. ಔತಣ ಕೂಟಗಳಲ್ಲಿ ಚಹಾ ಪಾನ ನೀಡಿರಿ. ಇಷ್ಟವಾದವರು ಮತ್ತಷ್ಟು ಕೇಳಿ ಪಡೆಯುತ್ತಾರೆ. ಇಷ್ಟವಾಗದವರು ಚಹಾ ಕುಡಿಯುವ ಯೋಗ್ಯತೆ ಇಲ್ಲದವರೆಂಬುದು ತನ್ನಷ್ಟಕ್ಕೆ ತಾನೇ ಎಲ್ಲರಿಗೂ ಗೊತ್ತಾಗುತ್ತದೆ. ವಾಗ್ವಾದ, ತರ್ಕ, ನಿಗೂಢತೆಗಳನ್ನೇ ತುಂಬಿಕೊಂಡಿರುವ ಅಂಗಡಿಗಳನ್ನು ಮೊದಲು ಮುಚ್ಚಿಬಿಡಿ. ಅನುಭವದ ಚಹಾ ಅಂಗಡಿಗಳನ್ನು ತೆರೆಯಿರಿ ಎಂದು ಹೇಳತೊಡಗಿದ.

ಈ ಮೊದಲ ಹಂತ ಮುಗಿದು **ರೇಷ್ಮೆ ಹೆದ್ದಾರಿಗೆ** ಚಹಾ ಬಂದದ್ದು ಎರಡು ಹಂತದಲ್ಲಿ. ರತ್ನಪಡಿ ವ್ಯಾಪಾರಿಗಳು ಮತ್ತು ರೇಷ್ಮೆ ಮಾರಾಟಗಾರರು ಪ್ರಯಾಣ ಕೈಗೊಳ್ಳುತ್ತಿದ್ದ ರಸ್ತೆಗೆ ರೇಷ್ಮೆ ಹೆದ್ದಾರಿ ಎಂಬ ಹೆಸರು. ಈ ವ್ಯಾಪಾರಿಗಳು ಮಾರ್ಗ ಮಧ್ಯೆ ದಣಿವಾರಿಸಿಕೊಳ್ಳಲು ಪ್ರಯಾಣವನ್ನು ಕೆಲಹೊತ್ತು ಸ್ಥಗಿತಗೊಳಿಸುತ್ತಿದ್ದರು. ಆಗ ಚಹಾ ಮಾಡಿ ಕುಡಿಯುತ್ತಿದ್ದರು. ತಮ್ಮ ಸಂಪರ್ಕಕ್ಕೆ ಬರುತ್ತಿದ್ದ ಆಯಾ ಪ್ರದೇಶದ ಸಮುದಾಯಗಳ ಜನರಿಗೂ ಕೊಡುತ್ತಿದ್ದರು. ಅದರ ಮಹತ್ವ ಗೊತ್ತಿರಲಿ ಅಥವಾ ಇಲ್ಲದಿರಲಿ ಅವರೆಲ್ಲರಿಗೂ ಚಹಾ ನೀಡುವುದು ವಾಡಿಕೆಯಾಯಿತು. ಪೀಕಿಂಗ್‌ನಿಂದ ಬೊಖಾರ ಮೂಲಕ ಸಮರಖಂಡದವರೆಗಿನ ಹೆದ್ದಾರಿಯಲ್ಲಿ ಉದ್ದಕ್ಕೂ ಲೆಕ್ಕವಿಲ್ಲದಷ್ಟು ಚಾಯ್‌ಖಾನಾಗಳು ಅಂದರೆ ಚಹಾ ಅಂಗಡಿಗಳು ಪ್ರಾರಂಭವಾದದ್ದು ಹೀಗೆ.

ಈ ದೇವಲೋಕದ ಪಾನೀಯವನ್ನು ಮೊದಲಿಗೆ ಬಯಸಿ ಹೊರಟವರು ಬಹು ದೊಡ್ಡವರೆಂದು ಕರೆಸಿಕೊಂಡು ತಾವೇ ನಿಜವಾದ ಜ್ಞಾನಿಗಳೆಂದು ತಿಳಿದುಕೊಂಡವರೇ. ನಾವು ಇದನ್ನು ನೆನಪಿನಲ್ಲಿಟ್ಟುಕೊಳ್ಳಬೇಕು. ''ಇದು ಬರೇ ಒಣಗಿದ ಎಲೆ'' ಎಂದೋ, ''ಮೂಢರೇ, ನಮಗೆ ದೇವಲೋಕದ ಪಾನೀಯವಲ್ಲದೆ ಇನ್ನಾವುದರ ಹಂಗೂ ಬೇಕಿಲ್ಲ. ಹಾಗಿರುವಾಗ ನೀರನ್ನು ಕುದಿಸುವಿರಾದರೂ ಏಕೆ?'' ಎಂದೋ, ಅಥವಾ ''ಇದು ಏನಿರಬಹುದೆಂದು ತಿಳಿಯುವುದಾದರೂ ಹೇಗೆ? ನಮಗೆ ಸಾಬೀತು ಮಾಡಿ ತೋರಿಸಿ. ಅದೂ ಅಲ್ಲದೆ ಈ ದ್ರವಕ್ಕೆ ಮಣ್ಣಿನ ಬಣ್ಣವಿದೆಯೇ ಹೊರತು ಹೊನ್ನಿನ ಬಣ್ಣವಿಲ್ಲವಲ್ಲಾ!'' ಎಂದೆಲ್ಲಾ ಉದ್ಗಾರ ತೆಗೆಯುತ್ತಿದ್ದವರೂ ಇವರೇ.

ಮುಂದೆ ಸತ್ಯವು ಎಲ್ಲರಿಗೂ ತಿಳಿಯುವ ಕಾಲ ಬಂದಿತು. ರುಚಿ ನೋಡಬಯಸಿದ ಎಲ್ಲರ ಬಳಿಗೂ ಚಹಾ ಹೋಗುವಂತಾಯಿತು. ಪಾತ್ರಗಳು ತಿರುವು ಮುರುವಾದವು. ಜ್ಞಾನಿಗಳೆಂದು ತಮ್ಮನ್ನು ಕರೆದುಕೊಂಡ ಹಿಂದಿನವರಂತೆಯೇ ಮಾತನಾಡುವವರು ಶತ ಮೂರ್ಖರೆನಿಸಿಕೊಳ್ಳುವಂತಾಯಿತು. ಈಗಲೂ ಮತ್ತು ಯಾವಾಗಲೂ ಸತ್ಯವು ಬೆಳಕಿಗೆ ಬರುವುದು ಹೀಗೆಯೇ.

- *ಹಮಾದಾನಿ (೧೧೪೦)*

---

*(೧೧ನೇ ಪುಟದಿಂದ)* **ಗಾಂಧಿವಾದ......**

ಯಾವತ್ತೂ ಮನ್ನಿಸಿರಲಿಲ್ಲ. ಸಮಾನತೆ ಪ್ರತಿಯೊಬ್ಬನ ಹಕ್ಕು; ಮತ್ತು ಅದು ನಾಗರಿಕ ಸಮಾಜದ ಕಾನೂನು ಕಟ್ಟಳೆಗಳ ರೂಪದಲ್ಲಿ, ಸವಲತ್ತು ಮತ್ತು ಅವಕಾಶಗಳ ಸಮಾನತೆಯ ರೂಪದಲ್ಲಿ ಈಗಿಂದೀಗ ಎಲ್ಲ ದಲಿತರಿಗೂ ಸಿಗಬೇಕು; ಯಾರ ಔದಾರ್ಯ ಅಥವಾ ಕರುಣೆಯ ಫಲವಾಗಿ ಅದು ಬರಬೇಕಾದ್ದಿಲ್ಲ ಎಂದು ಗಾಂಧೀಜಿಗೆ ಅಂಬೇಡ್ಕರ್ ಸ್ಪಷ್ಟವಾಗಿ ಹೇಳಿದ್ದರು.

ರೈಲ್ವೆ, ವಕೀಲರು ಮತ್ತು ವೈದ್ಯರು ಗಾಂಧೀಜಿ ಪ್ರಕಾರ ಆಧುನಿಕ ನಾಗರಿಕತೆಯ ಮೂರು ಮಹಾ ಅನಿಷ್ಟಗಳು (ಪುಟ ೬೨). ರೈಲುಗಳು ನಮ್ಮ ದೇಶದಲ್ಲಿ ಸಾಂಕ್ರಾಮಿಕ ರೋಗಗಳನ್ನು ಸೃಷ್ಟಿಸಿವೆ, ಬರಗಾಲ ಹೆಚ್ಚಿಸಿವೆ ಮತ್ತು ನಮ್ಮ ಪವಿತ್ರ ಕ್ಷೇತ್ರಗಳಲ್ಲಿ ಜನಸಂದಣಿ ಉಂಟುಮಾಡಿ ಅವುಗಳನ್ನು ಅಪವಿತ್ರಗೊಳಿಸಿವೆ ಎಂದು ಅವರು ಹೇಳುತ್ತಾರೆ. ರೈಲ್ವೇ ಬರುವ ಮೊದಲು ನಾಡಿನಲ್ಲಿ ಸಾಂಕ್ರಾಮಿಕ ರೋಗಗಳಾಗಲೀ ಬರಗಾಲವಾಗಲೀ ಇರಲೇ ಇಲ್ಲವೋ ? ಹಿಂದ್ ಸ್ವರಾಜ್‌ನಲ್ಲಿ ಈ ಪ್ರಶ್ನೆಯೇ ಇಲ್ಲ. ನಮ್ಮ ಪವಿತ್ರ ಕ್ಷೇತ್ರಗಳ ಪಾಪಪೂರಿತ ವ್ಯವಹಾರಗಳ ಬಗ್ಗೆ ಮಾತಾಡದ ಭಕ್ತಿಪಂಥ ಸಂತನೇ ಇಲ್ಲ. ಆದರೆ ಹಿಂದ್ ಸ್ವರಾಜ್‌ನಲ್ಲಿ ಗಾಂಧೀಜಿಯವರಿಗೆ ಪ್ರಶ್ನೆ ಹಾಕುವ ''ಓದುಗ'' ಈ ಬಗ್ಗೆ ಕೂಡ ಕೇಳುವುದಿಲ್ಲ. ಇನ್ನು ವೈದ್ಯರ ಮಾತಿಗೆ ಬಂದರೆ ಅವರು ನಮ್ಮ ರೋಗಗಳನ್ನು ಜಾಸ್ತಿ ಮಾಡುವವರೇ ಹೊರತು ಗುಣಪಡಿಸುವವರಲ್ಲ ಎಂದು ಗಾಂಧೀಜಿ ಹೇಳುತ್ತಾರೆ. ಹಿಂದ್ ಸ್ವರಾಜ್‌ನಲ್ಲಿ ಎಲ್ಲಿಯೂ ವೈದ್ಯರು ಎಂದರೆ ಪಶ್ಚಿಮದ ಅಲೋಪಥಿ ಓದಿದ ವೈದ್ಯರು ಎಂದು ಹೇಳಿಲ್ಲ. ಆದರೆ ಅದು ಗಾಂಧೀಜಿಯವರ ಇಂಗಿತ ಎನ್ನುವುದು ಸ್ಪಷ್ಟವಾಗಿದೆ. ಈ ದೇಶದಲ್ಲೇ ಇರುವ ಪರಂಪರಾಗತ ಚಿಕಿತ್ಸಾ ವಿಧಾನಗಳ ಬಗ್ಗೆ ಗಾಂಧೀಜಿ ಏನೂ ಹೇಳುವುದಿಲ್ಲ. ಇವು ಕೂಡ ವಿಜ್ಞಾನವಲ್ಲವೆ ? ಸ್ವತಃ ಗಾಂಧೀಜಿಯವರೇ ಪ್ರಯೋಗ ಮಾಡಿ ನೋಡಿದ ಚಿಕಿತ್ಸಾ ವಿಧಾನಗಳು, ನಮ್ಮ ಶರೀರಕ್ಕೆ ಬರಬಹುದಾದ ಎಲ್ಲ ರೋಗಗಳನ್ನೂ ಒಳಗೊಳ್ಳಬಹುದೆ ? ಈ ಬಗ್ಗೆ ಈ ಕ್ಷೇತ್ರದ ತಜ್ಞರೇ ಉತ್ತರಿಸಬೇಕು.

ಹಿಂದ್ ಸ್ವರಾಜ್‌ನಲ್ಲಿ ಗಾಂಧೀಜಿಯವರ ಮುನಿಸಿಗೆ ಕಾರಣವಾಗಿರುವ ಇನ್ನೊಂದು ವೃತ್ತಿ ವಕೀಲರದ್ದು. ಬ್ರಿಟಿಷರು ಈ ದೇಶಕ್ಕೆ ತಂದ ಕೋರ್ಟುಗಳು ಮತ್ತು ವಕೀಲರು ದೇಶದಲ್ಲಿ ಸಾಮಾಜಿಕ ಕ್ಷೋಭೆಯನ್ನು ಹೆಚ್ಚಿಸಿದರು ಎಂದು ಗಾಂಧೀಜಿ ಅಭಿಪ್ರಾಯಪಡುತ್ತಾರೆ. ಈ ವ್ಯವಸ್ಥೆಗೆ ಪ್ರತಿಯಾಗಿ ನಮ್ಮ ಹಳ್ಳಿಗಳ ಸಾಂಪ್ರದಾಯಿಕ ನ್ಯಾಯವ್ಯವಸ್ಥೆಯನ್ನೇ ಅವರು ಎತ್ತಿ ಹಿಡಿಯುತ್ತಾರೆ. ಆದರೆ ನಮ್ಮ ಗ್ರಾಮೀಣ ನ್ಯಾಯಪದ್ಧತಿ 'ನ್ಯಾಯದ ಎದುರು ಎಲ್ಲರೂ ಸಮಾನರು' ಎಂಬ ಮೌಲ್ಯವನ್ನು ಯಾವತ್ತೂ ಒಪ್ಪಿಕೊಂಡಿರಲಿಲ್ಲ. ನಮ್ಮ ಶಾಸನಗಳಲ್ಲಿ ವರ್ಣಿತವಾಗಿರುವ ನ್ಯಾಯವಿಚಾರಣೆಗಳು ತೀರ್ಮಾನವಾಗುವ ರೀತಿಯನ್ನು ನೆನಪಿಸಿಕೊಂಡರೆ ಮೈಸಡುಗುತ್ತದೆ. ಸ್ಪಷ್ಟವಾಗಿ ಈ ಪದ್ಧತಿ ಆ ಕಾಲದಲ್ಲೇ ಒಂದು ಕಾನೂನು ರಹಿತ ಸ್ಥಿತಿ. ಅದನ್ನು ಈ ಕಾಲಕ್ಕೆ ತಂದುಕೊಂಡರೆ ಈ ದೇಶದ ಅಲ್ಪಸಂಖ್ಯಾತರು, ದಲಿತರು ಮತ್ತು ಮಹಿಳೆಯರಿಗೆ ಭವಿಷ್ಯದಲ್ಲೂ ನ್ಯಾಯದ ಭರವಸೆ ಇರುವುದಿಲ್ಲ. ಈ ಜನವರ್ಗಗಳು ನ್ಯಾಯವನ್ನು ತಮ್ಮ ಹಕ್ಕು ಎಂದು ಭಾವಿಸದೆ, ಈ ಸಮಾಜದ ಬಲಾಢ್ಯರ ಕರುಣೆಯನ್ನೇ ಅವಲಂಬಿಸಬೇಕಾಗುತ್ತದೆ. ವಕೀಲರಲ್ಲಿ ಹೆಚ್ಚಿನವರು ಹುಳುಗಳು ಮತ್ತು ಪೊಲೀಸ್ ಸ್ಟೇಷನ್ನು ಬಿಟ್ಟರೆ ನಮ್ಮ ಜನಸಾಮಾನ್ಯರು ಹೆಚ್ಚು ಹೆದರುವುದು ಕೋರ್ಟುಗಳಿಗೆ ಎಂಬುದು ನಿಸ್ಸಂದೇಹವಾದ ಮಾತು. ವಕೀಲರನ್ನು ಮತ್ತು ಕೋರ್ಟುಗಳನ್ನು ಹೀಗೆಳೆಯುವಾಗ ಗಾಂಧೀಜಿ ಜನಸಾಮಾನ್ಯರ ಭಾವನೆಗಳನ್ನೇ ವ್ಯಕ್ತಪಡಿಸುತ್ತಿದ್ದಾರೆ. ಆದರೆ ಈಗ ಇರುವ ಕೋರ್ಟುಗಳಿಂದ ಜನರಿಗೆ ನ್ಯಾಯ ದೊರೆಯದಿದ್ದರೆ, ಅದಕ್ಕೆ ಪರಿಹಾರ ನಮ್ಮ ಅರಳೀಕಟ್ಟೆಯ ಪಂಚಾಯಿತಿಗಳ ಪರಂಪರಾಗತ ನ್ಯಾಯವ್ಯವಸ್ಥೆ ಅಲ್ಲ. ನಾಗರಿಕ ಸಮಾಜದ ಕಾನೂನಿನ ಆಳ್ವಿಕೆ ಮತ್ತು ಕಾನೂನಿನ ಎದುರು ಎಲ್ಲರೂ ಸಮಾನರು ಎಂಬ ತತ್ವಗಳಿಗೆ ಬದಲು ಗಾಂಧೀಜಿ ಪರಂಪರಾಗತ ವ್ಯವಸ್ಥೆಯ ಅರಣ್ಯ ನ್ಯಾಯವನ್ನೇ ಎತ್ತಿ ಹಿಡಿಯುತ್ತಾರೆ. ಅದರಲ್ಲಿ ನ್ಯಾಯದ ಕಲ್ಪನೆಯೇ ತಿರುಚಲ್ಪಟ್ಟಿರುವುದನ್ನು ಅವರು ಗಮನಿಸುವುದಿಲ್ಲ. ಗಾಂಧೀಜಿ ಅನೇಕ ವಿಷಯಗಳಲ್ಲಿ ನಮ್ಮ ಸಂಪ್ರದಾಯಗಳನ್ನು ಧೀರೋದಾತ್ತವಾಗಿ ಎದುರಿಸಿದ್ದಾರೆ. ಆದರೆ ಇದೊಂದು ವಿಷಯದಲ್ಲಿ ಅವರು ನಮ್ಮ ಸಂಪ್ರದಾಯವಾದಿಗಳ ಜೊತೆ ಇದ್ದಾರೆ. ಹಿಂದ್ ಸ್ವರಾಜ್‌ನಲ್ಲಿ ಗಾಂಧೀಜಿ ವ್ಯಕ್ತಪಡಿಸಿದ ಅಭಿಪ್ರಾಯಗಳಿಂದಾಗಿ ಸ್ವತಂತ್ರ ಭಾರತ ಅವರನ್ನು ತಿರಸ್ಕರಿಸಿತು ಎಂಬುದು ನನ್ನ ವಾದವಲ್ಲ. ಈ ದೇಶ, ಆಧುನಿಕ ನಾಗರಿಕತೆಯ ಪ್ರಜಾಪ್ರಭುತ್ವ, ಸಮಾನತೆ, ಸೆಕ್ಯೂಲರಿಸಂ, ಕಾನೂನಿನ ಆಳ್ವಿಕೆ ಮುಂತಾದ ಮೌಲ್ಯಗಳ ತಳಹದಿಯ ಮೇಲೆ ಕಟ್ಟಿದ ಒಂದು ಆರೋಗ್ಯವಂತ ಸಮಾಜವಾಗಿದ್ದರೆ ಆ ಮಾತು ಹೇಳಬಹುದಿತ್ತು. ಗಾಂಧೀಜಿಯವರನ್ನು ದೇಶ ತಿರಸ್ಕರಿಸಿದ್ದರಿಂದ ಒಳ್ಳೆಯದೇ ಆಯಿತು ಎಂದೂ ಹೇಳಬಹುದಾಗಿತ್ತು. ಆದರೆ ಗಾಂಧೀಜಿಯವರ ಮಾತುಗಳಿಗೆ ವ್ಯತಿರಿಕ್ತವಾಗಿ ಇನ್ನಷ್ಟು ಕೋರ್ಟುಗಳು, ವಕೀಲರು, ರೈಲುಗಳು, ಕೈಗಾರಿಕೆಗಳು, ಅಣೆಕಟ್ಟುಗಳು- ಎಲ್ಲವನ್ನೂ ಪಡೆದ ಭಾರತ ಈಗ ಅಣುಬಾಂಬು ಕೂಡ ತಯಾರಿಸಿದೆ. ಗಾಂಧೀಜಿ ಈಗ ಬದುಕಿದ್ದರೆ, ಅಣುಬಾಂಬು ಪ್ರಯೋಗಕ್ಕೆ ಅವರ ಪ್ರತಿಕ್ರಿಯೆ ಏನಿರುತ್ತಿತ್ತು ? ಅಥವಾ ಬಾಬರಿ ಮಸೀದಿ ಉರುಳಿದ್ದರ ಬಗ್ಗೆ ? ಅವರು ವಿರೋಧಿಸಿದ್ದ ಎಲ್ಲ ಅನಿಷ್ಟಗಳೂ ಈಗ ಇನ್ನಷ್ಟು ವಿಷಮವಾಗಿವೆ. ಗಾಂಧೀಜಿಯವರ ನೆನಪು ಈಗ ಅರ್ಥಹೀನ ಆಚರಣೆಗಳಲ್ಲಿ ಮಾತ್ರ ಉಳಿದಿದೆ. ಗಾಂಧೀವಾದ ಈಗ ನಮಗೆ ಪ್ರಸ್ತುತವೋ ಅಲ್ಲವೋ ಎಂಬ ವಾದವೇ ಅಸಂಗತ. ನಮ್ಮ ಕಾಲದ ರೋಗಗಳು ಗಾಂಧೀಜಿಗೆ ಪತ್ತೆ ಆಗಲಿಲ್ಲ ಎಂಬುದೇ ನಾನು ಹೇಳಲು ಯತ್ನಿಸುತ್ತಿರುವ ಮಾತು. ಅದಕ್ಕೆ ಅವರ ಕಿರುಕೃತಿ ''ಹಿಂದ್ ಸ್ವರಾಜ್'' ಅನ್ನು ಒಂದು ಉದಾಹರಣೆಯಾಗಿ ಬಳಸಿಕೊಂಡಿದ್ದೇನೆ.

ಜಿ. ರಾಜಶೇಖರ

ಎಲ್ ಐ ಸಿ ಆಫ್ ಇಂಡಿಯಾ, ಡಿವಿಜನಲ್ ಆಫೀಸ್, 'ಜೀವನ ಕೃಷ್ಣ', ಅಜ್ಜರ ಕಾಡು, ಉಡುಪಿ - ೫೭೬೧೦೧

# ದಲಿತ ಚಳವಳಿ : ವಿಮರ್ಶೆ

ಡಾ|| ಆರ್ಕೆ, ಮಣಿಪಾಲ

ಕೆಲವು ವರ್ಷಗಳ ಹಿಂದೆ ಉಡುಪಿಯಲ್ಲಿ ದಲಿತ ನಾಯಕ ಬಿ. ಕೃಷ್ಣಪ್ಪನವರೊಂದಿಗೆ ಎಲ್ಲ ಎಡ ಸಾಂಸ್ಕೃತಿಕ ಸಂಘಟನೆಗಳೊಳಗೆ ಪಾರಸ್ಪರಿಕವಾದ ಸಂವಾದ, ಮಹತ್ವದ ಕಾರ್ಯಕ್ರಮಗಳ ವಿಷಯದಲ್ಲಿ ಸಂಯುಕ್ತ ಹೊಣೆಗಾರಿಕೆ, ತಾತ್ವಿಕ ಸಮಾಲೋಚನೆಗಳ ಅಗತ್ಯದ ಕುರಿತು ಪ್ರಸ್ತಾಪಿಸಿದ್ದೆ ಹಾಗೂ ಕಾರ್ಯಕರ್ತರ ಅಧ್ಯಯನಶೀಲತೆಯ ಕೊರತೆಯ ಬಗ್ಗೆ, ಗಂಭೀರ ರಾಜಕೀಯ-ಸಾಮಾಜಿಕ ಪ್ರಶ್ನೆಗಳ ವಿಶ್ಲೇಷಣೆಯಲ್ಲಿನ ಅಸೂಕ್ಷ್ಮತೆಯ ಬಗ್ಗೆ ಆತಂಕ ವ್ಯಕ್ತಪಡಿಸಿದ್ದೆ. ಆಗ ಕೃಷ್ಣಪ್ಪ ಹತ್ತಾರು ಕಾರ್ಯಕ್ರಮಗಳಿಗಾಗಿ, ಹೋರಾಟಗಳಿಗಾಗಿ, ಓಡಾಟ, ಸಂಬಂಧಿಸಿದವರ ಭೇಟಿ, ಸಮಸ್ಯೆಯ ಬೆನ್ನು ಹತ್ತುತ್ತಾ ಸಾಗುವುದು – ಎಂದು ಎಲ್ಲ ವೇಳೆ ಹಾಳಾಗುತ್ತದೆ, ಓದಲಿಕ್ಕೆ ಬಿಡುವೇ ಸಿಗುವುದಿಲ್ಲ, ಎಂಬ ಆತಂಕ ವ್ಯಕ್ತಪಡಿಸಿದ್ದರು. ಆದರೆ ನಮ್ಮ ಚಿಂತನ ಹಾಗೂ ಸಂವಾದದ ಮೂಲಕ ಎಡಪಂಥೀಯ ಸಾಂಸ್ಕೃತಿಕ ಸಂಘಟನೆಗಳ ಕ್ರಿಯಾಶೀಲತೆಯನ್ನು ಉಳಿಸಿ ಬೆಳೆಸುವುದು ಸಾಧ್ಯವಾಗಿಲ್ಲ.

ಹಾಗೆಂದು ಈ ದುರಂತದ ಅರಿವು ನಮ್ಮ ಸಂಘಟನೆಗಳಿಗೆ ಇಲ್ಲವೆಂದಲ್ಲ. ದಸಂಸವು ಒಂದು ಸಾಂಸ್ಕೃತಿಕ ಸಂಘಟನೆಯಾಗಿ ಉಳಿಯಬೇಕೇ ವಿನಾ ನೇರವಾಗಿ ರಾಜಕೀಯ ಪ್ರವೇಶಿಸಬಾರದು; ಹಾಗೇನಾದರೂ ಪ್ರವೇಶಿಸಿದಲ್ಲಿ ಅದರ ಅಸ್ತಿತ್ವಕ್ಕೇ ಅಪಾಯವಿದೆ-ಎಂಬ ತೀರ್ಮಾನಕ್ಕೆ ಹಿಂದೆಯೇ ಬರಲಾಗಿತ್ತು.

ನಂತರ ಕರ್ನಾಟಕ ವಿಧಾನಸಭಾ ಚುನಾವಣೆಯಲ್ಲಿ ಜನತಾ ಸರಕಾರ ರಚನೆಗೆ ದಸಂಸವೂ ಕಾರಣವಾದುದನ್ನು ನಾವು ಕಾಣುತ್ತೇವೆ. ಆಮೇಲೆ ದಲಿತ ಹೋರಾಟ ತನ್ನ ಕಸುವನ್ನು ಕಳಕೊಂಡದ್ದು ಹಾಗೂ ದಸಂಸವು ದುರ್ಬಲವಾಗಿ ಕ್ರಮೇಣ ಹೋಳು ಹೋಳಾದುದನ್ನು ಗಮನಿಸಬಹುದು.




ತುಂಬ ಕ್ರಿಯಾಶೀಲವಾದ, ದಲಿತವರ್ಗಕ್ಕೆ ಸ್ವಾಭಿಮಾನವನ್ನು ನೀಡಿದ, ದಸಂಸವು ದುರ್ಬಲವಾಗುವಂಥ ಸನ್ನಿವೇಶಗಳ ಕುರಿತು ಕೆಲವು ದಲಿತಮಿತ್ರರು 'ದಲಿತ ಚಳವಳಿ: ಒಂದು ಅವಲೋಕನ' ಎಂಬ ಸಂಕಲನದಲ್ಲಿ (ಸಂ: ಡಾ|| ವಿ. ಮುನಿವೆಂಕಟಪ್ಪ; ಪ್ರ: ವಿಚಾರವಾದಿ ಪ್ರಕಾಶನ, ಮೈಸೂರು, ೧೯೯೮) ತೀರಾ ಕಳಕಳಿಯಿಂದ, ಉದ್ವೇಗದಿಂದ ತಮ್ಮ ಅಳಲನ್ನು ತೋಡಿಕೊಂಡಿದ್ದಾರೆ. ಅವರ ಈ ಅಳಲು ಸಮಸ್ತ ಜನಪರ ಹೋರಾಟಗಾರರ ಅಳಲು ಕೂಡ. ಬಹುಶಃ ಈ ಅಳಲನ್ನು ದೂರಮಾಡಿಕೊಳ್ಳಬಹುದಾದ ವಿಧಾನ, ನೇರ ರಾಜಕೀಯ ಕ್ರಿಯೆಯ ವಿಷಯದಲ್ಲಿ ನಮ್ಮ ಅಂತರವನ್ನು ನಿರುದ್ವಿಗ್ನವಾಗಿ, ತಾತ್ವಿಕವಾಗಿ ಸ್ಪಷ್ಟಪಡಿಸಿಕೊಂಡು ಹೋರಾಟವನ್ನು ಅಣಿನೆರೆಯಿಸುವಲ್ಲಿ ಅಡಗಿದೆ ಎಂದೇ ನನ್ನ ಭಾವನೆ. ಈ ಕ್ರಿಯೆಯಲ್ಲಿ ಇಲ್ಲಿನ ಬರಹಗಳು ಎಷ್ಟರಮಟ್ಟಿಗೆ ದಾರಿದೀವಿಗೆಗಳಾಗಬಲ್ಲುವು ಎಂಬ ಪರಿಚಯ ನೀಡುವುದಷ್ಟೇ ಇಲ್ಲಿನ ಉದ್ದೇಶ.

ವಿವಿಧ ವರ್ಷಗಳಲ್ಲಿ ಬರೆಯಲಾದ ವಿವಿಧ ಲೇಖಕರ ೧೯ ಲೇಖನಗಳು ಇಲ್ಲಿವೆ. ಕೆಲವು ಪ್ರಮುಖ ದಲಿತ ನಾಯಕರ ಪರಿಚಯದೊಂದಿಗೆ ದಲಿತ ಚಳವಳದ ಇತಿಮಿತಿಗಳ ಕುರಿತ ಲೇಖನಗಳು ಇಲ್ಲಿವೆ. ಸಾಕಷ್ಟು ವಿಚಾರಣೀಯ ಮತ್ತು ಅಷ್ಟೇ ವಿವಾದಾಸ್ಪದ, ಕೆಲವೊಮ್ಮೆ ಹಾಸ್ಯಾಸ್ಪದ ಅಭಿಪ್ರಾಯಗಳೂ ಇಲ್ಲಿ ವ್ಯಕ್ತವಾಗಿರುವುದುಂಟು. ವಿವಿಧ ಪತ್ರಿಕೆಗಳಲ್ಲಿ ಬರೆದ ಸಮೀಕ್ಷಾತ್ಮಕ ಸ್ವರೂಪದ ಲೇಖನಗಳೇ ಹೆಚ್ಚು; ಅವುಗಳ ತೀರ್ಮಾನಗಳನ್ನು ಸಮಕಾಲೀನ ಬೆಳವಣಿಗೆಗಳ ಹಿನ್ನೆಲೆಯಲ್ಲಿ ವಿಸ್ತೃತ ಒದು ಚಿಂತನೆಯ ಮೂಲಕ, ಪರಿಷ್ಕರಿಸುವ ಉದ್ದೇಶ ಲೇಖಕರಿಗೂ ಇಲ್ಲ. ಸಂಪಾದಕರಿಗೂ ಸಾಧ್ಯವಾಗಿಲ್ಲ. ಇನ್ನೊಂದು ದೊಡ್ಡ ದೋಷವೆಂದರೆ ಅಭಿಪ್ರಾಯ ಮಂಡನೆಗಿಂತ ವಿಶ್ಲೇಷಣೆ ಪುಷ್ಟೀಕರಣಗಳಿಗೆ ಇಲ್ಲಿ ಮಹತ್ವ ಸಿಕ್ಕಿಲ್ಲ. ಹಾಗಾಗಿ ಈ ಗ್ರಂಥ ದಲಿತ ಚಳವಳಿಯ ಕುರಿತು ಸಮಗ್ರವೂ ವೈಜ್ಞಾನಿಕವೂ ಆದ ದಾಖಲೆಯಾಗುವಲ್ಲಿ ಸೋತಿದೆ.

ಕೆಲವೆಡೆ ಅವೈಚಾರಿಕತೆ, ಮಧ್ಯಮವರ್ಗೀಯ ಪೂರ್ವಗ್ರಹಗಳು ಸುಳಿದಿವೆ. ಸಂಘಟನೆಯನ್ನು ನಾಯಕರೊಂದಿಗೆ ಸಮೀಕರಿಸುವ, ಸಂಘಟನೆಯ ಅವಸಾನಕ್ಕೂ ನಾಯಕರ ತತ್ವಭ್ರಷ್ಟತೆ ಇಲ್ಲವೇ ಸಾವಿಗೂ ಸಂಬಂಧ ಕಲ್ಪಿಸುವುದಕ್ಕಿಂತ, ಸಂಘಟನೆಯ ಆಂತರಿಕ ರಚನೆ ಮತ್ತು ಕಾರ್ಯವಿಧಾನದಲ್ಲಿನ ದೋಷಗಳ ಬೆದಕಾಟ ಅಗತ್ಯವೆನ್ನಿಸುತ್ತದೆ. ದೇವನೂರು ಮಹದೇವ, ಸಿದ್ದಲಿಂಗಯ್ಯ, ಕೃಷ್ಣಪ್ಪ ಅವರ ಕುರಿತ ಪ್ರಸ್ತಾಪ ಬಂದಾಗಲೆಲ್ಲ ಇಂಥ ದೋಷಗಳು ಕಣ್ಣಿಗೆ ಹೊಡೆಯುವಂತಾಗುತ್ತದೆ. ಹೋರಾಟದ ಒಂದು ಘಟ್ಟದಲ್ಲಿ ಸಿದ್ದಲಿಂಗಯ್ಯನ ಮುಖಪರಿಚಯವಿಲ್ಲದಿದ್ದ ದಲಿತರಿಗೂ ಆತನ ಹಾಡುಗಳು ಕಂಠಪಾಠವಾಗಿದ್ದವು ಎಂಬ ಮಾತನ್ನು ಕೇಳುತ್ತೇವೆ. ಇದು ಹೇಗೆ ಸಾಧ್ಯವಾಯಿತು? ಸಂಘಟನೆಯ ಕ್ರಿಯಾಶೀಲತೆಯಿಂದ. ಅದು ಹಮ್ಮಿಕೊಂಡ ವಿವಿಧ ಕಾರ್ಯಕ್ರಮಗಳಿಂದ. ಎಡಪಂಥೀಯ ರಾಜಕೀಯ ಪಕ್ಷಗಳು ಚುರುಕಾಗಿ ಕೆಲಸಮಾಡುತ್ತಿದ್ದು, ಅವುಗಳ ನಾಯಕರು ದಲಿತ ಚಳವಳದಲ್ಲಿ ಆಸಕ್ತಿ ಪ್ರಕಟಿಸುತ್ತಿದ್ದುದು ಕೂಡ ದಸಂಸದ ಆಗಿನ ಕ್ರಿಯಾಶೀಲತೆಗೆ ಕಾರಣವಾಗಿತ್ತೆನ್ನಿಸುತ್ತದೆ. ಇಂದು ಈ ಪಕ್ಷಗಳು ದುರ್ಬಲವಾಗಿರುವುದರಿಂದ ಹಾಗೂ ಎಡಪಂಥೀಯ ಸಾಂಸ್ಕೃತಿಕ ಒಲವಿನ ಸಂಘಟನೆಗಳೊಂದಿಗೆ ದಸಂಸವು ಸಂವಾದವನ್ನು ಅಷ್ಟಾಗಿ ಇರಿಸಿಕೊಳ್ಳದಿರುವುದರಿಂದ ಕೂಡ ಈ ಸಮಸ್ಯೆ ಹುಟ್ಟಿಕೊಂಡಿರಬಹುದು. ಹೆಚ್ಚು ಪ್ರಸ್ತುತವೂ ಜ್ವಲಂತವೂ ಆದ ಸಾಮಾಜಿಕ ಪ್ರಶ್ನೆಗಳನ್ನು ಇಂದಿಗೂ ಎದುರಿಸುತ್ತಿರುವ ದಸಂಸವು, ತಾನು ಪ್ರತಿನಿಧಿಸುತ್ತಿರುವ ಸಮುದಾಯದ ಪ್ರಾಥಮಿಕ ಸಮಸ್ಯೆಗಳ ವಿಷಯದಲ್ಲಿ ಹಿಂದಿನಷ್ಟು ಕ್ರಿಯಾಶೀಲವಾಗಿಲ್ಲವೆಂದರೆ, ರಾಜಕೀಯ ಆಯ್ಕೆಯ ಪ್ರಶ್ನೆಯ ಸುಳಿಯಲ್ಲಿ ಮುಳುಗೇಳುತ್ತಿದೆಯೆಂದರೆ, ಸಖೇದಾಶ್ಚರ್ಯವಾಗುತ್ತದೆ.

ಈ ಗ್ರಂಥದಲ್ಲಿ ಒಳ್ಳೆಯ ಅಧ್ಯಯನಶೀಲ, ಸೂಕ್ಷ್ಮ ಗ್ರಹಿಕೆಯ ಲೇಖನಗಳೂ ಇಲ್ಲದಿಲ್ಲ. ಡಾ|| ವಿ. ಮುನಿವೆಂಕಟಪ್ಪ, ಜಹೊನಾ, ಮೈಸೂರು ರಾಜು, ಪುಟ್ಟಯ್ಯ ಮುಂತಾದವರ ಉತ್ತಮ ವಿಶ್ಲೇಷಣೆಗಳಿವೆ. ಇಷ್ಟಾಗಿಯೂ, ಇಲ್ಲಿನ ಬರೆಹಗಳಲ್ಲಿ ದಸಂಸದ ಒಂದು ಪ್ರಮುಖ ಭಾಗವು ಕಾನ್ಶೀರಾಮ್ ಅವರ ಬಹುಜನ ಸಮಾಜವಾದಿ ಪಕ್ಷದಲ್ಲಿ ಜೀರ್ಣವಾದುದಕ್ಕೆ ಕಾರಣ ಸ್ಪಷ್ಟಗೊಳ್ಳುವುದಿಲ್ಲ. ಅಷ್ಟೇ ಅಲ್ಲ, ದಲಿತ ಸಾಹಿತಿಗಳ ಸ್ವಾರ್ಥ, ಧ್ಯೇಯಭ್ರಷ್ಟತೆಗೆ ಪರಿಹಾರ ಅಥವಾ ಉತ್ತರ ಬಿ.ಎಸ್.ಪಿ.ಯಲ್ಲಿದೆಯೇ? ಮಾಯಾವತಿಯನ್ನು ಕುರಿತ ಗೋಪೀನಾಥರ ಬರೆಹ ಸ್ತೋತ್ರ ಸಾಹಿತ್ಯಕ್ಕೆ ಉತ್ತಮ ಸೇರ್ಪಡೆ. ಮೂರ್ತಿಪೂಜೆ ಸಾಕು; ಸ್ವಾತಂತ್ರ್ಯ ಹೋರಾಟಕಾಲದ ನಾಯಕರಿಗೆ ಬೇಕಿದ್ದರೆ ಮಾಡೋಣ. ಓ. ಶ್ರೀಧರನ್ ಅಂಬೇಡ್ಕರ್ ವಿಚಾರಗಳನ್ನು ಮಂಡಿಸುತ್ತಾರೆಯೇ ವಿನಾ ಬಿ.ಎಸ್.ಪಿ.ಯ ಪ್ರಣಾಳಿಕೆ, ಕಾರ್ಯಕ್ರಮಗಳು ಆಡಳಿತದ ಇತಿಮಿತಿಗಳ ವಿಮರ್ಶೆಗಿಳಿಯುವುದಿಲ್ಲ. ಈ ಬರೆಹದ 'ಅನುಲೇಖ'ದಲ್ಲಿ ಉತ್ತರ ಪ್ರದೇಶದಲ್ಲಿ ಬಿಜೆಪಿ-ಬಿಎಸ್‌ಪಿಗಳ ಹೊಂದಾಣಿಕೆ ಅಂಬೇಡ್ಕರ್ ದೃಷ್ಟಿಕೋನಕ್ಕೆ ಅನುಗುಣವಾಗಿದೆ ಎಂದು ವಾದಿಸುತ್ತಾರೆ. ಅವರ ದೃಷ್ಟಿಯಲ್ಲಿ ಅಂಬೇಡ್ಕರ್ ವಿಚಾರಧಾರೆ ಅಂದರೆ ಬಿಎಸ್‌ಪಿಯ ವಿಚಾರಧಾರೆ ಎಂಬ ಸಮೀಕರಣವಿದ್ದಂತಿದೆ. ಅಲ್ಲದೆ, ಬಿಜೆಪಿಯನ್ನು ಬಹುಸಂಖ್ಯಾತ ಹಿಂದೂಗಳ ಪ್ರತಿನಿಧಿತ ಪಕ್ಷವೆಂದು ಪರಿಗಣಿಸುವ ಮೂಲಕ ಅವರು ಬಿಎಸ್‌ಪಿಯ ಅನುಕೂಲ ಸಿದ್ಧಾಂತಕ್ಕೆ ತಕ್ಕಂತೆ ಶ್ರುತಿ ಜೋಡಿಸುತ್ತಾರೆ. ಇದು ವಿವಾದಾಸ್ಪದ. ಹೀಗಾಗಿ ಈ ಗ್ರಂಥ ಕರ್ನಾಟಕದಲ್ಲಿ ದಲಿತ ಚಳವಳಿಯ ಸಮಗ್ರ ಚಿತ್ರಣವನ್ನು ನೀಡುತ್ತಿಲ್ಲ; ಸಾಮಾಜಿಕ-ಸಾಂಸ್ಕೃತಿಕ ಚಳವಳಿಗಳ ಅಧ್ಯಯನಕ್ಕೆ ಅಗತ್ಯವಾದ ವಸ್ತುನಿಷ್ಠ ಮತ್ತು ಮುಕ್ತ ವಿಶ್ಲೇಷಣೆಯ ಕೊರತೆಯಿಂದ ಬಳಲುತ್ತಿದೆ.

ಡಾ|| ಆರ್ಕೆ, ಮಣಿಪಾಲ
೧೧೮, ಎಂ.ಐ.ಜಿ. ಹುಡ್ಕೋ, ಮಣಿಪಾಲ-೫೭೬ ೧೧೯

# ಜೈಸಿಂಗ್ ಕಂಬಳಿವಾಲ

ಬೆಂಗಳೂರಿನ ಪೀಣ್ಯ, ದಾಸರಹಳ್ಳಿ ಮತ್ತು ಲಗ್ಗೆರೆಯತ್ತ ಸಾಗುವ ರಸ್ತೆಯ ಬದಿಯಲ್ಲಿ, ಉತ್ತರದಿಂದ ಕಂಬಳಿವಾಲಾಗಳ ಗುಂಪು ಬಂದು ಬೀಡುಬಿಟ್ಟಿತೆಂದರೆ ಚಳಿಗಾಲ ಸಮೀಪಿಸುತ್ತಿದೆ ಎಂದು ಊಹಿಸಬಹುದು. ಬೆಂಗಳೂರಿಗರಿಗೆ ಚಳಿಯ ಅನುಭವವಾಗುವುದಕ್ಕೆ ಮುಂಚೆ, ನೂರಾರು ಮೈಲುಗಳಷ್ಟು ದೂರದಲ್ಲಿರುವ ಈ ಕಂಬಳಿವಾಲಾಗಳ ಮೂಗಿಗೆ ಚಳಿಯ ವಾಸನೆ ಹತ್ತುತ್ತದೆ !

ಮುಖ್ಯವಾಗಿ ರಾಜಸ್ಥಾನ, ಮಧ್ಯಪ್ರದೇಶಗಳಿಂದ ಬರುವ ಅವರು ರಸ್ತೆಯಂಚಿನಲ್ಲಿ ಸ್ಥಳೀಯರಿಗೆ ಉಪದ್ರವವಾಗದಂತೆ ಡೇರೆ ಹೊಡೆಯುತ್ತಾರೆ. ಲಾರಿಗಳಲ್ಲಿ ದೊಡ್ಡ ದೊಡ್ಡ ಕಂಬಳಿ ಗಂಟುಗಳು ಬಂದಿಳಿಯುತ್ತವೆ. ಮುಂದೆ, ಬೇಸಿಗೆ ಬಿಸಿಲಿನ ಚುರುಕು ಹೆಚ್ಚುವವರೆಗೆ ಅವರು ಇಲ್ಲೇ ಠಿಕಾಣಿ ಹೂಡುತ್ತಾರೆ.

ಅವರ ಗಂಟುಗಳಲ್ಲಿ ನಿಮ್ಮ ಅಗತ್ಯಕ್ಕೆ ಬಗೆಬಗೆಯ ಬಣ್ಣದ, ಒರಟಾದ, ನುಣುಪಾದ ಕಂಬಳಿಗಳಿರುತ್ತವೆ. ಉಣ್ಣೆಯ ಬಗ್ಗೆ ನಿಮಗೆ ಸ್ವಲ್ಪ ತಿಳುವಳಿಕೆ ಇದ್ದರೆ ಸರಿ. ಅವರಂತೂ ಅವನ್ನು ಶ್ರೇಷ್ಠ ಉಣ್ಣೆಯ ಕಂಬಳಿಗಳೆಂದೇ ಪ್ರಮಾಣ ಮಾಡುತ್ತಾರೆ. ಇವರ ಪೈಕಿ ಹತ್ತು ಹದಿನೈದು ಜನರನ್ನು ದಿನಗೂಲಿಗೆ ನೇಮಿಸಿಕೊಂಡು ವ್ಯಾಪಾರ ಮಾಡುವ ದೊಡ್ಡ ಮಾಲೀಕರಿದ್ದಾರೆ. ಸಣ್ಣಮಟ್ಟದಲ್ಲಿ ಒಬ್ಬೊಬ್ಬರೇ ವ್ಯಾಪಾರ ಮಾಡುವವರೂ ಇರುತ್ತಾರೆ. ಪ್ರತಿಯೊಬ್ಬನೂ ಹತ್ತಿಪ್ಪತ್ತು ಕಂಬಳಿಗಳನ್ನು ತಲೆಯ ಮೇಲೆ ಹೊತ್ತು ದೂರದೂರದ ಬಡಾವಣೆಗಳಿಗೆ ನಡೆಯುತ್ತ ಹೋಗಿ ವ್ಯಾಪಾರ ಮಾಡುತ್ತಾರೆ. ಕೆಲವೊಮ್ಮೆ ಕಂಬಳಿ ಗಂಟಿನ ಸಹಿತ ಸಿಟಿ ಬಸ್ಸಿನೊಳಕ್ಕೆ ತೂರಿಕೊಂಡು, ಇತರ ಪ್ರಯಾಣಿಕರ ಗೊಣಗಾಟವನ್ನು ಕಿವಿಗೆ ಹಾಕಿಕೊಳ್ಳದೆ ಸುಖವಾಗಿ ತೂಕಡಿಸುತ್ತಾರೆ !

ಸ್ಥಳೀಯ ಭಾಷೆಯ ಪರಿಚಯವಿಲ್ಲದ್ದು ಅವರಿಗೆ ಭಾರಿ ತೊಡಕೆನಿಸುವುದಿಲ್ಲ. ಬೆಂಗಳೂರಿನವರು ಹೇಗೋ ಹಿಂದಿ, ತಮಿಳು ಕಲಿತೇ ಇರುತ್ತಾರೆ ! ಕಂಬಳಿವಾಲಾಗಳು ವ್ಯವಹಾರಕ್ಕಾಗಿ ಕನ್ನಡದಲ್ಲಿ ಬೆಲೆ ಹೇಳುವುದನ್ನಂತೂ ಕಲಿತಿರುತ್ತಾರೆ. ಸ್ವಲ್ಪ ಒರಟರಂತೆ ಕಾಣಿಸುವ ಅವರು ವ್ಯವಹಾರ ಚತುರರು. ಕಂಬಳಿ ಕೊಳ್ಳುವಾಗ ಎಷ್ಟು ಚೌಕಾಶಿ ಮಾಡಿದರೂ ನಿಮ್ಮ ಬಗ್ಗೆ ಬೇಸರಗೊಳ್ಳುವುದಿಲ್ಲ. ಅವರ ಊರು ಕೇರಿ, ವೈಯಕ್ತಿಕ ವಿಷಯ ಕೇಳಿದರೆ, ಇದೆಲ್ಲ ಯಾಕೆ ಎನ್ನುವಂತೆ, ಉತ್ತರಿಸಲು ಹಿಂದೆ ಮುಂದೆ ನೋಡುತ್ತಾರೆ.

ಕರ್ನಾಟಕದವರು ಯಾರಾದರೂ ಹೀಗೆ ವ್ಯಾಪಾರ ಮಾಡಲು ದೂರದ ರಾಜ್ಯಗಳಿಗೆ ಹೋಗಿಬರುತ್ತಾರೋ ಎಂಬುದು ನನಗೆ ತಿಳಿಯದು. ಆದರೆ, ಅಷ್ಟು ದೂರದಿಂದ ಪ್ರತಿವರ್ಷ ಬೆಂಗಳೂರಿಗೆ ಬಂದುಹೋಗುವ ಕಂಬಳಿವಾಲಾಗಳ ಬಗ್ಗೆ ತಿಳಿದುಕೊಳ್ಳಲು ಕುತೂಹಲವಾಯಿತು.

ಹೀಗೆ, ತಮ್ಮೊಳಗೇ ಮುದುಡಿಕೊಳ್ಳುವವರ ಮಧ್ಯೆ ನನ್ನ ಪ್ರಶ್ನೆಗಳಿಗೆ ಉತ್ತರಿಸಲು, ಫೋಟೋ ತೆಗೆಸಿಕೊಳ್ಳಲು ಸಮ್ಮತಿಸಿದ ವ್ಯಕ್ತಿ ಜೈಸಿಂಗ್. ಕಂಬಳಿ ಬೆಲೆಯ ಬಗ್ಗೆ ಬರೆಯಬಾರದು ಎಂಬುದೊಂದೇ ಅವರ ನಿಬಂಧನೆ ! ಸಿಸ್ವಮ್ಸ್ ಬಸ್ ಸ್ಟಾಪಿನ ಎದುರು ರಸ್ತೆಯಂಚಿನಲ್ಲಿ ಅಂಗಡಿ. ಕಳೆದ ಹನ್ನೆರಡು ವರ್ಷಗಳಿಂದ ಬೆಂಗಳೂರಿಗೆ ಬಂದು ಹೋಗುತ್ತಿರುವ ಅವರಿಗೆ ಸ್ವಲ್ಪ ಕನ್ನಡವೂ ಬರುತ್ತದೆ. ನಾನು ಕಂಬಳಿ ಖರೀದಿಸುವವನಲ್ಲ ಎಂಬುದು ತಿಳಿದನಂತರವೂ ನಮ್ಮ ಮಾತುಕತೆಗೆ ತೊಡಕಾಗಲಿಲ್ಲ. ನನ್ನ ಮುರುಕು ಹಿಂದಿ, ಜೈಸಿಂಗ್‌ರ ಹರಕು ಕನ್ನಡ. ಪಕ್ಕದ ಅಂಗಡಿಗಳವರಿಗೆ ಭಾರೀ ಕುತೂಹಲ !



*ತನ್ನ ಅಂಗಡಿಯಲ್ಲಿ ಜೈಸಿಂಗ್*

ಇಪ್ಪತ್ತೈದರ ಪ್ರಾಯದ ಜೈಸಿಂಗ್ ಮಧ್ಯಪ್ರದೇಶದ ಬೋರ್ಖೇಡಿ ಗ್ರಾಮದ ರೈತ. ಮಂದ್ಸೂರು ಜಿಲ್ಲೆ ಸೀತಾಮರಿ ತಹಸಿಲ್‌ಗೆ ಸೇರಿದ್ದು ಆ ಗ್ರಾಮ. ಶಾಲೆಗೆ ಹೋಗಿಲ್ಲ. ಹಿಂದಿ ಅಕ್ಷರ ಕಲಿತಿದ್ದಾರೆ. ತಂದೆ ಇಲ್ಲ. ತಾಯಿ ಚಂದೂಬಾಯಿ. ಪತ್ನಿ ರಾಧಾ. ಮೂರು ತಿಂಗಳ ಹೆಣ್ಣುಮಗುವಿನ ತಂದೆ. ಸುಮಾರು ಮೂರು ಎಕರೆಯಷ್ಟು ಜಮೀನಿದೆ. ಗೋಧಿ, ಕಡಲೆ, ಜೋಳ, ಈರುಳ್ಳಿ, ಸೋಯಾ, ಅವರೆ ಬೆಳೆಯುತ್ತಾರೆ. ಬಿತ್ತನೆಯ ನಂತರ ಮೂರು ತಿಂಗಳು ಕಂಬಳಿ ವ್ಯಾಪಾರ ಮಾಡುತ್ತಾರೆ.

''ಇದರ ಮಾಲೀಕರು ಯಾರು ?''

''ನಾನೇ ಮಾಲೀಕ.'' ಎಂದು ಹೆಮ್ಮೆಯಿಂದ ಹೇಳುತ್ತಾರೆ ಜೈಸಿಂಗ್.

''ಎಷ್ಟು ಬಂಡವಾಳ ಹಾಕಿದ್ದೀರಿ ? ಅಂದರೆ ಕ್ಯಾಪಿಟಲ್ ?''

ಸ್ವಲ್ಪ ತಡಕಾಟದನಂತರ ಪ್ರಶ್ನೆ ಅರ್ಥ ಮಾಡಿಕೊಂಡು ''ನಾನೇನೂ ಅಷ್ಟು ದೊಡ್ಡ ಮಟ್ಟಿನ ವ್ಯಾಪಾರಿಯಲ್ಲ. ಬಸ್, ದಸ್-ಗ್ಯಾರಾ ಹಜಾರ್ !''

ಹರ್ಯಾಣದ ಪಾಣಿಪತ್‌ನಿಂದ, ಪಂಜಾಬಿನ ಲೂಧಿಯಾನಾ ಮುಂತಾದ ಕಡೆಯಿಂದ ಕಂಬಳಿ ತರಿಸುತ್ತಾರೆ. ಸಾಗಾಟದ ವೆಚ್ಚದಿಂದ ಅನಿವಾರ್ಯವಾಗಿಯೇ ಕಂಬಳಿಯ ಬೆಲೆ ಹೆಚ್ಚುತ್ತದೆ. ಜೈಸಿಂಗ್‌ರಂತೆ ನಾಲ್ಕೈದು ಮಂದಿ ಸಣ್ಣ ವ್ಯಾಪಾರಿಗಳು ಲಾರಿಯಲ್ಲಿ ಕಂಬಳಿ ತಂದಿಳಿಸಿ ಡೇರಾ ಹೂಡುತ್ತಾರೆ. ಮಳೆಯ ದಿನಗಳಲ್ಲಿ ಕಂಬಳಿ ಗಂಟುಗಳನ್ನು ರಕ್ಷಿಸಲು ಪರದಾಡಬೇಕಾಗುತ್ತದೆ.

ದಿನದ ವ್ಯಾಪಾರದನಂತರ, ಸಂಜೆಗೆ ಇವರ ಅಡಿಗೆ ಚಟುವಟಿಕೆ ಪ್ರಾರಂಭವಾಗುತ್ತದೆ. ಬೀದಿಯ ದೀಪದ ಬೆಳಕು. ರಸ್ತೆಯ ಬದಿಯ ನಲ್ಲಿಯಿಂದ ನೀರು ತರುತ್ತಾರೆ. ರೊಟ್ಟಿ, ದಾಲ್, ತರಕಾರಿ ಊಟ. ಮಧ್ಯೆ ಸಿನೆಮಾ ವಿಮರ್ಶೆ, ಊರಿನ ಸುದ್ದಿಗಳು, ಜೋಕುಗಳು, ಜನಪದ ಹಾಡುಗಳು, ಹರಟೆ, ನಗು. ರಸ್ತೆಯಂಚಿನಲ್ಲಿ ರಾತ್ರಿಯಿಡೀ ಸಂಚರಿಸುವ ವಾಹನಗಳ ಕಿವಿಗಡಚಿಕ್ಕುವ ಸದ್ದಿನಲ್ಲೂ ಗಡದ್ದು ನಿದ್ದೆ ಹೊಡೆಯುತ್ತಾರೆ. ದಿನಕ್ಕೊಂದೇ ಊಟ.

ಜೈಸಿಂಗ್‌ಗೆ ನಮ್ಮ ಇಡ್ಲಿ, ದೋಸೆ ಸುತರಾಮ್ ಸೇರುವುದಿಲ್ಲವೆಂದು ತಿಳಿದು ನನಗೆ ಆಶ್ಚರ್ಯವಾಯಿತು. ''ನಿದ್ದೆ ನಿದ್ದೆ ಬರ್‍ತಾವ್ !'' ಜೈಸಿಂಗ್ ಅಭಿನಯಿಸಿ ತೋರಿಸಿದಾಗ ನನಗೆ ನಗುಬಂತು. ಹಗಲಿಡೀ ಚಾ, ಬನ್ನು ಅವರ ಆಹಾರ.

ಅಷ್ಟು ದೂರದಿಂದ ಹೀಗೆ ಆರಾರು ತಿಂಗಳು ಬೆಂಗಳೂರಿನಲ್ಲಿ ಬೀಡು ಬಿಡುತ್ತಾರೆ. ಭಾರೀ ಸಂಪಾದನೆಯಾಗಬಹುದೆ ?

''ಪೂರಾ ದಿನ್ ತಿರುಗಾಡಿ ಹತ್ತು ಹನ್ನೆರಡು ಕಂಬಳಿ ಮಾರಿದರೆ ನೂರಿನ್ನೂರು ಸಿಗುತ್ತದೆ. ಆದರಲ್ಲಿ ಊಟದ ಖರ್ಚು ಕಳೆದರೆ, ಜೇಬಿಗೆ ನೂರು-ನೂರೈವತ್ತು.''

ಕೆಲವೊಮ್ಮೆ ಕುಳಿತಲ್ಲೇ ವ್ಯಾಪಾರವಾಗುತ್ತದೆ. ಒಮ್ಮೊಮ್ಮೆ ಇಡೀ ಹಗಲು ತಿರುಗಾಡಿದರೂ ಬರಿಗೈ. ಜೈಸಿಂಗ್ ಪ್ರತಿವಾರ ಡಿ.ಡಿ. ಮೂಲಕ ಮನೆಗೆ ಹಣ ಕಳಿಸುತ್ತಾರೆ. ದೂರವಾಣಿ ಮೂಲಕ ಊರಿನವರ ಕ್ಷೇಮ ಸಮಾಚಾರ ತಿಳಿದುಕೊಳ್ಳುತ್ತಾರೆ.

ಇಲ್ಲಿನ ಜನರು ಒಳ್ಳೆಯವರು, ಉಪದ್ರವ ಕೊಡುವವರಲ್ಲ ಎಂಬುದು ಅವರ ಅಭಿಪ್ರಾಯ. ಜೈಸಿಂಗ್ ಮುಂದಿನ ತಿಂಗಳು ಮಗಳನ್ನು ನೋಡಲು ಊರಿಗೆ ಹೋಗಲಿದ್ದಾರೆ. ಇಲ್ಲಿ ವ್ಯಾಪಾರ ಗಮನಿಸಲು ಅವರ ಚಿಕ್ಕಪ್ಪ ಈಗಾಗಲೇ ಊರಿನಿಂದ ಬಂದಿದ್ದಾರೆ.

ಬೆಂಗಳೂರಿಗೆ ಮತ್ತೆ ಚಳಿಗಾಲ ಬರುತ್ತದೆ...

ಕೆ. ಪಿ. ಸ್ವಾಮಿ



### ಹಣ್ಣಿನ ಕುಯಿಲು (ಕಾವ್ಯ)

ಮೂಲ : ರವೀಂದ್ರನಾಥ ಠಾಕೂರ್
ಅನುವಾದ : ಎಸ್. ಜಿ. ಮೈಸೂರು ಮಠ
**ಪುಟ : 168** **ಬೆಲೆ ರೂ. 60**
**ಸಿಡ್ ಪ್ರಕಾಶನ,** 461/ಇ. 7ನೇ ಕ್ರಾಸ್, 7ನೇ ಬ್ಲಾಕ್ ಪಶ್ಚಿಮ, ಜಯನಗರ ಬೆಂಗಳೂರು - 560 082.

ರವೀಂದ್ರನಾಥಠಾಕೂರರ 'ಫ್ರೂಟ್ ಗ್ಯಾದರಿಂಗ್' ಕವನವನ್ನು ಎಸ್. ಜಿ. ಮೈಸೂರು ಮಠರು ಇಂಗ್ಲಿಷಿನಿಂದ ಅನುವಾದ ಮಾಡಿದ್ದಾರೆ.

### ಕೀಟ ಜಗತ್ತಿಗೊಂದು ಕಿರುನೋಟ

ಕೆ. ಎಸ್. ರವಿಕುಮಾರ್
**ಪುಟ : 54** **ಬೆಲೆ : ರೂ. 45**
**ಕೈಂತಜೆ ಪ್ರಕಾಶನ,** ಪೆರಮುಗೇರು - 574 289

ಇದು ಕಿರಿಯರಿಗಾಗಿ ವಿಜ್ಞಾನ ಮಾಲಿಕೆಯ ಪುಸ್ತಕ. ನಾವು ಪ್ರತಿನಿತ್ಯ ಕಾಣುವ ಕೀಟಗಳ ಬಗ್ಗೆ ನಮಗೆಷ್ಟು ತಿಳಿದಿದೆ? ಕೀಟಗಳ ಬಗ್ಗೆ ಸರಳ ಭಾಷೆಯಲ್ಲಿ ವಿವರವಾಗಿ ಪರಿಚಯ ನೀಡುವ ಸಚಿತ್ರ ಕೃತಿ.




### ಮರಾಠಿ ದಲಿತ ಕಾವ್ಯ

ಡಾ॥ ಸರಜೂ ಕಾಟ್ಕರ್
**ಪುಟ : 38+125** **ಬೆಲೆ: ರೂ. 75**
**ಲೋಹಿಯ ಪ್ರಕಾಶನ,** 'ಕ್ಷಿತಿಜ' ಕಪ್ಪಗಲ್ಲು ರಸ್ತೆ, ಗಾಂಧಿನಗರ, ಬಳ್ಳಾರಿ - 583 103

ಮರಾಠಿ ಸಾಹಿತ್ಯ ಕ್ಷೇತ್ರದಲ್ಲಿ ಹೊಸ ಶೈಲಿಯ ಪ್ರತಿಭಟನಾ ಕವಿತೆ, ಕಥೆಗಳ ಮೂಲಕ ತಮ್ಮದೇ ವೈಶಿಷ್ಟ್ಯ ಮೂಡಿಸಿರುವ ಹದಿನೈದು ಮಂದಿ ದಲಿತ ಕವಿಗಳ ಎಪ್ಪತ್ತೈದು ಕವಿತೆಗಳನ್ನು ಡಾ॥ ಸರಜೂ ಕಾಟ್ಕರರು ಅನುವಾದಿಸಿದ್ದಾರೆ.





### ನೂರು ಸ್ವರ *(ಕಾದಂಬರಿ)*

ಉಮಾರಾವ್
**ಪುಟ: 10 +142** **ಬೆಲೆ : ರೂ. 60**
**ಪತ್ರಿಕೆ ಪ್ರಕಾಶನ,** ಬಸವನಗುಡಿ, ಬೆಂಗಳೂರು-560 004

ತನಗೆಂದು ಜೊತೆಗಾರನನ್ನು ಹುಡುಕುವ ಪ್ರಯತ್ನದಲ್ಲಿ ತನ್ನ ಸುತ್ತಲಿನ ಚಲನಶೀಲ ಬದುಕನ್ನು ಸೂಕ್ಷ್ಮವಾಗಿ ಗಮನಿಸಿ ಸ್ಪಂದಿಸುವ ಆಧುನಿಕ ಹೆಣ್ಣಿನ ಕಥೆ.



### ಗಝಲ್

ಸರಜೂ ಕಾಟ್ಕರ್
**ಪುಟ : 60** **ಬೆಲೆ: ರೂ. 35**
*(ಒಂದೊಂದು ಗಜಲಿಗೂ ಚಿತ್ರಗಳು)*
**ವೈಶಾಖ ಪ್ರಕಾಶನ** : 395, 1ನೇ ಮಹಡಿ, 9ನೇ ಮುಖ್ಯರಸ್ತೆ, ಹನುಮಂತನಗರ, ಬೆಂಗಳೂರು-19

ಬೀಗ ಜಡಿದರೂ ಬಾಯಿಗೆ ನಾನು
ಹಾಡುವವನಿದ್ದೇನೆ
ಬೇಡಿ ಹಾಕಿದರೂ ಕೈಗಳಿಗೆ ನಾನು
ಬರೆಯುವವನಿದ್ದೇನೆ.
ಬಂದೂಕು ಎದೆಗೆ ಹಿಡಿದರೂ ನಾನು ಮಾತಾಡುವವನಿದ್ದೇನೆ.
ಜೇಲಿಗೆ ದೂಡಿದರೂ ನನ್ನ ನಾನು ಕನಸು ಕಾಣುವವನಿದ್ದೇನೆ.

### ಧರೆ ಹೊತ್ತಿ ಉರಿದೀತು !

**(ಕವಿತೆಗಳು)** ಎ. ಎಂ. ಸಾಣಕರ
**ಪುಟ : 40+8** **ರೂ. 25**
**ಡಾ॥ ಬಾಬಾ ಸಾಹೇಬ ಅಂಬೇಡ್ಕರ ವಿಚಾರ ವೇದಿಕೆ,** ನಂ.11, ಸಿ.ಎಂ.ಸಿ. ಕಾಲನಿ, ಇಬ್ರಾಹಿಂಪುರ, ವಿಜಾಪುರ

ನಾವು ನಾವಾದಾಗ
ಅರಳು ಮಲ್ಲಿಗೆ ಹೂವಾದಾಗ
ನೀವೇಕೆ ಹಾವಾಗುವಿರಿ !
ಕಹಿ ಬೇವಾಗುವಿರಿ !!
ಅನುಜರೆ,
ಬರುತಿಹೆವು ನಾವು ದಾರಿಬಿಡಿ, ಹೊಸ ಬದುಕಿಗೆ ಜೀವಕೊಡಿ




### ನಾ ನಿಲ್ಲುವಳಲ್ಲ *(ವಿಮರ್ಶಾ ಸಂಕಲನ)*

ವಿ. ಚಂದ್ರಶೇಖರ ನಂಗಲಿ
**ಪುಟ : 14 + 252** **ಬೆಲೆ : ರೂ. 90**
**ಕನ್ನಡ ಸಂಘ,** ಕ್ರೈಸ್ಟ್ ಕಾಲೇಜು ಬೆಂಗಳೂರು - 560 029

ಸಾಹಿತ್ಯ ಸಿದ್ಧಾಂತಗಳು ಮತ್ತು ಸಾಹಿತ್ಯ ಪರಂಪರೆ ಹೀಗೆ ಎರಡು ಭಾಗಗಳಲ್ಲಿ ಇಪ್ಪತ್ತೈದು ಉತ್ತಮ ವಿಮರ್ಶಾ ಲೇಖನಗಳ ಸಂಕಲನ.






### ಚಿನ್ನದ ಬೆನ್ನೇರಿ *(ಬಿಡಿ ಲೇಖನಗಳು)*

ಪರಂಜ್ಯೋತಿ
**ಪುಟ : 120** **ಬೆಲೆ : ರೂ. 40**
**ಇಂಚರ ಪ್ರಕಾಶನ,** 167, 10ನೇ ಮುಖ್ಯರಸ್ತೆ, 3ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ, ಬೆಂಗಳೂರು - 560 058

ಪ್ರವಾಸಾನುಭವ, ವಿಡಂಬನೆ ಮತ್ತು ಪ್ರಬಂಧಗಳ ಸಂಕಲನ ಲೇಖನಗಳಿಗೆ ಹೊಂದಿಕೆಯಾಗುವ ಛಾಯಾಚಿತ್ರಗಳಿವೆ. ರೇಖಾಚಿತ್ರಗಳಿವೆ.



**ಮಹಿಳೆ - ಒಂದು ಅಧ್ಯಯನ**
*(ಲೇಖನ ಸಂಗ್ರಹ)*
ಡಾ|| ಜ್ಯೋತ್ಸ್ನಾ ಕಾಮತ್
**ಪುಟ : 104    ಬೆಲೆ : ರೂ. 30**
**ನವಕರ್ನಾಟಕ ಪಬ್ಲಿಕೇಶನ್ಸ್ ಪ್ರೈ. ಲಿ.**
ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ,
ಬೆಂಗಳೂರು - 560 001

ನಮ್ಮ ಶಾಸ್ತ್ರ ಗ್ರಂಥಗಳಲ್ಲಿ ಮಹಿಳೆಯರಿಗೆ ಅತ್ಯುನ್ನತ ಸ್ಥಾನ ನೀಡಲಾಗಿದ್ದರೂ ವಾಸ್ತವ ಅದಕ್ಕೆ ತದ್ವಿರುದ್ಧವಾಗಿತ್ತು. ಈಗ ಶಿಕ್ಷಣದ ಮೂಲಕ ಮಹಿಳೆಯರು ಜಾಗೃತರಾಗಿದ್ದಾರೆ. ಹಿಂದಿನ ಮತ್ತು ಇಂದಿನ ಮಹಿಳೆಯರ ಚಟುವಟಿಕೆಗಳ ಮೇಲೆ ಬೆಳಕು ಚೆಲ್ಲುವ ಕೃತಿ. ರೇಖಾಚಿತ್ರಗಳ ಸಹಿತ.

**ಪೇಟೆಂಟ್ : ವರವೋ ಶಾಪವೋ ?**
ಡಾ|| ಶರಣಬಸವೇಶ್ವರ ಅಂಗಡಿ
ಡಾ|| ಟಿ. ಎಸ್. ಚನ್ನೇಶ್
ಪುಟ : 64    ಬೆಲೆ : ರೂ. 18
**ನವಕರ್ನಾಟಕ ಪಬ್ಲಿಕೇಶನ್ಸ್ ಪ್ರೈ. ಲಿ.**
ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ
ಬೆಂಗಳೂರು - 560 001



ಈವರೆಗೆ ಅನ್ವೇಷಣೆ ಮತ್ತು ಉತ್ಪಾದನಾ ವಿಧಾನಗಳಿಗೆ, ಒಂದು ಸೀಮಿತ ಅವಧಿಗೆ, ಅನ್ವಯವಾಗುತ್ತಿದ್ದ ಪೇಟೆಂಟ್ ಇನ್ನು ಮುಂದೆ ಉತ್ಪನ್ನಗಳಿಗೂ ವಿಸ್ತರಿಸಲಿದೆ. ಆರ್ಥಿಕ ಜಾಗತೀಕರಣದ ಹಿನ್ನೆಲೆಯಲ್ಲಿ ಪೇಟೆಂಟ್ ಹಕ್ಕಿಗೆ ಸಂಬಂಧಿಸಿದಂತೆ ನಮ್ಮ ಕಾನೂನು ಏನು ಹೇಳುತ್ತದೆ ಎಂಬ ಚರ್ಚೆ ಇಲ್ಲಿ ನಡೆದಿದೆ.

**ಗ್ರಹಣ** - *ಖಗೋಳದಲ್ಲಿ ಕಣ್ಣಾಮುಚ್ಚಾಲೆ*
ಡಾ|| ಬಿ. ಎಸ್. ಶೈಲಜಾ
**ಪುಟ : 160    ಬೆಲೆ : ರೂ. 80**
**ಓರಿಯಂಟ್ ಲಾಂಗ್‌ಮನ್ ಲಿಮಿಟೆಡ್**
80/1, ಶೃಂಗಾರ್ ವಾಣಿಜ್ಯ ಸಂಕೀರ್ಣ
ಮಹಾತ್ಮ ಗಾಂಧಿ ರಸ್ತೆ, ಬೆಂಗಳೂರು - 560 001



ನಡುಹಗಲಲ್ಲಿ ಕತ್ತಲಾಗುವ ಅನುಭವ ಮರೆಯುವಂತಹುದಲ್ಲ. ಈ ಅದ್ಭುತ ಅನುಭವದಿಂದ ಕೆಲವರಿಗೆ ಆಶ್ಚರ್ಯ, ಕೆಲವರಿಗೆ ಭಯ. ಗ್ರಹಣಗಳ ಬಗ್ಗೆ ತಿಳಿವಳಿಕೆ ಹೆಚ್ಚಿರುವ, ಹೆಚ್ಚುತ್ತಿರುವ ಈ ದಿನಗಳಲ್ಲೂ ಬಾಗಿಲು ಕಿಟಕಿ ಮುಚ್ಚಿ ಮನೆಯಲ್ಲಿ ಮುದುಡಿಕೊಳ್ಳುವವರ ಸಂಖ್ಯೆ ಕಡಿಮೆಯೇನಲ್ಲ. ಗ್ರಹಣ ಕುರಿತು ಸರಳವಾಗಿ, ಸ್ವಾರಸ್ಯಕರವಾಗಿ, ಛಾಯಾಚಿತ್ರಗಳು, ರೇಖಾಚಿತ್ರಗಳು, ವ್ಯಂಗ್ಯಚಿತ್ರಗಳ ಸಹಿತ ವಿವರಿಸುವ ಪುಸ್ತಕ.



**ಯುರೋ-ದರ್ಶನ** *(ಪ್ರವಾಸ)*
ಹೇಮಲತಾ ಮಹಿಷಿ
**ಪುಟ : 184    ಬೆಲೆ ರೂ. 80**
**ಮನೋಹರ ಗ್ರಂಥಮಾಲಾ : ಲಕ್ಷ್ಮೀಭವನ**
ಸುಭಾಸ ರಸ್ತೆ, ಧಾರವಾಡ - 580 001

ಶ್ರೀಮತಿ ಹೇಮಲತಾ ಮಹಿಷಿ ತಮ್ಮಷ್ಟೇ ಉತ್ಸಾಹಿ ಗೆಳತಿಯೊಂದಿಗೆ ಹೊರಟು, ಯುರೋಪು ತಿರುಗಾಡಿ ಬಂದ ಅನುಭವವನ್ನು ಇಲ್ಲಿ ವಿವರಿಸಿದ್ದಾರೆ. ಈ ಕಾಲದಲ್ಲಿ ಇದೇನು ಸಾಹಸ ಎಂದು ಅನುಮಾನ ಪಡುವವರು ಸಹ ಇದನ್ನು ಓದಿದರೆ, ಇದೊಂದು ಸಾಹಸ ಯಾತ್ರೆಯೇ ಎಂದು ಒಪ್ಪುತ್ತಾರೆ.



**ಕನ್ನಡ ಹೋರಾಟಗಳು** : ಒಂದು ನೋಟ
ರಾ. ನಂ. ಚಂದ್ರಶೇಖರ
**ಪುಟ : 12+125    ಬೆಲೆ : ರೂ. 50**
**ಕನ್ನಡ ಗೆಳೆಯರ ಬಳಗ,** 6, 'ರಾಘವೇಂದ್ರ ಕಾಂಪ್ಲೆಕ್ಸ್',
2ನೇ ಅಡ್ಡ ರಸ್ತೆ ಸಿ.ಕೆ.ಸಿ.ಗಾರ್ಡನ್, ಬೆಂಗಳೂರು - 27

ಕರ್ನಾಟಕ ಏಕೀಕರಣದ ನಂತರವೂ ಕನ್ನಡ ಭಾಷೆಯನ್ನು, ಕನ್ನಡಿಗರನ್ನು ಉಪೇಕ್ಷಿಸುವ ಪ್ರಕರಣಗಳ ವಿರುದ್ಧ ಪ್ರತಿಭಟನೆಯಾಗಿ ರೂಪುಗೊಂಡಿದ್ದು ಕನ್ನಡ ಚಳುವಳಿ. ನಾನಾ ಕಾಲಘಟ್ಟಗಳಲ್ಲಿ ನಡೆದ ಚಳುವಳಿಯ ದಾಖಲೆ ಇದು.

**ಜೀವ ಜಾಲ ಕೆ. ಪುಟ್ಟಸ್ವಾಮಿ, ಕೃಪಾಕರ ಸೇನಾನಿ**
**ಪುಟ : 208    ಬೆಲೆ : ರೂ. 100**
**ಹಸಿರು ಪ್ರಕಾಶನ** 90, 16ನೇ ಅಡ್ಡರಸ್ತೆ, ನಾಲ್ಕನೇ ಹಂತ, ಜೆ. ಪಿ. ನಗರ, ಬೆಂಗಳೂರು - 560 078

ಪ್ರಾಣಿಗಳು, ಪಕ್ಷಿಗಳು ಮತ್ತು ಸಸ್ಯಗಳ ಕುರಿತಾದ ನಲವತ್ತನಾಲ್ಕು ಲೇಖನಗಳ ಸಂಗ್ರಹ. ಜೀವಜಾಲ ಆಧರಿಸಿರುವ ಸೂತ್ರವನ್ನು ವೈಜ್ಞಾನಿಕ ಪರಿಭಾಷೆಯ ಕಸರತ್ತಿಲ್ಲದೆ, ಕುತೂಹಲಕಾರಿ ದೃಷ್ಟಾಂತಗಳಿಂದ ನಿರೂಪಿಸಿರುವ ಪುಸ್ತಕ. ಪುಟ್ಟ ಲೇಖನಗಳಿಗೆ ಹೊಂದಿಕೆಯಾಗುವ ಚಿತ್ರಗಳಿವೆ.



**ಅಕ್ಷತ** *(ನಾವು ನಮ್ಮವರು, ರೀತಿ-ರಿವಾಜುಗಳು)*
ಡಾ|| ಕೃಷ್ಣಾನಂದ ಕಾಮತ್
**ಪುಟ : 120    ಬೆಲೆ : ರೂ. 38**
**ನವಕರ್ನಾಟಕ ಪಬ್ಲಿಕೇಶನ್ಸ್ ಪ್ರೈ. ಲಿ.** ಬೆಂಗಳೂರು -1

ನಮ್ಮೊಂದಿಗೆ ಬದುಕುತ್ತಿರುವ ಜನರ ಮತ್ತು ನಾಗರಿಕತೆಯಿಂದ ದೂರವಾಗಿ ಕಾಡಿನ ಮಧ್ಯೆ ಜೀವಿಸುತ್ತಿರುವ ಆದಿವಾಸಿಗಳ ಬದುಕು ಬವಣೆಯ, ಅವರ ಸಂಪ್ರದಾಯ, ರೀತಿ ರಿವಾಜುಗಳ, ನಿಧಾನವಾಗಿಯಾದರೂ ಅವರಲ್ಲಾಗುತ್ತಿರುವ ಬದಲಾವಣೆಗಳನ್ನೂ ಸಹಾನುಭೂತಿಯಿಂದ ರಚಿಸಲಾಗಿರುವ ಸಚಿತ್ರಕೃತಿ.





**ವಿಚಾರವಾಹಿನಿ** (ಲೇಖನ ಸಂಗ್ರಹ)
ಪ್ರೊ|| ದೊಡ್ಡರಂಗೇಗೌಡ
**ಪುಟ : 144    ಬೆಲೆ : ರೂ. 50**
**'ಕನ್ನಡ ಕಣ್ಮಣಿ'**, 124, ಕೃಷ್ಣಾ ಬಿಲ್ಡಿಂಗ್, ಅವೆನ್ಯೂ ರಸ್ತೆ,
ಬೆಂಗಳೂರು - 560 002

ನಾವು ಬದುಕುತ್ತಿರುವ ಸಮಾಜದಲ್ಲಿ ನಿತ್ಯವೂ ಸಂಭವಿಸುವ ಯಾವುದೇ ಘಟನೆಗಳಿಗೆ ಸೂಕ್ಷ್ಮ ಮನಸ್ಸಿನ ಲೇಖಕನ ಪ್ರತಿಕ್ರಿಯೆ ಏನು ಎಂಬುದು ಈ ಸಂಕಲನದಲ್ಲಿರುವ ಲೇಖನಗಳ ಸಾರಾಂಶ. ಜಿಡ್ಡುಗಟ್ಟಿರುವ ಸಮಾಜದ ಮನಸ್ಸಿಗೆ ಚಿಕಿತ್ಸೆ ಮಾಡುವ ಪ್ರಯತ್ನ



# ದೊಡ್ಡವರ ಒಂದು ಜಗಳ



'ಭಾರತದ ಇಂದಿನ ಪತ್ರಿಕೋದ್ಯಮ ತಮಗೆ ಬೇಕಾದ ಹಾಗೂ ಬೇಕಾದವರ ತುತ್ತೂರಿ ಊದಲು ಇರುವ ಪತ್ರಿಕೋದ್ಯಮ' ಎಂಬುದು ಬಾಬಾಸಾಹೇಬ ಅಂಬೇಡ್ಕರ್ ಅವರ ಖಚಿತ ನಿಲುವಾಗಿತ್ತು. ಅಂಬೇಡ್ಕರ್ ಅವರು ಈ ಮಾತನ್ನು ಆಡುವ ಮುಂಚೆ ನಾಲ್ಕು ಪತ್ರಿಕೆಗಳನ್ನು ನಡೆಸಿದ್ದರು. ತುತ್ತೂರಿ ಊದುವ ಪತ್ರಿಕೋದ್ಯಮದೊಂದಿಗೆ ತಿಕ್ಕಾಟ ನಡೆಸಿದ್ದರು. ಗುಡಿಗೆ ದಲಿತರಿಗೆ ಪ್ರವೇಶ ನೀಡದ, ಸಾರ್ವಜನಿಕ ಬಾವಿಯಲ್ಲಿ ದಲಿತರು ನೀರು ಕುಡಿಯದಂತೆ ಮಾಡುವ, ಸಾಮೂಹಿಕ ಭೋಜನವನ್ನು ನಿರಾಕರಿಸುವ ಪತ್ರಿಕೋದ್ಯಮ ಅವರಿಗೆ ಗೊತ್ತಿತ್ತು. ಅಷ್ಟೇ ಅಲ್ಲ, ದಲಿತರು ಎಂದರೆ ಸಾಕು ಮಾರು ದೂರ ನೆಗೆದು ನಿಲ್ಲುತ್ತಿದ್ದ 'ಕೇಸರಿ' ಪತ್ರಿಕೆಯನ್ನು ಅಂಬೇಡ್ಕರ್ ಬಟಾಬಯಲು ಮಾಡಿದ್ದರು.

ಇದು ಮತ್ತೆ ನನಗೆ ನೆನಪಾದದ್ದು 'ಹೊಸತು'ವಿನ ಮೊದಲ ಸಂಚಿಕೆಯಲ್ಲಿ ಎಚ್. ಎಸ್. ಗೋಪಾಲರಾವ್ ಅವರ ಬಾಲಗಂಗಾಧರ ತಿಲಕ್ ಕುರಿತ ಬರಹವನ್ನೋದಿ.

''ಕೇಸರಿ ಪತ್ರಿಕೆ ಸತ್ಯದ ಹರಿಕಾರನಾಗಿತ್ತು.'' 'ಕೇಸರಿಯ ಮೂಲಕ ಮಾತ್ರವಲ್ಲದೆ ಗಣೇಶೋತ್ಸವ ಮತ್ತು ಶಿವಾಜಿ ಉತ್ಸವಗಳ ಮೂಲಕವೂ ತಿಲಕರು ಇತಿಹಾಸದ ಪುಟಗಳಲ್ಲಿ ಸೇರಿದ್ದಾರೆ; 'ಇತಿಹಾಸದಲ್ಲಿ ತಿಲಕರು ಎಂದಾಕ್ಷಣ ನೆನಪಿಗೆ ಬರುವುದು 'ಕೇಸರಿ', ಗಣೇಶೋತ್ಸವ ಮತ್ತು 'ಹೋಂ ರೂಲ್' ಎನ್ನುತ್ತಾರೆ ಗೋಪಾಲರಾವ್.

ಗಣೇಶೋತ್ಸವ, ಶಿವಾಜಿ ಉತ್ಸವ, ಸ್ವರಾಜ್ಯ ನನ್ನ ಆಜನ್ಮಸಿದ್ಧ ಹಕ್ಕು ಇತ್ಯಾದಿಗಳನ್ನು ಬದಿಗಿಟ್ಟು ಸಧ್ಯಕ್ಕೆ 'ಕೇಸರಿ' ಪತ್ರಿಕೆ ಸಾರ್ವಜನಿಕ ಬದುಕಿನಲ್ಲಿ ನಿರ್ವಹಿಸಿದ ಪಾತ್ರ ಏನು? ಎಂಬುದನ್ನು ತಿಳಿಯಬೇಕಾದರೆ 'ದೊಡ್ಡವರ ಒಂದು ಜಗಳ'ವನ್ನು ತಿಳಿಯಬೇಕು.

ಡಾ|| ಅಂಬೇಡ್ಕರ್ ೧೯೨೦ ಜುಲೈ ೩೧ರಂದು 'ಮೂಕನಾಯಕ' ಪತ್ರಿಕೆಯನ್ನು ಆರಂಭಿಸಿದರು. ಈ ಪತ್ರಿಕೆಯ ಜಾಹಿರಾತನ್ನು 'ಕೇಸರಿ'ಯಲ್ಲಿ ಪ್ರಕಟಿಸಲು 'ಲೋಕಮಾನ್ಯ' ಬಾಲ ಗಂಗಾಧರ ತಿಲಕ್ ನಿರಾಕರಿಸಿದರು. ಉಚಿತವಾಗಿ ಅಲ್ಲ, ನಿಮ್ಮ ಜಾಹಿರಾತು ದರ ಏನಿದೆಯೋ ಅದನ್ನು ಪಡೆದೇ ಪ್ರಕಟಿಸಿ ಎಂದು ಅಂಬೇಡ್ಕರ್ ತಿಳಿಸಿದಾಗಲೂ ತಿಲಕ್ 'ಮೂಕನಾಯಕ'ನ ಜಾಹಿರಾತು ಪ್ರಕಟಿಸಲು ಒಪ್ಪಲಿಲ್ಲ.

ಈ ಪ್ರಕರಣವೇ ಅಂಬೇಡ್ಕರ್ ಅವರು ಭಾರತದ ಪತ್ರಿಕೋದ್ಯಮದ ರೀತಿಯನ್ನು ಒರೆಗಿಕ್ಕಲೂ ಕಾರಣವಾಯಿತು. 'ಮೂಕನಾಯಕ' ಕೇಸರಿಯಿಂದ ಅನುಭವಿಸಿದ ಅವಮಾನದಿಂದಾಗಿಯೇ ಅಂಬೇಡ್ಕರ್ ಬರೆದ ಪ್ರಥಮ ಸಂಪಾದಕೀಯ ಪತ್ರಿಕೋದ್ಯಮದ ಈ ಅಸಮಾನತೆಯತ್ತ ಬೊಟ್ಟುಮಾಡಿತು. ''ಈಗಿನ ಪತ್ರಿಕೆಗಳ ಹಿತಾಸಕ್ತಿಯೇ ಬೇರೆ. ಪ್ರಸ್ತುತ ಪತ್ರಿಕೆಗಳು ಕೇವಲ ಕೆಲವು ಜಾತಿಗಳ ಹಿತಾಸಕ್ತಿಗಾಗಿ ಮಾತ್ರ ಸೀಮಿತವಾಗಿವೆ. ಅದೇ ಅನ್ಯಜಾತಿಗಳ ಬಗ್ಗೆ ಅವುಗಳಿಗೆ ಕಿಂಚಿತ್ತೂ ಕಾಳಜಿ ಇಲ್ಲ. ಇದೊಂದು ಅಸಮಾನತೆಯ ದೇಶ. ಅದರಲ್ಲೂ ಮುಖ್ಯವಾಗಿ ಬ್ರಾಹ್ಮಣೇತರರನ್ನು ಹಾಗೂ ದಲಿತ ವರ್ಗವನ್ನು ಅಧಿಕಾರ ಹಾಗೂ ಜ್ಞಾನದಿಂದ ವಂಚಿಸಿ ಅವುಗಳ ಪ್ರಗತಿಯನ್ನು ಕುಂಠಿತಗೊಳಿಸುವುದೇ ಈ ಪತ್ರಿಕೆಗಳ ಉದ್ದೇಶವಾಗಿರುತ್ತದೆ. ಬಡತನ, ದೌರ್ಬಲ್ಯ ಮತ್ತು ಅಜ್ಞಾನ ದಲಿತವರ್ಗದ ಬಹುದೊಡ್ಡ ವೈರಿಗಳಾಗಿವೆ.''

ಡಾ|| ಅಂಬೇಡ್ಕರ್ ಸಾಮಾಜಿಕ ಜೀವನವನ್ನು ಪ್ರವೇಶಿಸಿದ್ದೇ ಪತ್ರಿಕಾ ಲೇಖನಗಳು ಹಾಗೂ ಪತ್ರಿಕೆಗಳನ್ನು ಆರಂಭಿಸುವುದರ ಮೂಲಕ. 'ಕೇಸರಿ' ಪತ್ರಿಕೆಯ ಜಾಹೀರಾತು ಪ್ರಕಟಿಸುವ ಮಾತಿರಲಿ ಅಂಬೇಡ್ಕರ್ ಅವರು ಬರೆದ ಲೇಖನಗಳನ್ನು ಪ್ರಕಟಿಸಲೇ ಇಲ್ಲ ಎಂಬುದು 'ಕೇಸರಿ' ಪತ್ರಿಕೋದ್ಯಮವನ್ನು ಸಾರುತ್ತಿತ್ತು.

ಡಾ|| ಅಂಬೇಡ್ಕರ್ ಅವರ ವಿಚಾರಗಳ ಬಗ್ಗೆ ಖಚಿತತೆಯಿಂದ ಮಾತನಾಡಬಲ್ಲ ಡಾ|| ಮ.ನ. ಜವರಯ್ಯ ಅವರು ಅಂಬೇಡ್ಕರ್ ಅವರ ಪತ್ರಿಕೋದ್ಯಮದ ಬಗ್ಗೆಯೂ ವಿವರವಾಗಿ [illegible] ತಿಳಿಸಿದ್ದಾರೆ. 'ಅಂಬೇಡ್ಕರ್ ವಿಚಾರ ಸಾಹಿತ್ಯ' ಕೃತಿಯಲ್ಲಿ 'ಪತ್ರಕರ್ತರಾಗಿ ಡಾ|| ಅಂಬೇಡ್ಕರ್' [illegible] ಬಾಲ ಗಂಗಾಧರ ತಿಲಕ್, ಕೇಸರಿ ಹಾಗೂ ಆ ಕಾಲದ [illegible] ಪತ್ರಿಕೆಗಳ ಬಗ್ಗೆ ಇನ್ನಷ್ಟು ಮತ್ತಷ್ಟು ಮಾಹಿತಿಯನ್ನು ನೀಡುತ್ತದೆ.

'ದಲಿತರ ಕುರಿತು ಪತ್ರಿಕೆಗಳು' [illegible] ಈ ಕಾಲಕ್ಕೆ [illegible] ನೀಡುವ ವಿಚಾರವಾಗಿತ್ತು. ಪತ್ರಿಕೋದ್ಯಮದಲ್ಲಿ ದಲಿತರಿಗೆ ದನಿ ಸಿಕ್ಕಿದ್ದೇ ಇಲ್ಲ. ಈ ವಿಷಯದಲ್ಲಿ ಅನ್ಯ ಪತ್ರಿಕೆಗಳ ಮಾತಂತಿರಲಿ, ಆ ಯುಗದ ಅತ್ಯಂತ ಪ್ರಗತಿಪರರೆಂದು ಖ್ಯಾತನಾಮರಾಗಿದ್ದ ಸ್ವತಃ ಬಾಲಗಂಗಾಧರ ತಿಲಕರ 'ಕೇಸರಿ' ಪತ್ರಿಕೆ ಕೂಡ ಇದರಿಂದ ಹೊರತಾಗಿರಲಿಲ್ಲ ಎನ್ನುತ್ತಾರೆ ಮ.ನ.ಜ.

ಅಂಬೇಡ್ಕರ್‌ರು 'ಬಹಿಷ್ಕೃತ ಭಾರತ'ದಲ್ಲಿ 'ಬೆಂಕಿಯಲ್ಲಿ ತುಪ್ಪ ಸುರಿಯುವ ಕೇಸರಿಯ ಗುಣ', 'ತಿಲಕರ ಪರಂಪರೆಯ ಅಂತರಂಗ' ಎಂಬ ಲೇಖನಗಳಲ್ಲಿ ಕೇಸರಿ ಹಾಗೂ ತಿಲಕರ ಪತ್ರಿಕೋದ್ಯಮ ದೃಷ್ಟಿಯನ್ನು ಹೊರಗೆಳೆದರು. ಅಸ್ಪೃಶ್ಯತಾ ನಿವಾರಣೆಯ ಸಾರ್ವಜನಿಕ ಮನವಿಪತ್ರಕ್ಕೆ ಸಹಿಹಾಕಲು ನಿರಾಕರಿಸಿದ, ಸಹಭೋಜನವನ್ನು ಗೇಲಿ ಮಾಡಿದ್ದ ತಿಲಕರ ಮುಖಗಳನ್ನು ಮನದಟ್ಟು ಮಾಡಿಕೊಟ್ಟರು. ಆ ಕಾಲದಲ್ಲಿ ತಿಲಕರಷ್ಟೇ ಪ್ರಖ್ಯಾತರಾಗಿದ್ದ ಆಗರ್‌ಕರ್ ಅವರು ಸಮಾಜ ಸುಧಾರಣೆ ಅತ್ಯಂತ ಅವಶ್ಯಕವೆಂದು ವಾದಿಸಿದ ಕಾರಣಕ್ಕಾಗಿ ತಿಲಕರು ತಮ್ಮ 'ಕೇಸರಿ' ಪತ್ರಿಕೆಯ ಸಂಪಾದಕತ್ವದಿಂದಲೇ ಅವರನ್ನು ಕಿತ್ತುಹಾಕಿದ, ತದನಂತರ ಸ್ವತಃ ಆಗರ್‌ಕರ್ ಅವರೇ 'ಸುಧಾರಕ' ಎಂಬ ಪತ್ರಿಕೆಯನ್ನು ಆರಂಭಿಸಿದ್ದು, ಅದಕ್ಕಾಗಿ ಅಗರ್‌ಕರ್‌ರಿಗೆ ತಿಲಕರ ಅನುಯಾಯಿಗಳು ಕೊಲೆ ಬೆದರಿಕೆ ಹಾಕಿದ್ದು ಮುಂತಾದುವೆಲ್ಲ ಚರಿತ್ರೆಯಲ್ಲಿ ದಾಖಲಾಗಿರುವಂತೆಯೇ, ಅಂಬೇಡ್ಕರ್‌ರ 'ಬಹಿಷ್ಕೃತ ಭಾರತ' ಪತ್ರಿಕೆಯ ಸಂಚಿಕೆಗಳಲ್ಲೂ ದಾಖಲಾಗಿರುವುದನ್ನು ಕಾಣಬಹುದಾಗಿದೆ' (ಮ.ನ.ಜ.)

'ಮಹಾಡ್ ಸತ್ಯಾಗ್ರಹ' ಎಂದೇ ಹೆಸರಾದ ೧೯೨೭ರ ರಾಯಘಡ ಜಿಲ್ಲೆಯ ಮಹಾಡ್‌ನ ಚೌದಾರ್ ಕೆರೆ ಹಗರಣಕ್ಕೆ ಸಂಬಂಧಿಸಿದಂತೆ ತಿಲಕರ 'ಕೇಸರಿ' ಅನುಸರಿಸಿದ ನೀತಿ 'ಕೇಸರಿ ಪತ್ರಿಕೋದ್ಯಮ'ವೇ ಆಗಿತ್ತು. ಚೌದಾರ್ ಕೆರೆ ನೀರನ್ನು ಉಪಯೋಗಿಸಲು ತಮಗೆ ಹಕ್ಕಿದೆ ಎಂದು ದಲಿತರು ಸಾರಿದಾಗ ತರಂಗಗಳೆದ್ದವು. ಕೇಸರಿ ಪತ್ರಿಕೆಯ ಸಂಪಾದಕರು ಖುದ್ದಾಗಿ ಪುಣೆಯಿಂದ ಮಹಾಡಕ್ಕೆ ಹೋಗಿ ಅಲ್ಲಿಯ ನಾಗರಿಕರ ಸಭೆ ಕರೆದು ಅಸ್ಪೃಶ್ಯರ ಸತ್ಯಾಗ್ರಹಕ್ಕೆ ವಿರೋಧ ಮಾಡದಿರುವ ಬಗ್ಗೆ ಹಿಂದೂ ಮಹಾಸಭೆಯ ಅಸಮಾಧಾನವನ್ನು ನಿವೇದಿಸಿದರು ಎಂದು ಬಹಿಷ್ಕೃತ ಭಾರತದ ಲೇಖನದಲ್ಲಿ ಅಂಬೇಡ್ಕರ್ ಬರೆದಿದ್ದರು.

ಈ ಕೆರೆ ನೀರಿನ ಹಗರಣಕ್ಕೆ ಸಂಬಂಧಿಸಿದಂತೆಯೇ ಡಾ. ಅಂಬೇಡ್ಕರ್ 'ಮನುಸ್ಮೃತಿ'ಯನ್ನು ಸುಟ್ಟುಹಾಕಿದರು. ಆಗ ಮರಾಠಿ ಪತ್ರಿಕೆಗಳು ಅಂಬೇಡ್ಕರ್ ಅವರ ವಿರುದ್ಧ ಮುಗಿಬಿದ್ದವು. 'ಮನುಸ್ಮೃತಿಯನ್ನು ಸುಟ್ಟು ಅಂಬೇಡ್ಕರ್ ಸಾಧಿಸಿದ್ದೇನು ?' ಎಂದು ಪ್ರಶ್ನಿಸಿದವು. ಆಗ ಅಂಬೇಡ್ಕರ್ 'ಅಸಹಕಾರ ಚಳವಳಿಯ ಕಾಲಕ್ಕೆ ವಿದೇಶಿ ಬಟ್ಟೆಗಳನ್ನು ಸುಟ್ಟು ಗಾಂಧಿಯವರು ಸಾಧಿಸಿದ್ದೇನು ? ಖಾ-ಮಾಲಿನ ವಿವಾಹ ಪ್ರಕರಣದಲ್ಲಿ ಜ್ಞಾನ ಪ್ರಕಾಶದ ಹೋಲಿ ಮಾಡಿದ ಜನರು ಏನನ್ನು ಸಾಧಿಸಿದರು ? ರಾಜಕೀಯ ಸುಧಾರಣೆಗಳ ವಿಚಾರಣೆ ಮಾಡಲು ಬಂದ ಸೈಮನ್ ಕಮಿಷನ್‌ನ ಮೇಲೆ ಬಹಿಷ್ಕಾರ ಹಾಕಿದ ಹಿಂದೂಗಳು ಏನನ್ನು ಸಾಧಿಸಿದರು ? ಮಿಸ್ ಮೇಯೋ ಬರೆದ 'ಮದರ್ ಇಂಡಿಯಾ' ಪುಸ್ತಕವನ್ನು ನ್ಯೂಯಾರ್ಕ್‌ನಲ್ಲಿ ಸುಟ್ಟು ಬೂದಿ ಮಾಡಿದ ಹಿಂದೂಗಳು ಅದರಿಂದ ಏನನ್ನು ಸಾಧಿಸಿದರು ?' ಎಂದು ಪ್ರಶ್ನಿಸಿದರು. 'ವಿದೇಶಿ ಬಟ್ಟೆಗಳನ್ನು ಸುಟ್ಟು, ಜ್ಞಾನ ಪ್ರಕಾಶ ಅಥವಾ ಮಿಸ್ ಮೇಯೋ ಅವರ ಪುಸ್ತಕದ ಹೋಮ ನಡೆಸಿ ಅಥವಾ ಸೈಮನ್ ಕಮಿಷನ್ ಮೇಲೆ ಬಹಿಷ್ಕಾರ ಹಾಕಿ ಹಿಂದೂಗಳು ಏನನ್ನು ಸಾಧಿಸಬೇಕಾಗಿದೆಯೋ, ಅದನ್ನೇ ನಾವು ಮನುಸ್ಮೃತಿಯನ್ನು ಸುಟ್ಟು ಸಾಧಿಸಬೇಕಾಗಿದೆ' ಎಂದು ಬಹಿಷ್ಕೃತ ಭಾರತದಲ್ಲಿ ಬರೆದರು. ಭಾರತದ ಪತ್ರಿಕೆಗಳು ತಮ್ಮನ್ನು ಜನತೆಯ ಹೊಣೆಗಾರಿಕೆಯ ಸಲಹೆಗಾರರನ್ನಾಗಿ ಭಾವಿಸಿಲ್ಲ. ಯಾವುದೇ ಉದ್ದೇಶಗಳಿಂದಲೂ ಬಣ್ಣ ಲೇಪಿಸಿಕೊಳ್ಳದ ಸುದ್ದಿಯನ್ನು ನೀಡುವುದು, ಸಮುದಾಯಕ್ಕೆ ಒಳಿತನ್ನು ಉಂಟುಮಾಡುವ ದೃಷ್ಟಿಕೋನವನ್ನು ನೀಡುವುದು, ಎಷ್ಟೇ ದೊಡ್ಡದಾದರೂ ತಪ್ಪುದಾರಿಗಿಳಿದಿದ್ದನ್ನು ನಿರ್ಭಯವಾಗಿ ತಿದ್ದುವುದು ತನ್ನ ಪ್ರಥಮ ಕರ್ತವ್ಯ ಎಂದು ಭಾರತ ಪತ್ರಿಕೋದ್ಯಮ ಭಾವಿಸಿಲ್ಲ' ಎಂದು ಅಂಬೇಡ್ಕರ್ ವಿಷಾದಿಸಿದ್ದರು.

- ಕಿನ್ನರಿ ಬೊಮ್ಮಯ್ಯ

# ಸಹಮತಕ್ಕೆ ವಿರೋಧ

'ಸಹಮತ' ಎಂಬುದೊಂದು ಸಾಂಸ್ಕೃತಿಕ ಸಂಸ್ಥೆ. ದೆಹಲಿ ಅದರ ಮೂಲಕೇಂದ್ರವಾದರೂ ದೇಶವ್ಯಾಪ್ತಿ ಚಟುವಟಿಕೆಗಳನ್ನು ಅದು ಹಮ್ಮಿಕೊಳ್ಳುತ್ತದೆ. ಮತಧರ್ಮದ ಹೆಸರಿನಲ್ಲಿ ಸಮಾಜದ ವಿಭಜನೆಗೆ ಕಾರಣವಾಗುವವರನ್ನೆಲ್ಲಾ ಅದು ಟೀಕಿಸುತ್ತದೆ, ವಿವಿಧ ಮಾಧ್ಯಮಗಳ ಮುಖಾಂತರ ಸಾರ್ವಜನಿಕರ ಜೊತೆ ಸಂವಾದ ಬೆಳೆಸುತ್ತದೆ. ಪ್ರಾಚೀನ ಇತಿಹಾಸದಿಂದ ಹಿಡಿದು ವರ್ತಮಾನದ ಸನ್ನಿವೇಶಗಳವರೆಗೆ ಎಲ್ಲವನ್ನೂ ತಾರ್ಕಿಕ ಮೂಸೆಯಲ್ಲಿ ವಿಶ್ಲೇಷಿಸಲು ಯತ್ನಿಸುವುದು ಆ ಸಂಸ್ಥೆಯ ಆಶಯ. ಕಲಾವಿದರ ಚಿತ್ರಣಗಳು, ಛಾಯಾಚಿತ್ರಗಳು, ನಾಟಕ, ಸಿನಿಮಾ, ಕರಪತ್ರ, ಪುಸ್ತಿಕೆ, ಹೀಗೆ ವಿವಿಧ ಪ್ರಕಾರಗಳಲ್ಲಿ ಜನರೊಂದಿಗೆ ಸ್ಪಂದಿಸುವ ಈ ಸಂಸ್ಥೆಯನ್ನು ಧಾರ್ಮಿಕ ಡಾಂಭಿಕತೆಗೆ ಕಟ್ಟುಬಿದ್ದವರು ತೀವ್ರವಾಗಿ ವಿರೋಧಿಸುತ್ತಾರೆ.

'ಸಹಮತ'ದೊಡನೆ ಭಿನ್ನಮತ ಇರಿಸಿಕೊಳ್ಳುವುದು ಅಸಹಜವಲ್ಲ. ಅದಕ್ಕೆ ಯಾರದೂ ಅಡ್ಡಿಯಿಲ್ಲ. ಸಂಘ ಪರಿವಾರದ ಅಭಿಪ್ರಾಯ, ಕಾರ್ಯವಿಧಾನ ಮತ್ತು ತಂತ್ರವನ್ನು 'ಸಹಮತ' ವಿರೋಧಿಸುವಂತೆ 'ಸಹಮತ'ದ ಆಯಾಮಗಳನ್ನು ಸಂಘ ಪರಿವಾರ ವಿರೋಧಿಸಬಹುದು. ಅದಕ್ಕೆ ತನ್ನದೇ ಪ್ರಣಾಲಿಕೆಯನ್ನು ರೂಪಿಸಬಹುದು. ಅಭಿಪ್ರಾಯಗಳ ನಡುವಣ ಸಂಘರ್ಷಕ್ಕೆ ಯಾವಾಗಲೂ ಅವಕಾಶವಿರಬೇಕು.

ಆದರೆ ಸಂಘ ಪರಿವಾರದ ಅಸಹನೆ ಇಂತಹ ವಿಧಾನವನ್ನು ಮಾನ್ಯ ಮಾಡುವುದಿಲ್ಲ. ಅವರು ಹೇಳಿದ್ದನ್ನು ವಿರೋಧ ಮಾಡಿದವರಿಗೆ ಅದು ಸ್ವತಂತ್ರವಾಗಿ ಶಿಕ್ಷೆ ವಿಧಿಸುತ್ತದೆ, ಬುದ್ಧಿ ಕಲಿಸುತ್ತದೆ! ಅಂದರೆ, ಹಿಂಸಾಚಾರದಲ್ಲಿ ತೊಡಗುತ್ತದೆಯೆಂದರ್ಥ. ಈ ಸ್ವಾತಂತ್ರ್ಯವನ್ನು ಅವರಿಗೆ ಕೊಟ್ಟವರಾರು ? ಕಾನೂನು ಸೂತ್ರಗಳು ಅವರಿಗೆ ಅನ್ವಯವಾಗುವುದಿಲ್ಲವೆ? ನಮ್ಮ ಪೊಲೀಸರ ವರ್ತನೆ ನೋಡಿದರೆ ಅವರಿಗೆ ಅದು ಅನ್ವಯವಾಗುವುದಿಲ್ಲವೆಂಬ ತೀರ್ಮಾನ ಅನಿವಾರ್ಯ!

ಹಿಂದೆಲ್ಲಾ ಈ ಪರಿವಾರದವರು ಕಲಾವಿದರ ಚಿತ್ರಪ್ರದರ್ಶನಗಳನ್ನು ಹಾಳುಗೆಡವಿದ್ದಾರೆ, ಸಿನಿಮಾ ಮಂದಿರಗಳಿಗೆ ಬೆಂಕಿ ಇಟ್ಟಿದ್ದಾರೆ, ಆಟದ ಮೈದಾನಗಳನ್ನು ಅಗೆದು ಹಾಕಿದ್ದಾರೆ, ಸಾಂಸ್ಕೃತಿಕ ಕಾರ್ಯಕರ್ತರ ಮೇಲೆ ಹಲ್ಲೆ ನಡೆಸಿದ್ದಾರೆ. ವಾಜಪೇಯಿ - ಬಾಳಠಾಕ್ರೆ - ಕಲ್ಯಾಣ ಸಿಂಗ್ - ಉಮಾ ಭಾರತಿ - ಆಡ್ವಾನಿ ಮುಂತಾದವರೆಲ್ಲಾ ಇದಕ್ಕೆ ಕಡಿವಾಣ ಹಾಕುವಂಥವರಲ್ಲ; ಬದಲಾಗಿ ಅವರೇ ಪ್ರಚೋದನೆ ನೀಡಿ ವಾನರ ಸೈನ್ಯವನ್ನು ಕಟ್ಟುವ ಮುಂದಾಳುಗಳಾಗಿದ್ದಾರೆ. ಈ ಪರಿವಾರದವರಂತೆ ಇತರರೂ ನಡೆಯಲಾರಂಭಿಸಿದರೆ ದೊಡ್ಡ ಅಂತರ್ಯುದ್ಧವೇ ನಡೆದುಹೋಗಬಹುದೇನೋ!

ಇತ್ತೀಚೆಗೆ ಮೈಸೂರಿನಲ್ಲಿ 'ಸಹಮತ' ಚಿತ್ರ ಪ್ರದರ್ಶನವೊಂದನ್ನು ಏರ್ಪಡಿಸಿತ್ತು. ಭಿತ್ತಿ ಚಿತ್ರಗಳು, ಛಾಯಾಚಿತ್ರಗಳು, ಮುಂತಾದ ಪರಿಕರಗಳು ಅಲ್ಲಿದ್ದವು. ಉದ್ಘಾಟನೆಯ ಮುಂದಿನ ದಿನ ಸಂಘ ಪರಿವಾರದವರು ಪ್ರದರ್ಶನ ನಡೆಸಕೂಡದೆಂದು ತಾಕೀತು ಮಾಡಲಾರಂಭಿಸಿದರು. ಕುಂಬಳಕಾಯಿ ಕಳ್ಳನಿಗೆ ಬೇರೆಯವರ ಕಟ್ಟೆಚ್ಚರಕ್ಕಿಂತಲೂ ಹೆಚ್ಚಿನ ಆತಂಕ ಅಲ್ಲವೆ! ಅವರು ನಡೆಸುವ ಪ್ರದರ್ಶನಗಳಿಗೆ ಅಡ್ಡಿಯೊಡ್ಡಿದರೆ ಅವರು ಹೇಗೆ ಪ್ರತಿಕ್ರಿಯಿಸಬಹುದು?

ನಮ್ಮ ರಾಜ್ಯದಲ್ಲಿ ನಿಷ್ಕ್ರಿಯವಾದ ಸರ್ಕಾರವೊಂದಿದೆ, ಸ್ವೇಚ್ಛೆಯಿಂದ ವರ್ತಿಸುವ ಪೊಲೀಸ್ ದಳಗಳಿವೆ. 'ಸಹಮತ'ದ ಪ್ರದರ್ಶನ ಆಯೋಜಿಸಿದ್ದವರಿಗೆ ಪೊಲೀಸರು ಆಜ್ಞಾಪಿಸಿದರು, ನಿಮ್ಮ ಪ್ರದರ್ಶನವನ್ನು ರದ್ದು ಮಾಡಿ ಎಂದು. ಕಾನೂನು ಪಾಲನೆ ಮತ್ತು ಶಾಂತಿಗೆ ಭಂಗವುಂಟಾಗುತ್ತದೆಂಬುದು ಅವರ ಸಮಜಾಯಿಷಿ. ಪ್ರಶ್ನೆ ಇಷ್ಟೆ: ಭಂಗ ತರುತ್ತಿರುವವರನ್ನು ನಿರ್ಬಂಧಿಸುವುದು ಪೊಲೀಸರ ಕರ್ತವ್ಯವೋ ಅಥವಾ ಪ್ರಜಾಪ್ರಭುತ್ವ ರೀತ್ಯಾ ಪ್ರದರ್ಶನ ಏರ್ಪಡಿಸುವವರಿಗೆ ಅಡ್ಡಿಯುಂಟುಮಾಡುವುದು ಅವರ ಕಾರ್ಯದಕ್ಷತೆಯೊ? ನಾಳೆ ಇನ್ನೊಂದು ಬಣ ಹೇಳುತ್ತದೆನ್ನಿ: ಸಂಘ ಪರಿವಾರದ ಬೈಠಕ್ ನಡೆದರೆ ನಮಗೆ ಅಸಮಾಧಾನವಾಗುತ್ತದೆ, ನಾವು ರೊಚ್ಚಿಗೇಳುತ್ತೇವೆ, ಆದ್ದರಿಂದ ಅದನ್ನು ರದ್ದು ಮಾಡಿ, ಎಂದು. ಇದು ಎಲ್ಲಿಗೆ ಪಾರ ? ಆಗ ಶಾಂತಿ ಪಾಲನೆಗಾಗಿ ಪರಿವಾರದವರನ್ನು ಪೊಲೀಸರು ತಡೆಯುತ್ತಾರೇನು? ಬೇರೆಯವರ ಚಟುವಟಿಕೆಗಳನ್ನು ಈ ರೀತಿಯಲ್ಲಿ ನಿಗ್ರಹಿಸುವ ಸಂಘ ಪರಿವಾರದ ಆಕ್ರಮವು ಫ್ಯಾಸಿಸ್ಟ್ ದುರ್ನಡತೆಯ ಮುನ್ಸೂಚನೆ. ಅದಕ್ಕೆ ಪೊಲೀಸು ಕುಮ್ಮಕ್ಕು ಸರ್ವಥಾ ಸಲ್ಲದು. ಮೈಸೂರಿನಲ್ಲಿ ಪೊಲೀಸರು ಕೈಗೊಂಡ ಕ್ರಮ ಸಂಪೂರ್ಣವಾಗಿ ಪ್ರಜಾಪ್ರಭುತ್ವ ವಿರೋಧಿ ಕ್ರಮ, ಖಂಡನೀಯವಾದ ಕ್ರಮ. ಪಟೇಲರು ಇವನ್ನೆಲ್ಲಾ ಗಮನಿಸುವ ವ್ಯಕ್ತಿಯಲ್ಲ. ಮತ್ತೆ ಕುರ್ಚಿ ಏರಲು ಸಂಘ ಪರಿವಾರದ ಕಾಲಿಗೆ ಬಿದ್ದಿರುವ ಈ ವ್ಯಕ್ತಿಯಿಂದ ಯಾವ ಪರಿಹಾರವನ್ನೂ ನಿರೀಕ್ಷಿಸುವಂತಿಲ್ಲ.



## ಸಂಸ್ಕೃತಿ ರಕ್ಷಕರ ಗಮನಕ್ಕೆ

ಇದನ್ನು ಬಿಡಿಸಿದವನು ಕಲಾವಿದ ಎಂ. ಎಫ್ ಹುಸೇನ್ ಅಲ್ಲ. ಬಿಡಿಸಲಾಗಿರುವ ಚಿತ್ರ ದೇವಿ ಸರಸ್ವತಿಯದಾಗಲಿ, ಚಿತ್ರನಟಿ ಮಾಧುರಿ ದೀಕ್ಷಿತ್‌ದಾಗಲಿ ಅಲ್ಲವೇ ಅಲ್ಲ. ಆದರೂ ವಿಶ್ವ ಹಿಂದೂ ಪರಿಷತ್ ಮತ್ತು ಬಜರಂಗದಳದ ಸಾಂಸ್ಕೃತಿಕ ನೇತಾರರು ಹುಸೇನ್ ಅಥವಾ ಬೇರಾವುದೋ ಕಲಾವಿದನನ್ನು ಥಳಿಸಲು ಈ ಚಿತ್ರ ಪ್ರೇರಣೆ ನೀಡಬಹುದು. ಹಾಗಾಗದಿರಲೆಂದು ಈ ಕಲಾಚಿತ್ರದ ವಿವರ ನೀಡುವುದು ಅಗತ್ಯ. ಇದನ್ನು ರಚಿಸಿದ ಕಲಾವಿದ ಯಾರೆಂದು ತಿಳಿದಿಲ್ಲ. ಪ್ರಖ್ಯಾತ ಪ್ರಾಚೀನ ಕೇಂದ್ರವಾದ ತಮಿಳ್ನಾಡಿನ ಪುದುಕೋಟ್ಟೆ ಸಮೀಪ ಸಿತ್ತನ್ನವಾಸಲ್ ಎಂಬಲ್ಲಿರುವ ನಾಟ್ಯರಾಣಿಯ ಒಂದು ಚಿತ್ರ ಇದು. ಅಜಂತಾದಲ್ಲಿದ್ದಂತೆ ಇದು ಗುಹಾಂತರ ದೇವಾಲಯದ ಭಿತ್ತಿ ಚಿತ್ರ. ಸಾಹಿತ್ಯ, ಕಲೆ, ಇತ್ಯಾದಿಗಳಲ್ಲಿ ರಸಾಸ್ವಾದನೆಯ ಸ್ವರೂಪ ಏನೆಂಬುದು ಅಶೋಕ್ ಸಿಂಘಾಲಂತಹವರಿಗೆ ತಿಳಿಯದಿದ್ದರೆ ದೋಷವಿಲ್ಲ. ಆದರೆ ಪ್ರಾಚೀನ ಭಾರತದ ಇತಿಹಾಸ ಬಲ್ಲ ಕೆಲವು ವಿದ್ವಾಂಸರೂ ಆತನಂತೆ ಭಾವೋದ್ರೇಕಕ್ಕೆ ಇಂಬು ಕೊಡುವುದು ಎಷ್ಟು ಕ್ಷಮಾರ್ಹ? ಸಿತ್ತನ್ನವಾಸಲ್‌ನಲ್ಲಿರುವ ರೇಖಾಚಿತ್ರಗಳಿಗೆ ಮಸಿ ಬಳಿದು ಅಳಿಸಬೇಕೆಂದು ಇವರೆಲ್ಲಾ ಚಳುವಳಿ ಮಾಡುತ್ತಾರೇನು ?

ಸಂಸ್ಕೃತಿಯ ಹೆಸರಲ್ಲಿ ದಾಂಧಲೆ ನಡೆಸುವ ಮುನ್ನ ಇವರೆಲ್ಲಾ ನಮ್ಮ ಪ್ರಾಚೀನ ಸಾಹಿತ್ಯದ ಸ್ಥೂಲ ಪರಿಚಯ ಮಾಡಿಕೊಳ್ಳುವುದೊಳ್ಳೆಯದು. ಉದಾ: ಲಕ್ಷ್ಮಣಾಚಾರ್ಯ ಎಂಬುವವನೊಬ್ಬ ''ಚಂಡೀ ಕುಚ [illegible]'' ಎಂಬ ೫೦ ಪದ್ಯಗಳ ಖಂಡಕಾವ್ಯ ರಚಿಸಿದ್ದಾನೆಂದು ಹೇಳಿದರೆ ಇವರಿಗೆ ಕಚಗುಳಿ [illegible]. ''ಕಾವ್ಯಮಾಲಾ'' ಸರಣಿಯಲ್ಲಿ ಇದು ಪ್ರಕಟವಾಗಿದೆ. ಆ ಗ್ರಂಥದ ಬಗ್ಗೆ ಪ್ರಸಿದ್ಧ ವಿಮರ್ಶಕ ಕೃಷ್ಣ ಚೈತನ್ಯ ಹೇಳುತ್ತಾರೆ: ''ಇದೊಂದು ಸಂಕೋಚ, ಮಡಿವಂತಿಕೆಗಳಿಲ್ಲದ ಸಮಗ್ರತೆಯ ಕವಿಕೃತಿ.''

ಇನ್ನು ಮುಂದೆ ಕಲಾವಿದರ ಕೃತಿಗಳನ್ನು ಸುಡುವ ಸಂಭವವಿದ್ದರೆ ಈ ''ಸಾಂಸ್ಕೃತಿಕ ನೇತಾರರು'' [illegible] ಮತ್ತು ಕಲೆಯ ಪರಂಪರೆಯನ್ನು ಸ್ವಲ್ಪ ನೆನಪಿಸಿಕೊಳ್ಳಲಿ, ಆಮೇಲೆ ವಿವೇಚನೆ[illegible] ನಡೆದುಕೊಳ್ಳಲಿ.

# ಅಮೆರಿಕೆಯಲ್ಲಿ 'ಗಾಂಧಿ'ಗೆ ಸೆರೆವಾಸ?

ಪ್ರೊ॥ ಬಿ. ಎ. ವೀರಭದ್ರಪ್ಪ

ದೊಡ್ಡವರ ಮಕ್ಕಳಾಗಿ ಹುಟ್ಟಿದವರು ಅನೇಕ ಮುಜುಗರದ ಪ್ರಸಂಗಗಳನ್ನು ಎದುರಿಸಬೇಕಾಗುತ್ತದೆ. ಎಷ್ಟೋ ಜನ ಕೋಮಲ ಮನಸ್ಸಿನ ಕಿರಿಯರು ತಮ್ಮ ಪ್ರಸಿದ್ಧ ತಂದೆ ತಾಯಿಯರ ಹೆಸರನ್ನು ಈ ಕಾರಣಕ್ಕಾಗಿಯೇ ಹೇಳಿಕೊಳ್ಳುವುದಿಲ್ಲ. ಇಂತಹ ಸೂಕ್ಷ್ಮಮತಿಗಳು ಅಪರೂಪ. ಆದರೆ ತಮ್ಮ ಹಿರಿಯರ ಖ್ಯಾತಿಯ ಮರೆಯಲ್ಲಿ ತಮ್ಮ ಬೇಳೆಯನ್ನು ಬೇಯಿಸಿಕೊಳ್ಳುವ ಹಾಗೂ ಸುಲಭ ಸೌಲಭ್ಯಗಳನ್ನು ಪಡೆದು ಸಮಾಜದಲ್ಲಿ ಗಣ್ಯರೆಂದು ಖ್ಯಾತಿ ಪಡೆಯುವ ಹಂಬಲ ಅನೇಕರದು. ಇಲ್ಲದ ದೂರದ ಸಂಬಂಧವನ್ನು ಸೃಷ್ಟಿಸಿಕೊಂಡು ತಮ್ಮ ಅರ್ಹತೆಗೆ ಮೀರಿದ ಅನುಕೂಲಗಳನ್ನು ಪಡೆಯಲೆತ್ನಿಸುವವರೂ ಉಂಟು.

ಯೋಗೇಶ್ ಗಾಂಧಿ ಎಂಬ ಭಾರತೀಯ ಮೂಲದ ಒಬ್ಬ ಅಮೆರಿಕನ್ ಪ್ರಜೆ ಕೊನೆಯ ಗುಂಪಿಗೆ ಸೇರುತ್ತಾನೆ. ಆತ ಅಮೆರಿಕದ ಡೆಮಾಕ್ರಟಿಕ್ ಪಕ್ಷಕ್ಕೆ ೩,೨೫,೦೦೦ ಡಾಲರ್ (ಸು. ಒಂದು ಕೋಟಿ ನಲವತ್ತು ಲಕ್ಷ ರೂಪಾಯಿ) ನಿಧಿಯನ್ನು ನೀಡುತ್ತಾನೆ. ಇದನ್ನು ಅಮೆರಿಕದ ನ್ಯಾಯಾಂಗ ಇಲಾಖೆ ಪತ್ತೆ ಮಾಡಿರುವುದಲ್ಲದೆ ಆತನ ಮೇಲೆ ಅಂಚೆ ಮತ್ತು ತಂತಿ ವಂಚನೆ, ತೆರಿಗೆ ವಂಚನೆ, ಆದಾಯ ತೆರಿಗೆಯ ಲೆಕ್ಕ ಸಲ್ಲಿಸದಿರುವುದು ಮತ್ತು ಸಹಿಗಳ ಫೋರ್ಜರಿ ಇತ್ಯಾದಿ ಆಪಾದನೆಗಳನ್ನು ಸಹ ಮಾಡಿದೆ. ಈ ಮಾಹಿತಿ ಸ್ಯಾನ್‌ಫ್ರಾನ್ಸಿಸ್ಕೋದ ಜಿಲ್ಲಾ ನ್ಯಾಯಾಲಯದ ಅಪರಾಧ ಮಾಹಿತಿಯ ಕಡತವನ್ನು ಸೇರಿ ೧೯೯೭ರಿಂದಲೇ ವಿಚಾರಣೆಗೆ ಒಳಪಟ್ಟಿದ್ದು, ಈಗ ಉಗ್ರ ರೂಪ ತಾಳಿದೆ. ಈ ಅಪರಾಧಗಳ ಬಗ್ಗೆ ಯೋಗೇಶ್ ಈಗಾಗಲೇ ತಪ್ಪೊಪ್ಪಿಗೆ ಕೊಟ್ಟಿದ್ದಾನೆ. ಈತನಿಗೆ ೧೮ ತಿಂಗಳ ಜೈಲು ಶಿಕ್ಷೆ ಸಾಧ್ಯವಿದೆ.

ಇಲ್ಲಿಯ ಗಾಂಧಿ ಫೌಂಡೇಶನ್‌ನಲ್ಲಿ ಡೋನಾಲ್ಡ್ ಷಿಮರ್ ಎಂಬುವರು ೧೯೮೮ರಿಂದ ಸೇವೆ ಸಲ್ಲಿಸುತ್ತಿದ್ದು ೧೯೯೨ರಲ್ಲಿ ನಿವೃತ್ತರಾದರು. ೪೯ ವಯಸ್ಸಿನ ಯೋಗೇಶ್ ಗಾಂಧಿ ತಾನು ಸಲ್ಲಿಸಬೇಕಾಗಿದ್ದ ತನ್ನ ಮತ್ತು ಹೆಂಡತಿ ಕ್ರಿಷ್ಟಿ ಮಾರ್ಷಲ್‌ಳ ಅಮೆರಿಕನ್ ಎಕ್ಸ್‌ಪ್ರೆಸ್ ಕ್ರೆಡಿಟ್ ಕಾರ್ಡುಗಳ ಅರ್ಜಿಗಳ ಮೇಲೆ ಷಿಮರ್ ಅವರ ಸಹಿಯನ್ನು ಫೋರ್ಜರಿ ಮಾಡಿದ್ದಾನೆ ಎಂಬ ಆಪಾದನೆಯನ್ನು ಈಗ ಎದುರಿಸುತ್ತಿದ್ದಾನೆ.

ಒಂದು ದಶಕದ ಹಿಂದೆ ನ್ಯೂಯಾರ್ಕಿನಲ್ಲಿ ಕಾಣಿಸಿಕೊಂಡ ಯೋಗೇಶ್ ತಾನು ಮಹಾತ್ಮ ಗಾಂಧಿಯವರ ಮೊಮ್ಮಗ-ಸಂಬಂಧಿ (Grand nephew) ಎಂದು ಹೇಳಿಕೊಂಡು ನ್ಯೂಯಾರ್ಕಿನಲ್ಲಿ ಮಹಾತ್ಮರ ಪ್ರತಿಮೆಯನ್ನು ಸ್ಥಾಪಿಸಲು ಸಾರ್ವಜನಿಕರಿಂದ ನಿಧಿ ಸಂಗ್ರಹ ಮಾಡತೊಡಗಿದ. ಅದರ ಜೊತೆಗೆ ಕ್ಲಿಂಟನ್‌ರ ಮರುಚುನಾವಣಾ ಪ್ರಚಾರ ನಿಧಿಗೂ ಭಾರಿ ಮೊತ್ತದ ಹಣ ಸಂಗ್ರಹಣೆಯಲ್ಲಿ ಮುಂದಾದ.

ಆದರೆ ಯೋಗೇಶ್ ಗಾಂಧಿ ನಿಜವಾಗಿಯೂ ಮಹಾತ್ಮರ ಮೊಮ್ಮಗ ಸಂಬಂಧಿ ಹೌದೇ ಎಂಬ ಬಗ್ಗೆ ಸಂದೇಹಗಳನ್ನು ವ್ಯಕ್ತಪಡಿಸಲಾಗಿದೆ. ಅಲ್ಲದೆ ಗಾಂಧೀಜಿ ಪ್ರತಿಮೆಯನ್ನು ಸ್ಥಾಪಿಸಲು ಆತ ನಿಧಿ ಸಂಗ್ರಹಿಸ ತೊಡಗಿದಾಗ ಅನುಸರಿಸಿದ ವಿಧಾನಗಳ ಬಗ್ಗೆ ಅನೇಕ ಆಪಾದನೆಗಳಿವೆ. ನ್ಯೂಯಾರ್ಕಿನ ಮ್ಯಾನ್‌ಹಾಟನ್‌ನ ಗಗನಚುಂಬಿ ಕಟ್ಟಡಗಳ ನಡುವೆ ಯೂನಿಯನ್ ಪಾರ್ಕಿನ ಒಂದು ಮೂಲೆಯಲ್ಲಿ ಕುಬ್ಜಾಕಾರದ ಗಾಂಧಿ ಪ್ರತಿಮೆಯನ್ನು ಕಂಡು ನನಗೆ ತುಂಬಾ ನಿರಾಸೆಯಾಯಿತು. ಮಹಾತ್ಮರ ವ್ಯಕ್ತಿತ್ವವನ್ನು ಅದು ಯಾವ ರೀತಿಯಿಂದಲೂ ಪ್ರತಿನಿಧಿಸುವುದಿಲ್ಲ. ಗಾಂಧಿಯ ಹೆಸರು ಹೇಳಿಕೊಂಡು ದುಡ್ಡು ಮಾಡುವುದೇ ಯೋಗೇಶನ ಮೂಲ ಉದ್ದೇಶ ಎಂಬುದು ಪ್ರತಿಮೆಯನ್ನು ನೋಡಿದವರಿಗೆ ಮನವರಿಕೆಯಾಗದಿರದು.

ನ್ಯೂಯಾರ್ಕಿನಲ್ಲಿ ಮಹಾತ್ಮರ ಪ್ರತಿಮೆಯ ಸ್ಥಾಪನೆಯಾದ ಕೂಡಲೇ ಯೋಗೇಶ್ ತಾನು ಸಂಗ್ರಹಿಸಿದ ಸಾರ್ವಜನಿಕ ಹಣದ ಲೆಕ್ಕವನ್ನೂ ಒಪ್ಪಿಸದೆ ೩೫೦೦ ಮೈಲಿ ದೂರದ ಅಮೆರಿಕದ ಪಶ್ಚಿಮ ಕರಾವಳಿಗೆ ವಲಸೆ ಹೋದ. ಆತ ಪ್ರತಿಮೆಯ ಪ್ರತಿಷ್ಠಾಪನೆಗಾಗಿ ಅಪಾರ ಹಣ ಸಂಗ್ರಹಿಸಿದ್ದು ಇದುವರೆಗೂ ಲೆಕ್ಕ ಕೊಟ್ಟಿಲ್ಲ.

ವಿಶ್ವಶಾಂತಿ ಸ್ಥಾಪನೆಗಾಗಿ ಅಧ್ಯಕ್ಷ ಕ್ಲಿಂಟನ್‌ಗೆ ಮಹಾತ್ಮ ಗಾಂಧಿ ವಿಶ್ವಶಾಂತಿ ಪ್ರಶಸ್ತಿಯನ್ನು ಮೇ ೯೭ರಲ್ಲಿ ನೀಡಲಾಯಿತು. ಯಾರ ಅಮೃತ ಹಸ್ತದಿಂದ ಈ ಪ್ರಶಸ್ತಿಯನ್ನು ಕ್ಲಿಂಟನ್ ಸ್ವೀಕರಿಸಿದರು ಬಲ್ಲಿರಾ? ಈಗ ನ್ಯಾಯಾಲಯದ ಕಟಕಟೆಯೊಳಗೆ ನಿಂತಿರುವ ಯೋಗೇಶ್ ಗಾಂಧಿಯಿಂದ! ಈ ಹಿಂದೆ ಈತನಿಂದ ಪ್ರಶಸ್ತಿಯನ್ನು ಪಡೆದ ವಿಶ್ವನಾಯಕರುಗಳು ಇವರು: ಜಿಮ್ಮಿ ಕಾರ್ಟರ್ ಮತ್ತು ರೊನಾಲ್ಡ್ ರೇಗನ್, ಗರ್ಬಚೋವ್, ಇಜ್ಜಕ್ ರಬೀನ್, ಯಾಸರ್ ಅರಾಫತ್, ನೆಲ್ಸನ್ ಮಂಡೇಲಾ ಮತ್ತು 'ಭಾರತರತ್ನ' ಮದರ್ ತೆರೆಸಾ.

ಯೋಗೇಶ್ ಗಾಂಧಿ ಪ್ರಸ್ತುತ ಕ್ಯಾಲಿಫೋರ್ನಿಯಾದ ಗಾಂಧಿ ಅಂತರರಾಷ್ಟ್ರೀಯ ಸ್ಮಾರಕ ಪ್ರತಿಷ್ಠಾನದ ಮುಖ್ಯಸ್ಥ. ಡೆಮಾಕ್ರಟಿಕ್ ಪಕ್ಷಕ್ಕೆ ಕಾಣಿಕೆ ನೀಡಿದ ವ್ಯಕ್ತಿ, ಸಂಘ ಹಾಗೂ ಸಂಸ್ಥೆಗಳಲ್ಲಿ ಯೋಗೇಶ್ ೨೦ನೆಯ ಸ್ಥಾನದಲ್ಲಿದ್ದಾನೆ ಎಂದು ವಾಷಿಂಗ್‌ಟನ್‌ನ 'ಸಾಮಾನ್ಯ ಧ್ಯೇಯಗಳು' ಎಂಬ ಚಿಂತಕರ ಚಾವಡಿ ವರದಿ ಮಾಡಿದೆ.

ಅಮೆರಿಕದ ಟೆನೆಸ್ಸಿ ರಾಜ್ಯದ ಮೆಂಫಿಸ್ ನಲ್ಲಿರುವ ಎಂ. ಕೆ. ಗಾಂಧಿ ಅಹಿಂಸಾ ಕೇಂದ್ರದ ನಾಯಕರೂ ಮಹಾತ್ಮ ಗಾಂಧಿಯವರ ಮೊಮ್ಮಗನೂ ಆಗಿರುವ ಅರುಣ್ ಗಾಂಧಿ ''ಯೋಗೇಶನು ನಮ್ಮ ಕುಟುಂಬಕ್ಕೆ ದೂರದ ಸಂಬಂಧಿ ಯಾಗಿರಬಹುದು. ಆದರೆ ೪೫ನೇ ಸೋದರ ಸಂಬಂಧಿಯೂ ಆಗಿಲ್ಲ'' ಎಂದು ಹೇಳಿರುವುದಾಗಿ ವರದಿಯಾಗಿದೆ.

ನೀನ್ಯಾಕೋ ನಿನ್ನ ಹಂಗ್ಯಾಕೋ, ಗಾಂಧಿ ಎಂಬ ಹೆಸರಿದ್ದರೆ ಸಾಕೋ !!

ಪ್ರೊ॥ ಬಿ. ಎ. ವೀರಭದ್ರಪ್ಪ
ಬಿ-೧೮, ಬಾಪೂಜಿ ವಿದ್ಯಾನಗರ, ದಾವಣಗೆರೆ - ೫೭೭ ೦೦೫

## ವಿಪರ್ಯಾಸ

*ನಗರಗಳ ಕೆಲವು ಶ್ರೀಮಂತರು ಸಾವಿರಾರು ರೂಪಾಯಿ ಕೊಟ್ಟು ಹಳೆಯ ಕಂಬಗಳು, ಬಾಗಿಲ ಚೌಕಟ್ಟು, ಚಿತ್ತಾರದ ಕಿಟಕಿ ಮುಂತಾದುವನ್ನು ಕೊಳ್ಳುತ್ತಾರೆ. ಅವರ ಸುಂದರ ಮಹಲುಗಳಿಗೆ ಅವು ಅಲಂಕಾರ. ಭಾರತದ ಸಂಸ್ಕೃತಿ ಮತ್ತು ಪರಿಸರ ರಕ್ಷಣೆಯ ಬಗ್ಗೆ ಟನ್ನುಗಟ್ಟಲೆ ಪುಟಗಳಲ್ಲಿ ಅವರು ಬರೆಯುತ್ತಾರೆ. ಹಳ್ಳಿಯ ಬಡವರಿಗೆ ಈ ಮೋಜು ಅರ್ಥವಾಗುವುದಿಲ್ಲ. ಇವರೆಂಥ ಹುಚ್ಚರು ಎಂದುಕೊಳ್ಳುತ್ತಾರೆ, ಅಷ್ಟೆ. ಹಿಂದಿನ ಕಾಲದಲ್ಲಿ ಯಾರೋ ಮಹಾರಾಜರು ಅವರ ಕುದುರೆಗಳಿಗೆ ಜಿಲೇಬಿ ತಿನ್ನಿಸುತ್ತಿದ್ದರಂತಲ್ಲ, ಹಾಗೆ! ಆ ಕುದುರೆಗಳ ಲಾಯದಲ್ಲಿ ಕೆಲಸಕ್ಕಿದ್ದ ಹುಡುಗರು ಮತ್ತು ಅವರ ಕುಟುಂಬದವರು ಹಸಿವಿನಿಂದ ಸಾಯುತ್ತಿದ್ದರೆಂಬುದು ಲೆಕ್ಕಕ್ಕೆ ಬರುತ್ತಿರಲಿಲ್ಲ. ನಿಜಸಂಗತಿ ಹೀಗಿದೆ : ನಮ್ಮ ಬಡವರು ಎಷ್ಟೊಂದು ಬಡವರೆಂದರೆ ಅಲ್ಲಲ್ಲಿ ತಲೆಯೆತ್ತುವ ಕಾರ್ಖಾನೆಗಳು ಮತ್ತು ವಿದ್ಯುದಾಗಾರಗಳು ಪ್ರಕೃತಿಯ ಅಂದವನ್ನು ಕೆಡಿಸುತ್ತವೆಂದು ಅವರಿಗೆ ಅನ್ನಿಸುವುದಿಲ್ಲ. ಸ್ಥಳೀಯ ಹುಡುಗರಿಗೆ ಏನೋ ಒಂದು ಉದ್ಯೋಗ ದಕ್ಕಿ ನಾಲ್ಕು ಕಾಸು ಸಿಕ್ಕಿದರೆ ಅವರು ಹಿಗ್ಗುತ್ತಾರೆ. ನಾಳೆ ನೀರು, ರಸ್ತೆ, ವಿದ್ಯುತ್ ಎಲ್ಲಾ ಬರಬಹುದೆಂದು ತವಕಿಸುತ್ತಾರೆ. ಯಂತ್ರದ ಸಹಾಯದಿಂದ ಸಾಮೂಹಿಕವಾಗಿ ಉತ್ಪಾದನೆಯಾದ ವಸ್ತುಗಳನ್ನು ಕಂಡರೆ ಅವರ ನೆಮ್ಮದಿ ಕೆಡುವುದಿಲ್ಲ. ಭಾಗಲ್ಪುರ ಅಥವಾ ಕೊಟ್ಟಾಯಂನಿಂದ ಹೊರಹೋದ ಯುವಕ ನಲ್ಲಿ ರಿಪೇರಿ ಮಾಡುವುದರಲ್ಲೇ ಹಣ ಗಳಿಸಬಹುದು. ದುಬೈ, ಕುವೈತ್‌ಗಳಿಗೆ ಹೋಗುವುದೇ ಅಂತಹ ಕೆಲಸಗಳಿಗೆ. ಹಾಗೆ ಹಣ ಗಳಿಸಿ ಹಿಂದಿರುಗಿದಾಗ ಅವನು ಕಟ್ಟಿಕೊಳ್ಳುವುದು ಒಳ್ಳೆಯ ಸಿಮೆಂಟ್ ಮಹಡಿ ಮನೆಯನ್ನು. ಆಧುನಿಕ ಅಳವಡಿಕೆಗಳನ್ನು ಮನೆಯಲ್ಲಿ ತುಂಬಿಕೊಳ್ಳುತ್ತಾನೆ. ಹಿಂದಿನ ತನ್ನ ಗುಡಿಸಲನ್ನು ಭೂತಕಾಲದ ಭವ್ಯ ಸ್ಮಾರಕವೆಂದು ಉಳಿಸಿಕೊಂಡು ಪ್ರದರ್ಶನಕ್ಕಿಡುವುದಿಲ್ಲ.*

*ನರ್ಮದಾ ಅಣೆಕಟ್ಟು ಬೇಕೇ ಬೇಡವೇ ಎಂಬುದನ್ನು ಉಗ್ರವಾಗಿ ಚರ್ಚಿಸುವ ಅರುಂಧತಿ ರಾಯ್, ಬಿ.ಜಿ. ವರ್ಗೀಸ್ ಮುಂತಾದವರು ಗಮನಿಸಲಿ ಬಿಡಲಿ, ಅವರ ಚರ್ಚೆಗಳ ಹಿಂದೆ ಮೂಲಭೂತವಾದ ಒಂದು ಅಂಶ ಅಡಗಿದೆ. ಅದೇನೆಂದರೆ ನಮ್ಮ ಸಮಾಜ ಛಿದ್ರಗೊಂಡಿದೆ. ಪರಿಸರವಾದಿಗಳು ಕೂಡ ಎಲ್ಲಾ ಒಂದು ಬಣಕ್ಕೆ ಸೇರುವುದಿಲ್ಲ. ಬಡವರ ಬಗೆಗೆ ಆಳವಾದ ಸಹಾನುಭೂತಿಯುಳ್ಳ ಜನ ಆ ಬಡವರೊಡನೆ ಸಂವಾದ ಏರ್ಪಡಿಸಿಕೊಳ್ಳುವುದರಲ್ಲಿ ಸೋತಿದ್ದಾರೆ.*

—ಕಾದಂಬರಿಗಾರ್ತಿ, ಪತ್ರಕರ್ತೆ, ಮೃಣಾಲ್ ಪಾಂಡೆ

# ಜಗಮೋಹನ್‌ರ ೧೧ ಪ್ರಶ್ನೆಗಳು

ತಮ್ಮದು ಹಗರಣಗಳಿಲ್ಲದ ಸರ್ಕಾರವೆಂದು ವಾಜಪೇಯಿ ಚುನಾವಣಾ ಪ್ರಚಾರ ಮುಂದುವರಿಸಿದ್ದಾರೆ. ಈರುಳ್ಳಿ, ಸಕ್ಕರೆ, ಕಾರ್ಗಿಲ್, ಟೆಲಿಕಾಂ, - ಇವೆಲ್ಲಾ ಅವರಿಗೆ ಜ್ಞಾಪಕವಿಲ್ಲವೆಂಬಂತೆ ಚೆನ್ನಾಗಿ ನಟಿಸುವ 'ನಂಬಿಕೆಗೆ ಅರ್ಹವಾದ ಪ್ರಧಾನಿ' ಅವರು. ಆದರೆ ಜನರು ಟೆಲಿಕಾಂ ಹಗರಣವನ್ನು ಮರೆಯುವಂತಿಲ್ಲ. ಏಕೆಂದರೆ ಅದು ಸದಾ ಸುದ್ದಿಯಲ್ಲಿರುತ್ತದೆ. ನ್ಯಾಯಾಲಯದವರು ಸರ್ಕಾರಕ್ಕೆ ಛೀಮಾರಿ ಹಾಕಿದ್ದಾಯಿತು, ಸಮಸ್ಯೆ ಇತ್ಯರ್ಥವಾಗಲು ಕಾಲದ ವಿಸ್ತರಣೆಯಾಯಿತು, ಖಾಸಗಿ ಕಂಪೆನಿಗಳವರು ಸಹಿ ಹಾಕದೆ ಅತಂತ್ರ ಸ್ಥಿತಿ ಉಂಟುಮಾಡಿದ್ದಾಯಿತು...

ಐವತ್ತು ಸಾವಿರ ಕೋಟಿ ರೂಪಾಯಿಗಳ ಅವ್ಯವಹಾರ ಇದು. ಅಂದರೆ, ಬೊಫೋರ್ಸ್‌ನದಕ್ಕಿಂತ ಸುಮಾರು ಸಾವಿರ ಪಟ್ಟು ಹೆಚ್ಚು ಹಣ. ಅದರಲ್ಲಿ ಆಮೇಲೆ ಸ್ವಲ್ಪ ಭಾಗ ಆದಾಯವಾಗಿ ಸರ್ಕಾರಕ್ಕೆ ಹಿಂದಿರುಗುತ್ತದೆಂದರೂ ಭಾರಿ ಮೊತ್ತದ ಅವ್ಯವಹಾರವೇ. ತಕ್ಷಣದಲ್ಲಿ ಬೊಕ್ಕಸಕ್ಕೆ ನಷ್ಟವಾಗಿರುವುದು ೪೦೦೦ ಕೋಟಿಯಂತೆ. ಅದರ ಶೇಕಡ ೧೦ರಷ್ಟು ಹಗರಣದ ಮುಂದಾಳುಗಳಿಗೆ ಸೇರಿದೆಯೆಂದು ಲೆಕ್ಕ ಮಾಡಿದರೂ ಚುನಾವಣೆಗೆ ಪೊಗದಸ್ತಾಗಿ ಭಂಡಾರದ ಶೇಖರಣೆಯಾಗಿದೆ.

ಈ ವರ್ಷದ ಮುಂಗಡ ಪತ್ರದ ಅಂದಾಜುಗಳೆಲ್ಲಾ ತಿರುಗುಮುರುಗಾಗಿದೆ. ಆದಾಗ್ಯೂ, ಆರ್ಥಿಕ ಪರಿಸ್ಥಿತಿ ಸುಧಾರಿಸಿದೆ ಎನ್ನುವ ಸರ್ಕಾರ ವಾರದಿಂದ ವಾರಕ್ಕೆ ಹಣದುಬ್ಬರ ಕಡಿಮೆಯಾಗುತ್ತಿದೆಯೆಂದು ಹೇಳಿಕೊಳ್ಳುತ್ತಿದೆ. ಮಾರುಕಟ್ಟೆಯಲ್ಲಿ ಗ್ರಾಹಕನ ಅನುಭವ ಅದಕ್ಕೆ ಭಿನ್ನವಾಗಿದೆ. ಕಾರ್ಗಿಲ್ ಯುದ್ಧ ಪ್ರಕರಣದಲ್ಲಿ ಕನಿಷ್ಠ ೧೫ ಸಾವಿರ ಕೋಟಿ ವೆಚ್ಚವಾಗಿದೆಯೆಂದು ಅಂದಾಜು ಮಾಡಲಾಗಿದೆ. ಟೆಲಿಕಾಂ ಹಗರಣದಿಂದಾಗಿ ಬೊಕ್ಕಸಕ್ಕೆ ಬಾರದೆ ಹೋಗಿರುವ ಮೊಬಲಗು ೫೦ ಸಾವಿರ ಕೋಟಿಯ ಒಂದು ವರ್ಷದ ಭಾಗ, ಅಂದರೆ ೫೦೦೦ ಕೋಟಿ ಎಂದಿಟ್ಟುಕೊಳ್ಳಬಹುದು. ಈ ೨೦ ಸಾವಿರ ಕೋಟಿಯು ಮುಂಗಡ ಪತ್ರದಲ್ಲಿ ಸೇರ್ಪಡೆಯಾಗಿರಲಿಲ್ಲ, ಅದನ್ನು ಸರಿದೂಗಿಸಲು ಅಕ್ಟೋಬರ್‌ನಲ್ಲಿ ಅಧಿಕಾರ ವಹಿಸಿಕೊಳ್ಳುವ ಕೇಂದ್ರ ಸರ್ಕಾರ ಎಷ್ಟು ತೆರಿಗೆ ವಿಧಿಸಬೇಕಾಗುತ್ತದೆಂದು ಊಹಿಸಿಕೊಳ್ಳಬೇಕು.

ಈ ಅಗಾಧ ಸಂಕಷ್ಟಕ್ಕೆ ಮೂಲಕಾರಣವಾದ ಟೆಲಿಕಾಂ ಹಗರಣಕ್ಕೆ ಮುನ್ನ ಆಗ್ಗೆ ದೂರಸಂಪರ್ಕ ವಿಭಾಗದ ಸಚಿವರಾಗಿದ್ದ ಜಗಮೋಹನ್ ಸರಕಾರದ ನೀತಿಯನ್ನು ಸಡಿಲಗೊಳಿಸಲು ಒಪ್ಪಿರಲಿಲ್ಲ, ಅದಕ್ಕೇ ಅವರನ್ನು ಅಲ್ಲಿಂದ ಹೊರದೂಡಿದ್ದು ನಮ್ಮ ತತ್ವ ನಿರತ ಪ್ರಧಾನಿಯವರು ! ಈ ಇಡೀ ಪ್ರಕರಣ ಚರ್ಚೆಗೆ ಬಂದಾಗ ಜಗಮೋಹನ್ ಹನ್ನೊಂದು ಪ್ರಶ್ನೆಗಳನ್ನು ಎತ್ತಿದ್ದರು. ಅವಕ್ಕೆ ಉತ್ತರಿಸಿ ಸಮಾಧಾನ ಹೇಳುವ ಬದಲು ವಾಜಪೇಯಿ ಆತನನ್ನು ಎತ್ತಂಗಡಿ ಮಾಡಿಸಿ ನಿಟ್ಟುಸಿರಿಟ್ಟರು. ಖಾಸಗಿ ಕಂಪೆನಿಗಳಿಗೆ ಇಷ್ಟು ದೊಡ್ಡ ಬಳುವಳಿ ನೀಡುವುದು ಹಾನಿಕರ, ಅನಾರೋಗ್ಯಕರ ಮತ್ತು ಅನವಶ್ಯಕವೆಂದು ಜಗಮೋಹನ್ ತಮ್ಮ ಆಕ್ಷೇಪವೆತ್ತಿದ್ದರು. ಆ ಕಂಪೆನಿಗಳಿಂದ ವಸೂಲಾಗಬೇಕಾಗಿದ್ದ ಹಣವನ್ನು ವಸೂಲು ಮಾಡದಿದ್ದುದಕ್ಕೆ ಆಡಿಟರ್ ಜನರಲ್ ಸಹ ಆಕ್ಷೇಪಿಸಿದ್ದರೆಂದು ದಾಖಲು ಮಾಡಿರುವ ಜಗಮೋಹನ್ ಹಾಕಿರುವ ಪ್ರಶ್ನೆಗಳು ಸರ್ಕಾರದ ಕಡತಗಳಲ್ಲಿವೆ. ಪ್ರಶ್ನೆಗಳು ಇವು : ೧. ಒಮ್ಮೆ ಒಪ್ಪಂದ ಮಾಡಿಕೊಂಡು ಆಮೇಲೆ ಅದರಲ್ಲಿ ಅಡಕವಾಗಿರುವ ನಿರ್ಬಂಧಗಳನ್ನು ಗಾಳಿಗೆ ತೂರುವುದು ಕಾನೂನು, ಸಂವಿಧಾನ, ಅರ್ಥನೀತಿ, ನೈತಿಕತೆ, ಮುಂತಾದ ಆಯಾಮಗಳಿಂದ ಪರೀಕ್ಷಿಸಿದಾಗ ಸಾಧುವೆನಿಸುತ್ತದೆಯೆ ? ೨. ಜನತೆ, ಮಾಧ್ಯಮಗಳು, ಪಾರ್ಲಿಮೆಂಟ್, ಆಡಿಟರ್ ಜನರಲ್ ಮತ್ತು ನ್ಯಾಯಾಲಯಗಳು ೪೦೦೦ ಕೋಟಿ ರೂಪಾಯಿಗಳನ್ನು ವಸೂಲು ಮಾಡದಿರುವ ಕ್ರಮವನ್ನು ಹೇಗೆ ಸ್ವೀಕರಿಸುತ್ತಾರೆ ? ೩. ಕೆಲವು ಕಂಪೆನಿಗಳು ತಮ್ಮ ಈಕ್ವಿಟಿಗಳನ್ನು ಹೆಚ್ಚು ಮೊತ್ತಕ್ಕೆ ಮಾರಿ ಲಾಭಗಳಿಸಿರುವಾಗ ಅವರ ವ್ಯಾಪಾರ ಕುದುರಿಲ್ಲವೆಂದು ಹೇಗೆ ಹೇಳುವುದು ? ಈಕ್ವಿಟಿಯನ್ನು ಇನ್ನೂ ಏರುವಂತೆ ಮಾಡಿಕೊಳ್ಳುವ ಹುನ್ನಾರ ಇದಲ್ಲವೆ ? ೪. ಸದ್ಯದ ಸನ್ನಿವೇಶವನ್ನು ಮಾತ್ರವೇ ಪರಿಗಣಿಸಿ ನಷ್ಟವಾಗುತ್ತಿದೆಯೆಂದು ಹೇಳುವುದು ಸರಿಯೆ ? ಈಗ ಮೂಲಾವಶ್ಯಕ ಯಂತ್ರಗಳ ಅಳವಡಿಸುವಿಕೆಗೆ ಹಣ ತೊಡಗಿಸಿದ ನಂತರ ಮುಂದೆ ಬರುವುದೆಲ್ಲಾ ಆದಾಯವೇ ಅಲ್ಲವೆ ? ಅದೂ ಈಗಿನ ಮಟ್ಟಕ್ಕಿಂತಲೂ ಹೆಚ್ಚಿನ ಮಟ್ಟದಲ್ಲಿ ಸಂಗ್ರಹವಾಗುತ್ತದಲ್ಲವೆ ? ೫. ಕಂಪೆನಿಗಳು ನಷ್ಟ ಅನುಭವಿಸುತ್ತಿದ್ದರೆ ಯಾರೂ ಲೈಸನ್ಸ್‌ಗಳನ್ನು ಹಿಂದಿರುಗಿಸಲು ಬಂದಿಲ್ಲವೇಕೆ ? ನಷ್ಟವನ್ನು ಹೆಚ್ಚಿಸಿಕೊಳ್ಳುತ್ತಲೇ ಇರಲು ಅವರು ಸಿದ್ಧರಿದ್ದರೆಂದು ಇದರರ್ಥವೆ ? ೬. ನಷ್ಟವಿರುವುದು ನಿಜವಾದರೆ ಹೊಸ ಕಂಪೆನಿಗಳೇಕೆ ಈ ಉದ್ದಿಮೆಯಲ್ಲಿ ಪಾಲ್ಗೊಳ್ಳಲು ಹಾತೊರೆಯುತ್ತಿವೆ ? (ಕೆಲವು ಕಂಪೆನಿಗಳ ಹೆಸರುಗಳನ್ನು ನಮೂದಿಸಲಾಗಿದೆ). ೭. ತಾವು ಎಣಿಸಿದ್ದುದಕ್ಕಿಂತ ಹೆಚ್ಚು ಲಾಭಗಳಿಸಿದ್ದಿದ್ದರೆ ಅದನ್ನು ಹಂಚಿಕೊಳ್ಳಲು ಈ ಕಂಪೆನಿಗಳು ಸರ್ಕಾರದ ಬಳಿ ಬರುತ್ತಿದ್ದವೆ ? ೮.ಅನಿರ್ಬಂಧಿತ ಉದ್ದಿಮೆಯ ಬಗ್ಗೆ ಮಾತನಾಡುವ ಈ ಲೈಸೆನ್ಸ್‌ದಾರರು ರಾಜ್ಯಯಂತ್ರದ ಮಧ್ಯಪ್ರವೇಶವನ್ನೇಕೆ ಬಯಸುತ್ತಿದ್ದಾರೆ ? ೯. ಬೇರೆ ಬೇರೆ ಪ್ರದೇಶಗಳಿಗೆ ಬೇರೆ ಬೇರೆ ಕಂಪೆನಿಗಳು ಲೈಸೆನ್ಸ್ ಪಡೆದಿವೆ. ಮೊತ್ತವೂ ಬೇರೆ ಬೇರೆ. ಹೀಗಿರುವಾಗ ಎಲ್ಲ ಕಂಪೆನಿಗಳೂ ಒಟ್ಟಾಗಿ ಬಂದು ರಿಯಾಯಿತಿ ಕೇಳುತ್ತಿದ್ದಾರೆ ಏಕೆ? ೧೦. ಒಪ್ಪಂದದ ಎಲ್ಲ ನಿಬಂಧನೆಗಳನ್ನೂ ಅನುಷ್ಠಾನಕ್ಕೆ ತರದಿದ್ದರೆ ಅದೊಂದು ಕೆಟ್ಟ ಮಾದರಿಯನ್ನು ಹಾಕಿಕೊಟ್ಟಂತೆ ಆಗುವುದಿಲ್ಲವೆ ? ಬೇರೆ ಕ್ಷೇತ್ರಗಳಲ್ಲೂ ಇದೇ ಪರಿಪಾಠ ಆರಂಭವಾಗುವುದಿಲ್ಲವೆ ? ಆಗ ಒಪ್ಪಂದಗಳಿಗೆ ಯಾವ ಗೌರವ ಉಳಿಯುತ್ತದೆ ? ೧೧. ಮುಕ್ತ ಆರ್ಥಿಕತೆಗೆ ಬದ್ಧವಾಗಿರುವ ಬೇರಾವುದೇ ದೇಶದಲ್ಲಾದರೂ ಒಪ್ಪಂದಗಳನ್ನು ಮಧ್ಯಕಾಲೀನವಾಗಿ ಬದಲಾಯಿಸುವುದುಂಟೆ ? ಟೆಂಡರ್‌ಗಳನ್ನು ಹಾಕಿಯಾದ ಮೇಲೆ ಅವನ್ನು ತಿದ್ದಲು ಅವಕಾಶ ಕೊಡುತ್ತಾರೆಯೆ ?

–ಹಗರಣಗಳ ಗಂಧವನ್ನು ಮೂಸದ ಪ್ರಧಾನಿಗಳು ಈ ಪ್ರಶ್ನೆಗಳಿಗೆ ಉತ್ತರ ನೀಡುವ ಗೋಜಿಗೆ ಹೋಗಲಿಲ್ಲ. ಸಾರ್ವಜನಿಕರು ಉತ್ತರ ಕಂಡುಕೊಳ್ಳುತ್ತಾರೆಂದು ನಿರೀಕ್ಷಿಸೋಣವೆ ?

## ಒಂದು ಅನಿಸಿಕೆ

ಹೊಸತು ಮೊದಲ ಸಂಚಿಕೆಯಲ್ಲಿ 'ಹಿಂಸೆ'ಯ ಕುರಿತ ವ್ಯಾಸರಾಯ ಬಲ್ಲಾಳರ ಲೇಖನ ನನ್ನಲ್ಲಿ ಯೋಚನೆ ಹುಟ್ಟಿಸಿತು. 'ಹಿಂಸೆ', ಹಿಂಸೆಗೆ ಕಾರಣಗಳು, ಪ್ರಚೋದಕರು...... ಇತ್ಯಾದಿ ಇತ್ಯಾದಿ... ನಾನು ಯೋಚಿಸುತ್ತಲೇ ಇರುತ್ತೇನೆ. ಬಲ್ಲಾಳರು ಅಮೇರಿಕಾದ ಶಾಲೆಯೊಂದರ ಘಟನೆಯನ್ನು ಉಲ್ಲೇಖಿಸಿ ಬರೆಯುತ್ತಾರೆ.

ಕಳೆದ ತಿಂಗಳು ಅಮೆರಿಕಾದ ಷೇರು ಮಾರುಕಟ್ಟೆಯ ಕುಸಿತದಿಂದ ನಡೆದ ಒಂದು ಘಟನೆ... ಪತ್ರಿಕೆಗಳಲ್ಲಿ ವರದಿಯಾದಂತೆ - ಷೇರು ದಲಾಲನೊಬ್ಬ ಮಾನಸಿಕ ಉದ್ವಿಗ್ನತೆಗೆ ಒಳಗಾಗಿ ಮೊದಲ ದಿನ ತನ್ನ ಹೆಂಡತಿ, ಎರಡನೇ ದಿನ ಇಬ್ಬರು ಮಕ್ಕಳು, ಮೂರನೇ ದಿನ Share Exchangeನಲ್ಲಿ ಕೆಲಸ ಮಾಡುತ್ತಿದ್ದ ಉದ್ಯೋಗಿಗಳನ್ನು ಬಲಿ ತೆಗೆದುಕೊಂಡ. ಇದಕ್ಕೆ ಕಾರಣ ಷೇರು ಮಾರುಕಟ್ಟೆಯಲ್ಲಿ ಅನುಭವಿಸಿದ ನಷ್ಟ. ಹೀಗೆ ಬಲಿಯಾದ ೭ ಮಂದಿ ಉದ್ಯೋಗಿಗಳಲ್ಲಿ ಒಬ್ಬಳೇ ಮಹಿಳೆ. ಅವಳು ನನ್ನ ಸಹೋದ್ಯೋಗಿಯ ಓರಗಿತ್ತಿ, ನನ್ನ ಸಹೋದ್ಯೋಗಿ. ವ್ಯಕ್ತಪಡಿಸಿದ ಅಭಿಪ್ರಾಯಗಳು, ಅಲ್ಲಿ ನಡೆದ ಘಟನೆ, ಇವೆಲ್ಲವೂ ನಾಗರಿಕತೆಯ, ತಾಂತ್ರಿಕತೆಯ ಉತ್ತುಂಗವನ್ನು ತಲುಪಿದ ಸಮಾಜದ-ವ್ಯಕ್ತಿಗಳ ಸಂಕೀರ್ಣ ಬದುಕಿನ ನೈಜ ದರ್ಶನ ನೀಡುವಂತಿವೆ.

''ಅಲ್ಲ ಕಣೇ, ಆ ವ್ಯಕ್ತಿಗೆ ಅದೇ Exchange ಆಗ್ಬೇಕಿತ್ತ ? ಅಷ್ಟೊಂದು ಜನಗಳ ಮಧ್ಯೆ ಈಕೇನೇ ಸಿಗಬೇಕಿತ್ತ. ಸಾಯ್ಸಲಿಕ್ಕೆ ಇನ್ಯಾರೂ ಸಿಗಲಿಲ್ವ ? ಅವಳ ದುಃಖ, ಸಂಕಟಕ್ಕೆ ಸಹಾನುಭೂತಿ ವ್ಯಕ್ತಪಡಿಸುತ್ತಲೇ ಮನಸ್ಸು ಯಾಕೆ ಮತ್ತು ಹೇಗೆ ಮನುಷ್ಯರು ಇಷ್ಟು ಸ್ವಾರ್ಥಿಗಳಾಗಿಬಿಡುತ್ತಾರೆ... ''ಸಾವು'' ಅತ್ಯಂತ ಭೀಕರ. ಸತ್ತವರು ಯಾರೇ ಆದರೂ ಅವರ ನಿಕಟವರ್ತಿಗಳಿಗದು ತುಂಬಲಾಗದ ಕೊರತೆಯೇ. ಇಂತಹ ದುರಂತ ಯಾರಿಗೂ ಬಾರದಿರಲಿ ಎಂಬ ಆಶಯ ಬರುವ ಬದಲು ಇಷ್ಟು ಸ್ವಾರ್ಥಪರ ಯೋಚನೆ ಹೇಗೆ ?

ಇನ್ನು ಆ ಘಟನೆ... ಅತ್ಯಂತ ಸುಲಭವಾಗಿ ಹಣಗಳಿಸುವ ದಂಧೆ... ''ಷೇರು'' ವ್ಯವ ಹಾರ. ಯಾರದೋ ಕರಾಮತ್ತಿನಿಂದ ಮೇಲೆ-ಕೆಳಗೆ ಇಳಿಯುವ ಷೇರು ದರಗಳು ದೇಶದ ಆರ್ಥಿಕತೆಗೆ ಒಂದು ಪೈಸೆಯ ಕೊಡುಗೆಯನ್ನೂ ನೀಡದೇ ಕೇವಲ ಅನುತ್ಪಾದಕ ಬಂಡವಾಳ ಚಲಾವಣೆಯಷ್ಟೇ ನಡೆಯುವ ಈ ದಂಧೆ ಸೃಷ್ಟಿ ಮಾಡುವ ಅನಾಹುತಗಳವೆಷ್ಟೋ ! ಇಡೀ ದೇಶದ ಆರ್ಥಿಕತೆಯನ್ನೇ ಬುಡಮೇಲು ಮಾಡಿಬಿಡುವ ಈ 'ದಂಧೆ'ಯ ಕುರಿತು ಜನರೇಕೆ ಯೋಚಿಸುವುದಿಲ್ಲ!

- ಕೆ. ಎಸ್. ವಿಮಲಾ, ಬೆಂಗಳೂರು

# ಪ್ರತಿಕ್ರಿಯೆ

**ಎಂ. ಎ. ಸೇತುರಾವ್**

ಇಂಗ್ಲೆಂಡಿನಲ್ಲಿ ಪ್ರಕಟವಾಗುತ್ತಿರುವ ಪ್ರತಿಷ್ಠಿತ ವೈಜ್ಞಾನಿಕ ವಾರಪತ್ರಿಕೆ 'ನೇಚರ್'. ಪ್ರಸಿದ್ಧ ವಿಜ್ಞಾನಿಗಳು ಸಾಮಾನ್ಯವಾಗಿ ತಮ್ಮ ಸಂಶೋಧನೆಗಳನ್ನು ಈ ಪತ್ರಿಕೆಯ ಮೂಲಕ ಬಹಿರಂಗ ಪಡಿಸಲು ಇಚ್ಛಿಸುತ್ತಾರೆ. ಈ ಪತ್ರಿಕೆಯ ಜೂನ್ ೧೭ರ ಸಂಚಿಕೆಯಲ್ಲಿ ಸಿಂಗಪೂರಿನ 'ನ್ಯಾಷನಲ್ ಅಕಾಡೆಮಿ ಆಫ್ ಸೈನ್ಸಸ್'ನ ಅಧ್ಯಕ್ಷರು ಮತ್ತು ಕಾರ್ಯದರ್ಶಿಗಳು ವೈಜ್ಞಾನಿಕ ಸಂಘಗಳ ಬಗ್ಗೆ ತಮ್ಮ ಅಭಿಪ್ರಾಯಗಳನ್ನು ಮಂಡಿಸಿದ್ದಾರೆ. ಸಿಂಗಪೂರಿನ ವೈಜ್ಞಾನಿಕ ಸಂಘಗಳು ಹಮ್ಮಿಕೊಂಡಿರುವ ಕಾರ್ಯ ಕ್ರಮಗಳು ಅಭಿವೃದ್ಧಿಶೀಲ ರಾಷ್ಟ್ರಗಳಿಗೆ ಮಾದರಿಯಾಗ ಬಹುದೆಂಬುದು ಅವರ ಅನಿಸಿಕೆ. ಅಭಿವೃದ್ಧಿಶೀಲ ರಾಷ್ಟ್ರಗಳು ಪ್ರಾಪಂಚಿಕ ಆರ್ಥಿಕ ವಲಯಗಳಿಂದ ದೂರ ವಿರದಂತೆ ವೈಜ್ಞಾನಿಕ ಸಂಘ ಸಂಸ್ಥೆಗಳು ನೋಡಿಕೊಳ್ಳ ಬೇಕೆಂದು ಅವರ ಒತ್ತಾಯ. ಇದು ವೈಜ್ಞಾನಿಕ ಸಂಘ ಸಂಸ್ಥೆಗಳಿಗೆ ಹಾಗೂ ರಾಷ್ಟ್ರಗಳಿಗೆ ಒಳಿತನ್ನೇ ಮಾಡುತ್ತವೆ ಯೆಂದು ಅವರ ತರ್ಕ.

ಪಾಕಿಸ್ತಾನದ ನೊಬೆಲ್ ಪ್ರಶಸ್ತಿ ವಿಜೇತರಾದ ಪ್ರೊಫೆಸರ್ ಅಬ್ದುಲ್ ಸಲಾಮ್ ಹೇಳಿರುವಂತೆ ಅಭಿವೃದ್ಧಿ ಶೀಲ ದೇಶಗಳಲ್ಲಿ ವಿಜ್ಞಾನ ಕೇವಲ ಅಲಂಕಾರಿಕ ಚಟುವಟಿಕೆಯಾಗಿದೆ. ಇವರ ಅಭಿಪ್ರಾಯ ಭಾಗಶಃ ಸತ್ಯ. ಕೇಂದ್ರದಲ್ಲಾಗಲಿ, ರಾಜ್ಯಗಳಲ್ಲಾಗಲಿ ಆಡಳಿತದ ಚುಕ್ಕಾಣಿ ಹಿಡಿದಿರುವ ಮಂತ್ರಿ ಮಹೋದಯರು ವಿಜ್ಞಾನ ಮತ್ತು ತಂತ್ರಜ್ಞಾನದ ಅಭಿವೃದ್ಧಿಗೆ ಅಷ್ಟಾಗಿ ತಲೆಕೆಡಿಸಿಕೊಂಡಿಲ್ಲ. ಪರಮಾಣು ಬಾಂಬನ್ನು ಸಿಡಿಸಿದಾಗ ಮಾತ್ರ ಬೆಚ್ಚಿಬಿದ್ದು 'ಜೈ ವಿಜ್ಞಾನ' ಎಂದು ಘೋಷಿಸುತ್ತಾರೆ. ಮಿಕ್ಕಂತೆ ವೈಜ್ಞಾನಿಕ, ತಾಂತ್ರಿಕ ಯೋಜನೆಗಳಲ್ಲಿ ಆಸ್ಥೆ ವಹಿಸುವುದು ಅಷ್ಟಕ್ಕಷ್ಟೇ!.

ಭಾರತದ ವೈಜ್ಞಾನಿಕ ಸಂಸ್ಥೆಗಳು ದೇಶದ ಕೈಗಾರಿಕಾ ಪ್ರಗತಿಯಲ್ಲಿ ಗಮನಾರ್ಹವಾದ ಪಾತ್ರವನ್ನು ವಹಿಸಿಲ್ಲವೆಂಬ ಕಟುಸತ್ಯವನ್ನು ಲೇಖನದಲ್ಲಿ ಮಂಡಿಸಲಾಗಿದೆ. ಆದರೆ, ಇದಕ್ಕೆ ಚಾರಿತ್ರಿಕ ಹಾಗೂ ಇತರ ಕಾರಣಗಳ ವಿಶ್ಲೇಷಣೆ ಇಲ್ಲ. ಪ್ರಾಪಂಚಿಕ ವ್ಯಾಪಾರ ವ್ಯವಸ್ಥೆಯಲ್ಲಿ ಮತ್ತು ಪ್ರಾಪಂಚಿಕ ಸಾರ್ವತ್ರೀಕರಣದಲ್ಲಿ ಪಾಲ್ಗೊಂಡಾಗ ಮಾತ್ರ ಪ್ರಗತಿ ಸಾಧ್ಯವೆಂಬ ಮಾತಿದೆ. ಬಂಡವಾಳದ ಕೊರತೆ, ಜನಸಂಖ್ಯೆ ಬಾಹುಳ್ಯ, ಕೆಟ್ಟ ರಾಜಕೀಯ ಪರಿಸ್ಥಿತಿ, ಕಳಕಳಿಯಿಲ್ಲದ ವೈಜ್ಞಾನಿಕ ಸಮುದಾಯಗಳಿಂದ ನರಳುತ್ತಿರುವ ನಮ್ಮ ದೇಶ ಅಂತರರಾಷ್ಟ್ರೀಯ ವಲಯಗಳಿಗೆ ಬಗ್ಗಿ ಸಲಾಂ ಮಾಡಿದರೆ ಎಲ್ಲ ಸರಿಹೋಗುತ್ತದೆಯೆಂಬುದು ಅವೈಜ್ಞಾನಿಕತೆ!

ಇತ್ತೀಚೆಗೆ ಭಾರತೀಯ ವಿಜ್ಞಾನದ ಶೃಂಗ ಸಭೆ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್‌ನಲ್ಲಿ ನಡೆದು ಹಲವು ಮುಖ್ಯ ವಿಷಯಗಳ ಬಗ್ಗೆ ಚರ್ಚೆಯಾಯಿತು. ಭಾರತದ ನಿವ್ವಳ ಉತ್ಪನ್ನದ (ಜಿಡಿಪಿ) ಶೇಕಡಾ ಆರರಷ್ಟನ್ನು ಸಂಶೋಧನೆ ಹಾಗೂ ಅಭಿವೃದ್ಧಿಗೆ ಮೀಸಲಾಗಿಡಬೇಕೆಂಬ ತೀರ್ಮಾನವನ್ನು ತೆಗೆದು ಕೊಳ್ಳ ಲಾಯಿತು. ಪ್ರತಿವರ್ಷವೂ ಎರಡು ಮೂರು ಮುಖ್ಯವಾದ ಹಾಗೂ ತುರ್ತಿನ ಕ್ಷೇತ್ರಗಳಲ್ಲಿ ಆಳವಾದ ಅಧ್ಯಯನ, ಸಂಶೋಧನೆ ಮತ್ತು ಚಟುವಟಿಕೆಗಳನ್ನು ಹಮ್ಮಿಕೊಂಡು ಅಪೇಕ್ಷಿತ ಫಲಿತಾಂಶಗಳು ದೊರಕುವಂತೆ ಕ್ರಿಯಾಶೀಲವಾಗುವುದು ಅವಶ್ಯಕ. ವೈಜ್ಞಾನಿಕ ಸಂಸ್ಥೆಗಳ ಆಡಳಿತ ವ್ಯವಸ್ಥೆ ಸರ್ಕಾರದ ವ್ಯವಸ್ಥೆ ಮತ್ತು ನಿಯಮಗಳಿಗೆ ಬದ್ಧವಾಗದೇ ತನ್ನದೇ ಆದ, ಸಂಶೋಧನೆಗೆ ಸಹಾಯ ಮಾಡುವ ವ್ಯವಸ್ಥೆಯನ್ನು ಜಾರಿಗೆ ತರಬೇಕೆಂಬ ನಿರ್ಣಯ ವನ್ನು ತೆಗೆದುಕೊಳ್ಳಲಾಯಿತು. ವೈಜ್ಞಾನಿಕ ಸಂಶೋಧನಾ ಸಂಸ್ಥೆಗಳಲ್ಲಿ ತಲೆ ಎತ್ತಿರುವ ಅಧಿಕಾರಶಾಹಿ ಪ್ರವೃತ್ತಿಗೆ ಇದು ಇತಿಶ್ರೀ ಹಾಡಬಹುದೆಂಬ ಆಶಾವಾದವನ್ನು ಸಭೆಯಲ್ಲಿ ವ್ಯಕ್ತಪಡಿಸಲಾಯಿತು.

ಸಿಂಗಪೂರಿನ ವೈಜ್ಞಾನಿಕ ಸಂಘ ಸಂಸ್ಥೆಗಳು ಸಾರ್ವಜನಿಕರಲ್ಲಿ ವಿಜ್ಞಾನದ ಬಗ್ಗೆ ಆಸಕ್ತಿಮೂಡಿಸುವ ಅನೇಕ ಕಾರ್ಯಕ್ರಮಗಳನ್ನು ನಡೆಸಿವೆಯೆಂದು ಲೇಖನದಲ್ಲಿ ವಿವರಿಸಿದೆ. ಈ ಕಾರ್ಯಕ್ರಮಗಳಿಂದ ವಿಜ್ಞಾನದ ಬೆಳವಣಿಗೆಗೆ ಸಾರ್ವಜನಿಕರ ಹಾಗೂ ಸರ್ಕಾರದ ಆರ್ಥಿಕ ಬೆಂಬಲ ದೊರಕಿದೆಯೆಂಬ ಸಂಗತಿ ವ್ಯಕ್ತ ವಾಗಿದೆ. ಭಾರತದಲ್ಲಿ ಅಸ್ತಿತ್ವದಲ್ಲಿರುವ ವಿಜ್ಞಾನಿಗಳ ಸಂಘ ಸಂಸ್ಥೆಗಳು ಈ ದಿಕ್ಕಿನಲ್ಲಿ ಕೃಷಿ ಮಾಡುವುದು ತುರ್ತು ಅಗತ್ಯವೆಂದು ಹೇಳಬಹುದು. ಭಾರತ ಸರ್ಕಾರ ಮತ್ತು ರಾಜ್ಯ ಸರ್ಕಾರಗಳು ಸಾಕಷ್ಟು ಆರ್ಥಿಕ ಬೆಂಬಲ ನೀಡುತ್ತಿಲ್ಲ ವೆಂದು ವಿಜ್ಞಾನಿಗಳು ಆಗಾಗ್ಗೆ ಮನವರಿಕೆ ಮಾಡಿಕೊಡಲು ಪ್ರಯತ್ನಿಸಿದ್ದಾರೆ. ಇಷ್ಟೇ ಸಾಲದು. ಜನಾಭಿಪ್ರಾಯ ವಿಜ್ಞಾನದ ಕಡೆಗೆ ವಾಲುವಂತೆ ಮಾಡಿ ಆ ಮೂಲಕ ಸರ್ಕಾರಗಳು ಎಚ್ಚೆತ್ತು ವೈಜ್ಞಾನಿಕ ಅಭಿವೃದ್ಧಿಗೆ ಅವಶ್ಯವಾದ ಆರ್ಥಿಕ ನೆರವನ್ನು ನೀಡಲು ಒತ್ತಾಯಿಸಬೇಕು. ಈ ಕೆಲಸಗಳಲ್ಲಿ ಸರ್ಕಾರಗಳ ಜವಾಬ್ದಾರಿಯಷ್ಟೇ ವಿಜ್ಞಾನಿಗಳದೂ ಆಗಿರುತ್ತದೆಯೆಂದು ಹೇಳಲಡ್ಡಿಯಿಲ್ಲ. ಈ ನಿಟ್ಟಿನಲ್ಲಿ ಜನತಾ ವಿಜ್ಞಾನ ಚಳುವಳಿಗಳು ಕಾರ್ಯೋನ್ಮುಖವಾಗಬೇಕು.


ಎಂ. ಎ. ಸೇತುರಾವ್
ನಂ. ೪೭೯, ಸುಬ್ರಮಣ್ಯನಗರ, ಬೆಂಗಳೂರು - ೫೬೦ ೦೨೧


# ಪರಿಸರ ಪ್ರಿಯೆ ಮನೇಕಾ

ಆಕೆ ಮೊದಲು ಮೇನಕಾ. ಅದೇಕೋ ಆಮೇಲೆ ಮನೇಕಾ ಆದಳು. ಪ್ರಾಣಿ-ಪರಿಸರಗಳ ಅಗಾಧ ಪ್ರೇಮಿಯೆಂಬ ಹೆಸರು ಹೇಗೋ ಆಕೆಗೆ ಅಂಟಿಕೊಂಡಿದೆ. ಆಕೆಯ ಗಂಡ ಸಂಜಯಗಾಂಧಿ ದೆಹಲಿಯಲ್ಲಿ ಗೂಳಿಯಂತೆ ಎಲ್ಲೆಲ್ಲೂ ನುಗ್ಗಿ ದಾಂಧಲೆ ಮಾಡುತ್ತಿದ್ದಾಗ ಈಕೆ ಚಕಾರವೆತ್ತಲಿಲ್ಲ. ಮನೆಗಳನ್ನು ಕೆಡಹುವುದು, ಬಲವಂತವಾಗಿ ಸಂತಾನ ಶಸ್ತ್ರಕ್ರಿಯೆ ಮಾಡಿಸುವುದು, ಸ್ವೇಚ್ಛೆಯಿಂದ ಇತರರನ್ನು ಹಗುರವಾಗಿ ಕಾಣುವುದು, ಸರ್ಕಾರಿ ಯಂತ್ರವನ್ನು ದುರುಳತನದ ಕೆಲಸಗಳಿಗೆ ಬಳಸಿಕೊಳ್ಳುವುದು, ಇವೆಲ್ಲಾ ಸಂಜಯಗಾಂಧಿಯ ಕೆಲವು 'ಸದ್ಗುಣ'ಗಳು. ಅದಕ್ಕೆಲ್ಲಾ ತಾಯಿ ಇಂದಿರಾ ಮತ್ತು ಪತ್ನಿ ಮೇನಕಾ ಲಗಾಮು ಹಾಕಲಿಲ್ಲ. ಸಂಜಯ ಸತ್ತಮೇಲೆ ಆತನ ಸ್ಥಾನ ಆಕ್ರಮಿಸಿ ರಾಜಕೀಯ ಮಾಡಬೇಕೆಂಬ ಉದ್ದೇಶಕ್ಕೆ ಅತ್ತೆ ಇಂದಿರಾ ಅಡ್ಡಿಮಾಡಿದ್ದು ಎಲ್ಲರಿಗೂ ಗೊತ್ತಿದೆ. ಆಗ ಹುಟ್ಟಿಕೊಂಡು ಬೇಗನೆ ಸತ್ತಿದ್ದು ಸಂಜಯ ವಿಚಾರ ಮಂಚ. (ಆತನಿಗೂ ವಿಚಾರಕ್ಕೂ ಏನು ಸಂಬಂಧವೆಂದು ಜನ ಆಗ ಮೂಗಿನ ಮೇಲೆ ಬೆರಳಿಟ್ಟುಕೊಂಡಿದ್ದರು).



ಅತ್ತೆ ಮನೆಯಿಂದ ಹೊರಬಿದ್ದ ನಂತರ ಈಕೆ ಪರಿಸರ ಪ್ರೇಮಿಯಾದಳು. ಗಂಡ ಹಾಳುಮಾಡುತ್ತಿದ್ದುದು ಪರಿಸರವನ್ನಲ್ಲವೆಂದು ಆಕೆ ಬಗೆದಿದ್ದಿರಬಹುದು. ಈಗ ಪ್ರಾಣಿದಯೆಯೂ ಆಕೆಯಲ್ಲಿ ಮೂಡಿದೆ. ಎಷ್ಟರಮಟ್ಟಿಗೆಂದರೆ ಹೈದರಾಬಾದಿನ ಒಂದು ಜೀವಶಾಸ್ತ್ರ ಸಂಶೋಧನಾ ಕೇಂದ್ರದಲ್ಲಿ ವೈಜ್ಞಾನಿಕ ಪ್ರಯೋಗಗಳಿಗೆ ಇಲಿ, ಕಪ್ಪೆ, ಮುಂತಾದ ಪ್ರಾಣಿಗಳನ್ನು ಉಪಯೋಗಿಸ ಕೂಡದೆಂದು ಆಜ್ಞೆಯನ್ನು ಹೊರಡಿಸುವಷ್ಟು. ಹೇಗೂ ಆಕೆ ಕೇಂದ್ರ ಪರಿಸರ ಮಂತ್ರಿಯಲ್ಲವೆ ?

ಪರಿಸರವನ್ನೇ ಏಕೆ, ಇಡೀ ದೇಶವನ್ನೇ ಹಾಳುಮಾಡುವ ಮನ್ಸಾಂಟೋ ಕಂಪನಿಯ ತಳಿಬೀಜ ಸಂಶೋಧನೆಗೆ ಈಕೆ ಅಡ್ಡಿಮಾಡುವುದಿಲ್ಲ. ಹತ್ತಿ ಬೀಜದ ಪರಿಷ್ಕರಣೆ ಮಾಡಿ ಭಾರತವನ್ನು ಅಮೆರಿಕದ ಬಲೆಗೆ ಬೀಳಿಸಲು ಹೊರಟಿದ್ದ ಮನ್ಸಾಂಟೋವನ್ನು ತಾತ್ಕಾಲಿಕವಾಗಿ ಹಿಮ್ಮೆಟ್ಟಿಸಿದವರು ರೈತರೇ ವಿನಾ ಮನೇಕಾ ಅಲ್ಲ. ಬೆಂಗಳೂರಿನ ಭಾರತೀಯ ವಿಜ್ಞಾನ ಮಂದಿರದಲ್ಲಿ ಮನ್ಸಾಂಟೋಗೆ ಆಶ್ರಯ ನೀಡಿದಾಗ ಈಕೆಯ ಧ್ವನಿ ಉಡುಗಿಹೋಗಿತ್ತು. ಈಗ ಅದೇ ಪೈಶಾಚಿಕ ಮನ್ಸಾಂಟೋ, ಬತ್ತದ ಬೀಜಗಳಿಗೆ ಅಮೆರಿಕದ 'ಜೀನ್' ಬೆರೆಸ ಹೊರಟಿದೆ. ಅದಕ್ಕೆ ಕೇಂದ್ರ ಸರ್ಕಾರದ ಪರವಾನಗಿಗಾಗಿ ಅರ್ಜಿ ಸಲ್ಲಿಸಿದೆ. ಅದನ್ನು ಮಾನ್ಯ ಮಾಡಿದರೆ ಮುಂದೆ ನಮ್ಮ ಭತ್ತದ ಬೆಳೆಗಾರರೆಲ್ಲಾ ಮನ್ಸಾಂಟೋ ದಾಸರಾಗಬೇಕಾಗುತ್ತದೆ. ಏಕೆಂದರೆ ಆ ಜೀನ್ ಒಡೆತನ ಆ ಕಂಪನಿಯದು. ಅದರ ಬೆಂಗಳೂರು ಸಂಶೋಧನಾ ಕೇಂದ್ರದ ನಿರ್ದೇಶಕ ಕೆ.ಪಿ. ಗೋಪಿನಾಥನ್ ಮಹಾ ಸುಳ್ಳುಗಾರ. ಮನ್ಸಾಂಟೋ ಹತ್ತಿಬೀಜವನ್ನು [illegible] ಕಪೆ ಚಿತ್ರಿಸಿ ಹಾಗೆ ಮಾಡಿಲ್ಲವೆಂದು ಹೇಳುತ್ತಿದ್ದ ಪಟಿಂಗ ಇವನು. ಈಗ ಅವನ ಮಾಲಿಕನಿಗೆ ಭತ್ತದ ಬೀಜದ ಪೇಟೆಂಟ್ ಕೊಡಿಸಲು ಹೊರಟಿದ್ದಾನೆ.

ಬೆಂಗಳೂರು ಕೇಂದ್ರದ ಸಂಶೋಧನೆಯ ಫಲವನ್ನು ಮನ್ಸಾಂಟೋ ಮತ್ತು ಭಾರತ ಇಬ್ಬರೂ ಜೊತೆಯಾಗಿ ಪೇಟೆಂಟ್ ಪಡೆಯಲು ಅವಕಾಶವಿರಬೇಕೆಂಬ ಒಪ್ಪಂದವಿರುವುದಾಗಿ ಭಾರತೀಯ ವಿಜ್ಞಾನ ಮಂದಿರದ ಹಿಂದಿನ ನಿರ್ದೇಶಕ ಜಿ. [illegible] ಹೇಳುತ್ತಾರೆ. ಮನ್ಸಾಂಟೋ ಈ ನಿಯಮವನ್ನು ಗಾಳಿಗೆ ತೂರುತ್ತಿದೆ.

ಪರಿಸರ ಪ್ರೇಮಿ ಮನೇಕಾ ಗಾಂಧಿ ಇಲಿಗಳನ್ನು ರಕ್ಷಿಸುತ್ತಾಳೆ, ಭಾರತದ ರೈತರನ್ನು ಅಮೆರಿಕಾದ ದಾಸ್ಯಕ್ಕೆ ತಳ್ಳುತ್ತಾಳೆ. ಅಂತಹ ಪರಿಸರ ಪ್ರೇಮಿಗಳು ನಮಗೆ ಬೇಡ. ಮೊದಲು ಮನ್ಸಾಂಟೋವನ್ನು ಭಾರತದಿಂದ ಹೊರದೂಡಿ ನಮ್ಮ ರೈತರ ಜೀವ ಉಳಿಸಿಕೊಳ್ಳಬೇಕು.

# ಪ್ರತಿಕ್ರಿಯೆ

ಎಂ. ಎ. ಸೇತುರಾವ್

ಇಂಗ್ಲೆಂಡಿನಲ್ಲಿ ಪ್ರಕಟವಾಗುತ್ತಿರುವ ಪ್ರತಿಷ್ಠಿತ ವೈಜ್ಞಾನಿಕ ವಾರಪತ್ರಿಕೆ 'ನೇಚರ್'. ಪ್ರಸಿದ್ಧ ವಿಜ್ಞಾನಿಗಳು ಸಾಮಾನ್ಯವಾಗಿ ತಮ್ಮ ಸಂಶೋಧನೆಗಳನ್ನು ಈ ಪತ್ರಿಕೆಯ ಮೂಲಕ ಬಹಿರಂಗ ಪಡಿಸಲು ಇಚ್ಛಿಸುತ್ತಾರೆ. ಈ ಪತ್ರಿಕೆಯ ಜೂನ್ ೧೭ರ ಸಂಚಿಕೆಯಲ್ಲಿ ಸಿಂಗಪೂರಿನ 'ನ್ಯಾಷನಲ್ ಅಕಾಡೆಮಿ ಆಫ್ ಸೈನ್ಸಸ್'ನ ಅಧ್ಯಕ್ಷರು ಮತ್ತು ಕಾರ್ಯದರ್ಶಿಗಳು ವೈಜ್ಞಾನಿಕ ಸಂಘಗಳ ಬಗ್ಗೆ ತಮ್ಮ ಅಭಿಪ್ರಾಯಗಳನ್ನು ಮಂಡಿಸಿದ್ದಾರೆ. ಸಿಂಗಪೂರಿನ ವೈಜ್ಞಾನಿಕ ಸಂಘಗಳು ಹಮ್ಮಿಕೊಂಡಿರುವ ಕಾರ್ಯಕ್ರಮಗಳು ಅಭಿವೃದ್ಧಿಶೀಲ ರಾಷ್ಟ್ರಗಳಿಗೆ ಮಾದರಿಯಾಗಬಹುದೆಂಬುದು ಅವರ ಅನಿಸಿಕೆ. ಅಭಿವೃದ್ಧಿಶೀಲ ರಾಷ್ಟ್ರಗಳು ಪ್ರಾಪಂಚಿಕ ಆರ್ಥಿಕ ವಲಯಗಳಿಂದ ದೂರವಿರದಂತೆ ವೈಜ್ಞಾನಿಕ ಸಂಘ ಸಂಸ್ಥೆಗಳು ನೋಡಿಕೊಳ್ಳಬೇಕೆಂದು ಅವರ ಒತ್ತಾಯ. ಇದು ವೈಜ್ಞಾನಿಕ ಸಂಘ ಸಂಸ್ಥೆಗಳಿಗೆ ಹಾಗೂ ರಾಷ್ಟ್ರಗಳಿಗೆ ಒಳಿತನ್ನೇ ಮಾಡುತ್ತವೆಯೆಂದು ಅವರ ತರ್ಕ.

ಪಾಕಿಸ್ತಾನದ ನೊಬೆಲ್ ಪ್ರಶಸ್ತಿ ವಿಜೇತರಾದ ಪ್ರೊಫೆಸರ್ ಅಬ್ದುಲ್ ಸಲಾಮ್ ಹೇಳಿರುವಂತೆ ಅಭಿವೃದ್ಧಿಶೀಲ ದೇಶಗಳಲ್ಲಿ ವಿಜ್ಞಾನ ಕೇವಲ ಅಲಂಕಾರಿಕ ಚಟುವಟಿಕೆಯಾಗಿದೆ. ಇವರ ಅಭಿಪ್ರಾಯ ಭಾಗಶಃ ಸತ್ಯ. ಕೇಂದ್ರದಲ್ಲಾಗಲಿ, ರಾಜ್ಯಗಳಲ್ಲಾಗಲಿ ಆಡಳಿತದ ಚುಕ್ಕಾಣಿ ಹಿಡಿದಿರುವ ಮಂತ್ರಿ ಮಹೋದಯರು ವಿಜ್ಞಾನ ಮತ್ತು ತಂತ್ರಜ್ಞಾನದ ಅಭಿವೃದ್ಧಿಗೆ ಅಷ್ಟಾಗಿ ತಲೆಕೆಡಿಸಿಕೊಂಡಿಲ್ಲ. ಪರಮಾಣು ಬಾಂಬನ್ನು ಸಿಡಿಸಿದಾಗ ಮಾತ್ರ ಬೆಚ್ಚಿಬಿದ್ದು 'ಜೈ ವಿಜ್ಞಾನ' ಎಂದು ಘೋಷಿಸುತ್ತಾರೆ. ಮಿಕ್ಕಂತೆ ವೈಜ್ಞಾನಿಕ, ತಾಂತ್ರಿಕ ಯೋಜನೆಗಳಲ್ಲಿ ಆಸ್ಥೆ ವಹಿಸುವುದು ಅಷ್ಟಕ್ಕಷ್ಟೇ!.

ಭಾರತದ ವೈಜ್ಞಾನಿಕ ಸಂಸ್ಥೆಗಳು ದೇಶದ ಕೈಗಾರಿಕಾ ಪ್ರಗತಿಯಲ್ಲಿ ಗಮನಾರ್ಹವಾದ ಪಾತ್ರವನ್ನು ವಹಿಸಿಲ್ಲವೆಂಬ ಕಟುಸತ್ಯವನ್ನು ಲೇಖನದಲ್ಲಿ ಮಂಡಿಸಲಾಗಿದೆ. ಆದರೆ, ಇದಕ್ಕೆ ಚಾರಿತ್ರಿಕ ಹಾಗೂ ಇತರ ಕಾರಣಗಳ ವಿಶ್ಲೇಷಣೆ ಇಲ್ಲ. ಪ್ರಾಪಂಚಿಕ ವ್ಯಾಪಾರ ವ್ಯವಸ್ಥೆಯಲ್ಲಿ ಮತ್ತು ಪ್ರಾಪಂಚಿಕ ಸಾರ್ವತ್ರೀಕರಣದಲ್ಲಿ ಪಾಲ್ಗೊಂಡಾಗ ಮಾತ್ರ ಪ್ರಗತಿ ಸಾಧ್ಯವೆಂಬ ಮಾತಿದೆ. ಬಂಡವಾಳದ ಕೊರತೆ, ಜನಸಂಖ್ಯೆ ಬಾಹುಳ್ಯ, ಕೆಟ್ಟ ರಾಜಕೀಯ ಪರಿಸ್ಥಿತಿ, ಕಳಕಳಿಯಿಲ್ಲದ ವೈಜ್ಞಾನಿಕ ಸಮುದಾಯಗಳಿಂದ ನರಳುತ್ತಿರುವ ನಮ್ಮ ದೇಶ ಅಂತರರಾಷ್ಟ್ರೀಯ ವಲಯಗಳಿಗೆ ಬಗ್ಗಿ ಸಲಾಂ ಮಾಡಿದರೆ ಎಲ್ಲ ಸರಿಹೋಗುತ್ತದೆಯೆಂಬುದು ಅವೈಜ್ಞಾನಿಕತೆ!

ಇತ್ತೀಚೆಗೆ ಭಾರತೀಯ ವಿಜ್ಞಾನದ ಶೃಂಗ ಸಭೆ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್‌ನಲ್ಲಿ ನಡೆದು ಹಲವು ಮುಖ್ಯ ವಿಷಯಗಳ ಬಗ್ಗೆ ಚರ್ಚೆಯಾಯಿತು. ಭಾರತದ ನಿವ್ವಳ ಉತ್ಪನ್ನದ (ಜಿಡಿಪಿ) ಶೇಕಡಾ ಆರರಷ್ಟನ್ನು ಸಂಶೋಧನೆ ಹಾಗೂ ಅಭಿವೃದ್ಧಿಗೆ ಮೀಸಲಾಗಿಡಬೇಕೆಂಬ ತೀರ್ಮಾನವನ್ನು ತೆಗೆದು ಕೊಳ್ಳಲಾಯಿತು. ಪ್ರತಿವರ್ಷವೂ ಎರಡು ಮೂರು ಮುಖ್ಯವಾದ ಹಾಗೂ ತುರ್ತಿನ ಕ್ಷೇತ್ರಗಳಲ್ಲಿ ಆಳವಾದ ಅಧ್ಯಯನ, ಸಂಶೋಧನೆ ಮತ್ತು ಚಟುವಟಿಕೆಗಳನ್ನು ಹಮ್ಮಿಕೊಂಡು ಅಪೇಕ್ಷಿತ ಫಲಿತಾಂಶಗಳು ದೊರಕುವಂತೆ ಕ್ರಿಯಾಶೀಲವಾಗುವುದು ಅವಶ್ಯಕ. ವೈಜ್ಞಾನಿಕ ಸಂಸ್ಥೆಗಳ ಆಡಳಿತ ವ್ಯವಸ್ಥೆ ಸರ್ಕಾರದ ವ್ಯವಸ್ಥೆ ಮತ್ತು ನಿಯಮಗಳಿಗೆ ಬದ್ಧವಾಗದೇ ತನ್ನದೇ ಆದ, ಸಂಶೋಧನೆಗೆ ಸಹಾಯ ಮಾಡುವ ವ್ಯವಸ್ಥೆಯನ್ನು ಜಾರಿಗೆ ತರಬೇಕೆಂಬ ನಿರ್ಣಯವನ್ನು ತೆಗೆದುಕೊಳ್ಳಲಾಯಿತು. ವೈಜ್ಞಾನಿಕ ಸಂಶೋಧನಾ ಸಂಸ್ಥೆಗಳಲ್ಲಿ ತಲೆ ಎತ್ತಿರುವ ಅಧಿಕಾರಶಾಹಿ ಪ್ರವೃತ್ತಿಗೆ ಇದು ಇತಿಶ್ರೀ ಹಾಡಬಹುದೆಂಬ ಆಶಾವಾದವನ್ನು ಸಭೆಯಲ್ಲಿ ವ್ಯಕ್ತಪಡಿಸಲಾಯಿತು.

ಸಿಂಗಪೂರಿನ ವೈಜ್ಞಾನಿಕ ಸಂಘ ಸಂಸ್ಥೆಗಳು ಸಾರ್ವಜನಿಕರಲ್ಲಿ ವಿಜ್ಞಾನದ ಬಗ್ಗೆ ಆಸಕ್ತಿಮೂಡಿಸುವ ಅನೇಕ ಕಾರ್ಯಕ್ರಮಗಳನ್ನು ನಡೆಸಿವೆಯೆಂದು ಲೇಖನದಲ್ಲಿ ವಿವರಿಸಿದೆ. ಈ ಕಾರ್ಯಕ್ರಮಗಳಿಂದ ವಿಜ್ಞಾನದ ಬೆಳವಣಿಗೆಗೆ ಸಾರ್ವಜನಿಕರ ಹಾಗೂ ಸರ್ಕಾರದ ಆರ್ಥಿಕ ಬೆಂಬಲ ದೊರಕಿದೆಯೆಂಬ ಸಂಗತಿ ಸ್ಪಷ್ಟವಾಗಿದೆ. ಭಾರತದಲ್ಲಿ ಅಸ್ತಿತ್ವದಲ್ಲಿರುವ ವಿಜ್ಞಾನಿಗಳ ಸಂಘ ಸಂಸ್ಥೆಗಳು ಈ ದಿಕ್ಕಿನಲ್ಲಿ ಕೃಷಿ ಮಾಡುವುದು ತುರ್ತು ಅಗತ್ಯವೆಂದು ಹೇಳಬಹುದು. ಭಾರತ ಸರ್ಕಾರ ಮತ್ತು ರಾಜ್ಯ ಸರ್ಕಾರಗಳು ಸಾಕಷ್ಟು ಆರ್ಥಿಕ ಬೆಂಬಲ ನೀಡುತ್ತಿಲ್ಲ ವೆಂದು ವಿಜ್ಞಾನಿಗಳು ಆಗಾಗ್ಗೆ ಮನವರಿಕೆ ಮಾಡಿಕೊಡಲು ಪ್ರಯತ್ನಿಸಿದ್ದಾರೆ. ಇಷ್ಟೇ ಸಾಲದು. ಜನಾಭಿಪ್ರಾಯ ವಿಜ್ಞಾನದ ಕಡೆಗೆ ವಾಲುವಂತೆ ಮಾಡಿ ಆ ಮೂಲಕ ಸರ್ಕಾರಗಳು ಎಚ್ಚೆತ್ತು ವೈಜ್ಞಾನಿಕ ಅಭಿವೃದ್ಧಿಗೆ ಅವಶ್ಯವಾದ ಆರ್ಥಿಕ ನೆರವನ್ನು ನೀಡಲು ಒತ್ತಾಯಿಸಬೇಕು. ಈ ಕೆಲಸಗಳಲ್ಲಿ ಸರ್ಕಾರಗಳ ಜವಾಬ್ದಾರಿಯಷ್ಟೇ ವಿಜ್ಞಾನಿಗಳದೂ ಆಗಿರುತ್ತದೆಯೆಂದು ಹೇಳಲಡ್ಡಿಯಿಲ್ಲ. ಈ ನಿಟ್ಟಿನಲ್ಲಿ ಜನತಾ ವಿಜ್ಞಾನ ಚಳುವಳಿಗಳು ಕಾರ್ಯೋನ್ಮುಖವಾಗಬೇಕು.

ಎಂ. ಎ. ಸೇತುರಾವ್
ನಂ. ೪೨೦೯, ಸುಬ್ರಮಣ್ಯನಗರ, ಬೆಂಗಳೂರು - ೫೬೦ ೦೨೧

# ಪರಿಸರ ಪ್ರಿಯೆ ಮನೇಕಾ

ಆಕೆ ಮೊದಲು ಮೇನಕಾ. ಅದೇಕೋ ಆಮೇಲೆ ಮನೇಕಾ ಆದಳು. ಪ್ರಾಣಿ-ಪರಿಸರಗಳ ಅಗಾಧ ಪ್ರೇಮಿಯೆಂಬ ಹೆಸರು ಹೇಗೋ ಆಕೆಗೆ ಅಂಟಿಕೊಂಡಿದೆ. ಆಕೆಯ ಗಂಡ ಸಂಜಯಗಾಂಧಿ ದೆಹಲಿಯಲ್ಲಿ ಗೂಳಿಯಂತೆ ಎಲ್ಲೆಲ್ಲೂ ನುಗ್ಗಿ ದಾಂಧಲೆ ಮಾಡುತ್ತಿದ್ದಾಗ ಈಕೆ ಚಕಾರವೆತ್ತಲಿಲ್ಲ. ಮನೆಗಳನ್ನು ಕೆಡಹುವುದು, ಬಲವಂತವಾಗಿ ಸಂತಾನ ಶಸ್ತ್ರಕ್ರಿಯೆ ಮಾಡಿಸುವುದು, ಸ್ವೇಚ್ಛೆಯಿಂದ ಇತರರನ್ನು ಹಗುರವಾಗಿ ಕಾಣುವುದು, ಸರ್ಕಾರಿ ಯಂತ್ರವನ್ನು ದುರುಳತನದ ಕೆಲಸಗಳಿಗೆ ಬಳಸಿಕೊಳ್ಳುವುದು, ಇವೆಲ್ಲಾ ಸಂಜಯಗಾಂಧಿಯ ಕೆಲವು 'ಸದ್ಗುಣ'ಗಳು. ಅದಕ್ಕೆಲ್ಲಾ ತಾಯಿ ಇಂದಿರಾ ಮತ್ತು ಪತ್ನಿ ಮೇನಕಾ ಲಗಾಮು ಹಾಕಲಿಲ್ಲ. ಸಂಜಯ ಸತ್ತಮೇಲೆ ಆತನ ಸ್ಥಾನ ಆಕ್ರಮಿಸಿ ರಾಜಕೀಯ ಮಾಡಬೇಕೆಂಬ ಉದ್ದೇಶಕ್ಕೆ ಅತ್ತೆ ಇಂದಿರಾ ಅಡ್ಡಿಮಾಡಿದ್ದು ಎಲ್ಲರಿಗೂ ಗೊತ್ತಿದೆ. ಆಗ ಹುಟ್ಟಿಕೊಂಡು ಬೇಗನೆ ಸತ್ತಿದ್ದು ಸಂಜಯ ವಿಚಾರ ಮಂಚ. (ಆತನಿಗೂ ವಿಚಾರಕ್ಕೂ ಏನು ಸಂಬಂಧವೆಂದು ಜನ ಆಗ ಮೂಗಿನ ಮೇಲೆ ಬೆರಳಿಟ್ಟುಕೊಂಡಿದ್ದರು).



ಅತ್ತೆ ಮನೆಯಿಂದ ಹೊರಬಿದ್ದ ನಂತರ ಈಕೆ ಪರಿಸರ ಪ್ರೇಮಿಯಾದಳು. ಗಂಡ ಹಾಳುಮಾಡುತ್ತಿದ್ದುದು ಪರಿಸರವನ್ನಲ್ಲವೆಂದು ಆಕೆ ಬಗೆದಿದ್ದಿರಬಹುದು. ಈಗ ಪ್ರಾಣಿದಯೆಯೂ ಆಕೆಯಲ್ಲಿ ಮೂಡಿದೆ. ಎಷ್ಟರಮಟ್ಟಿಗೆಂದರೆ ಹೈದರಾಬಾದಿನ ಒಂದು ಜೀವಶಾಸ್ತ್ರ ಸಂಶೋಧನಾ ಕೇಂದ್ರದಲ್ಲಿ ವೈಜ್ಞಾನಿಕ ಪ್ರಯೋಗಗಳಿಗೆ ಇಲಿ, ಕಪ್ಪೆ, ಮುಂತಾದ ಪ್ರಾಣಿಗಳನ್ನು ಉಪಯೋಗಿಸಕೂಡದೆಂದು ಆಜ್ಞೆಯನ್ನು ಹೊರಡಿಸುವಷ್ಟು. ಹೇಗೂ ಆಕೆ ಕೇಂದ್ರ ಪರಿಸರ ಮಂತ್ರಿಯಲ್ಲವೆ ?

ಪರಿಸರವನ್ನೇ ಏಕೆ, ಇಡೀ ದೇಶವನ್ನೇ ಹಾಳುಮಾಡುವ ಮನ್ಸಾಂಟೋ ಕಂಪನಿಯ ತಳಿಬೀಜ ಸಂಶೋಧನೆಗೆ ಈಕೆ ಅಡ್ಡಿಮಾಡುವುದಿಲ್ಲ. ಹತ್ತಿ ಬೀಜದ ಪರಿಷ್ಕರಣೆ ಮಾಡಿ ಭಾರತವನ್ನು ಅಮೆರಿಕದ ಬಲೆಗೆ ಬೀಳಿಸಲು ಹೊರಟಿದ್ದ ಮನ್ಸಾಂಟೋವನ್ನು ತಾತ್ಕಾಲಿಕವಾಗಿ ಹಿಮ್ಮೆಟ್ಟಿಸಿದವರು ರೈತರೇ ವಿನಾ ಮನೇಕಾ ಅಲ್ಲ. ಬೆಂಗಳೂರಿನ ಭಾರತೀಯ ವಿಜ್ಞಾನ ಮಂದಿರದಲ್ಲಿ ಮನ್ಸಾಂಟೋಗೆ ಆಶ್ರಯ ನೀಡಿದಾಗ ಈಕೆಯ ಧ್ವನಿ ಉಡುಗಿಹೋಗಿತ್ತು. ಈಗ ಅದೇ ಪೈಶಾಚಿಕ ಮನ್ಸಾಂಟೋ, ಬತ್ತದ ಬೀಜಗಳಿಗೆ ಅಮೆರಿಕದ 'ಜೀನ್' ಬೆರೆಸ ಹೊರಟಿದೆ. ಆದಕ್ಕೆ ಕೇಂದ್ರ ಸರ್ಕಾರದ ಪರವಾನಗಿಗಾಗಿ ಅರ್ಜಿ ಸಲ್ಲಿಸಿದೆ. ಅದನ್ನು ಮಾನ್ಯ ಮಾಡಿದರೆ ಮುಂದೆ ನಮ್ಮ ಭತ್ತದ ಬೆಳೆಗಾರರೆಲ್ಲಾ ಮನ್ಸಾಂಟೋ ದಾಸರಾಗಬೇಕಾಗುತ್ತದೆ. ಏಕೆಂದರೆ ಆ ಜೀನ್ ಒಡೆತನ ಆ ಕಂಪನಿಯದು. ಅದರ ಬೆಂಗಳೂರು ಸಂಶೋಧನಾ ಕೇಂದ್ರದ ನಿರ್ದೇಶಕ ಕೆ.ಪಿ. ಗೋಪಿನಾಥನ್ ಮಹಾ ಸುಳ್ಳುಗಾರ. ಮನ್ಸಾಂಟೋ ಹತ್ತಿಬೀಜವನ್ನು ಕೆಲವು ಕಡೆ ಬಿತ್ತಿಸಿ ಹಾಗೆ ಮಾಡಿಲ್ಲವೆಂದು ಹೇಳುತ್ತಿದ್ದ ಪಟಿಂಗ ಇವನು. ಈಗ ಅವನ ಮಾಲಿಕನಿಗೆ ಭತ್ತದ ಬೀಜದ ಪೇಟೆಂಟ್ ಕೊಡಿಸಲು ಹೊರಟಿದ್ದಾನೆ.

ಬೆಂಗಳೂರು ಕೇಂದ್ರದ ಸಂಶೋಧನೆಯ ಫಲವನ್ನು ಮನ್ಸಾಂಟೋ ಮತ್ತು ಭಾರತ ಇಬ್ಬರೂ ಜೊತೆಯಾಗಿ ಪೇಟೆಂಟ್ ಪಡೆಯಲು [illegible] ಒಪ್ಪಂದವಿರುವುದಾಗಿ ಭಾರತೀಯ ವಿಜ್ಞಾನ ಮಂದಿರದ ಹಿಂದಿನ ನಿರ್ದೇಶಕ [illegible] ಹೇಳುತ್ತಾರೆ. ಮನ್ಸಾಂಟೋ ಈ ನಿಯಮವನ್ನು ಗಾಳಿಗೆ ತೂರುತ್ತಿದೆ.

ಪರಿಸರ ಪ್ರೇಮಿ ಮನೇಕಾ ಗಾಂಧಿ ಇಲಿಗಳನ್ನು ರಕ್ಷಿಸುತ್ತಾಳೆ. ಭಾರತದ ರೈತರನ್ನು ಅಮೆರಿಕಾದ ದಾಸ್ಯಕ್ಕೆ ತಳ್ಳುತ್ತಾಳೆ. ಅಂತಹ ಪರಿಸರ ಪ್ರೇಮಿಗಳು ನಮಗೆ ಬೇಡ. ಮೊದಲು ಮನ್ಸಾಂಟೋವನ್ನು ಭಾರತದಿಂದ ಹೊರದೂಡಿ ನಮ್ಮ ರೈತರ ಜೀವ ಉಳಿಸಿಕೊಳ್ಳಬೇಕು.

# ದೇವ ಮಾನವ ಹಾಗೂ ಸಾಮಾನ್ಯ ಮಾನವ

ಎಸ್. ಗುರುದತ್

ಪ್ರಾಣಪ್ರತಿಷ್ಠಾಪನೆಗೊಳಿಸಿದ ದೇವವಿಗ್ರಹಕ್ಕೆ ಭೂಮಾಲೀ ಕತ್ವ ವಹಿಸಬಹುದಾದರೆ, ಅದಕ್ಕೆ ಸಾಮಾನ್ಯ ಪ್ರಜೆಯ ಕಾಯಿದೆ ಅನ್ವಯಿಸಬಹುದಾದರೆ, ದೇವಮಾನವನ ಶರೀರಕ್ಕೆ ಅದೇ ಕಾನೂನು ಪದ್ಧತಿಯನ್ನು ಜಾರಿಮಾಡುವುದರಲ್ಲಿ ಬಾಧೆಯೇನಿದೆ?

ನಮ್ಮ ದೇಶ (ಹಾಗೂ ವಿದೇಶಿ ಮೂಲದ) ಆಶ್ರಮ, ಮಠ, ದೇವಸ್ಥಾನಗಳಲ್ಲಿ ನಡೆಯುವ ಕಳವು, ಕೊಲೆ, ಸಂಚು, ಚುನಾವಣಾ ಯುಕ್ತಿ, ಲೈಂಗಿಕ ಪ್ರಸಂಗಗಳು ಇತ್ಯಾದಿ ಅಪರೂಪದ ಸುದ್ದಿಯೇನಲ್ಲ. ಇಂತಹ ಬಿಸಿ ಸುದ್ದಿಗಳು ಪತ್ರಿಕೆಗಳಲ್ಲಿ ಆಗಿಂದಾಗ್ಗೆ ವರದಿಯಾಗುತ್ತಲೇ ಇರುತ್ತವೆ. ಸಾರ್ವಜನಿಕರು ಈ ವರದಿಗಳನ್ನೇನೋ ಕುತೂಹಲ ದಿಂದಲೇ ಓದುತ್ತಾರೆ. ಆದರೆ ಬಹುತೇಕ ಮಂದಿ ಅವನ್ನು ಓದಿದ ಮರುಕ್ಷಣದಲ್ಲಿಯೇ ಮರೆತುಬಿಡುವುದೂ ಸರ್ವೇಸಾಮಾನ್ಯ. ಆದರೆ ಇಂಡಿಯನ್ ಸ್ಕೆಪ್ಟಿಕ್ (ಭಾರತೀಯ ಸಂಶಯವಾದಿ) ಪತ್ರಿಕೆಯ ಸಂಪಾದಕರಾದ ಬಿ. ಪ್ರೇಮಾನಂದ್ ಇಂತಹ ಘಟನೆಗಳನ್ನು ಸುಲಭವಾಗಿ ಮರೆಯುವವರಲ್ಲ. ಅದರಲ್ಲೂ ಸ್ವಯಂಘೋಷಿತ ದೇವಮಾನವರ ಬಗ್ಗೆ ಅವರಿಗೆ ವಿಶೇಷವಾದ ಆಸಕ್ತಿ.

ದಿ|| ೬-೬-೧೯೯೩ರಲ್ಲಿ ಪುಟ್ಟಪರ್ತಿಯಲ್ಲಿ ಹಠಾತ್ತಾಗಿ ನಡೆದ ಆಶ್ರಮವಾಸಿಗಳ ಕಗ್ಗೊಲೆ ಪ್ರೇಮಾನಂದರ ಕುತೂಹಲವನ್ನು ಕೆರಳಿಸಿರುವ ಒಂದು ಪ್ರಕರಣ. ಸತ್ಯಸಾಯಿಯ ಸನ್ನಿಧಿಯಲ್ಲಿ ಹತ್ಯೆ ಹೇಗೆ ನಡೆಯಲು ಸಾಧ್ಯ? ಈ ಸಾಮೂಹಿಕ ಕೊಲೆಯ ಸುಳಿವು ಮುಂಚಿತವಾಗಿಯೇ ಅವರ ದಿವ್ಯದೃಷ್ಟಿಗೆ ಗೋಚರಿಸಲಿಲ್ಲವೇ? ಹತ್ಯೆಯ ಪೂರ್ವದರ್ಶನವಾಗಿದ್ದರೂ ಸಹ, 'ಅದು ನಡೆದು ಹೋಗಲಿ' ಎಂದು ಸುಮ್ಮನಾದರೇ, ಹೇಗೆ? ಈ ಕೊಲೆಗೆ ಬಲಿಯಾದವರು ಮಾಡಿದ್ದಿರಬಹುದಾದ ಪಾಪಕೃತ್ಯವಾದರೂ ಏನು?



ವಿಭೂತಿ ಸೃಷ್ಟಿಯ ಕೈಚಳಕವನ್ನು ವಿವರಿಸುತ್ತಿದ್ದಾರೆ ಪ್ರೇಮಾನಂದ್

ಇಂತಹ ಸಂಶಯಗಳಿಗೆ ಉತ್ತರ ಕಂಡು ಕೊಳ್ಳುವ ಸಲುವಾಗಿ ಸಂಶಯವಾದಿ ಪ್ರೇಮಾ ನಂದರು ರೂ. ೫೦೦/-ರ ಬ್ಯಾಂಕ್ ಡ್ರಾಫ್ಟ್ ಸಹಿತ ದೆಹಲಿಯ ಸರ್ವೋಚ್ಚ ನ್ಯಾಯಾಲಯಕ್ಕೆ ಒಂದು ಮನವಿ ಸಲ್ಲಿಸಿ, ಪುಟ್ಟಪರ್ತಿ ಕೊಲೆಗಳನ್ನು ಕುರಿತ ವಿವರಣೆ ಕೋರಿದರು. ಆ ನ್ಯಾಯಾಲಯದ ಅಸಿಸ್ಟೆಂಟ್ ರಿಜಿಸ್ಟ್ರಾರ್ ಅವರು ಸಂಬಂಧಪಟ್ಟ (ಆಂಧ್ರಪ್ರದೇಶದ) ಸರ್ಕಾರಿ ಇಲಾಖೆಯಲ್ಲಿ ವಿಚಾರಿಸಿ ಎಂದು ಉತ್ತರಿಸಿದರು (೨೬-೧೧-೯೮). ಪ್ರೇಮಾನಂದರು ಇನ್ನೊಂದು ಬ್ಯಾಂಕ್ ಡ್ರಾಫ್ಟ್ ಸಹಿತ ತಮ್ಮ ಅಹವಾಲನ್ನು ಮುಖ್ಯಮಂತ್ರಿ ಚಂದ್ರಬಾಬು ನಾಯ್ಡು ಅವರ ಮುಂದಿಟ್ಟರು (೭-೧೨-೯೮). ನೀವು ಈ ಕೇಸನ್ನು ಮುಕ್ತಾಯಗೊಳಿಸುವಂತೆ ಹೊರಡಿಸಿರುವ ಗೋಪ್ಯ ಸರ್ಕಾರಿ ಆದೇಶದ ಪ್ರತಿಗಳನ್ನೂ, ಸಿಬಿ-ಸಿಐಡಿ ಈ ಮೊಕದ್ದಮೆಯ ಬಗ್ಗೆ ತಯಾರಿಸಿರುವ ತನಿಖಾ ವರದಿಯನ್ನು ದಯವಿಟ್ಟು ಕಳುಹಿಸಿಕೊಡಿ ಎಂದು ಕೇಳಿಕೊಂಡರು. ಹಾಗೆ ಮಾಡುವಂತೆ ಸರ್ವೋಚ್ಚ ನ್ಯಾಯಾಲಯ ತನಗೆ ಆದೇಶ ನೀಡಿದೆ ಎಂದೂ ಬರೆದರು.

ಪ್ರೇಮಾನಂದರು ಆಂಧ್ರ ಸರ್ಕಾರದಿಂದ ಉತ್ತರಕ್ಕಾಗಿ ಇನ್ನೂ ಕಾಯುತ್ತಲೇ ಇದ್ದಾರೆ. ಅತ್ತ ಪುಟ್ಟಪರ್ತಿ ಪ್ರಕರಣವನ್ನು ತನಿಖೆ ಮಾಡಿದ್ದ ಸಿಬಿ-ಸಿಐಡಿ ಮಹಾನಿರ್ದೇಶಕರನ್ನು (ಸರ್ವೋಚ್ಚ ನ್ಯಾಯಾಲಯದ ಆದೇಶಕ್ಕೆ ವಿರುದ್ಧವಾಗಿ) ವರ್ಗಾವಣೆ ಮಾಡಲಾಗಿದೆಯೆಂದು ತಿಳಿದು ಬಂದಿದೆ. ಸಾಯಿಬಾಬಾ ಅವರ ಮಾಂತ್ರಿಕ ಶಕ್ತಿ ಇಲ್ಲೂ ಸಾಕಷ್ಟು ಯಶಸ್ವಿಯಾಗಿದೆಯೆಂದೇ ತೋರುತ್ತದೆ!

ಪುಟ್ಟಪರ್ತಿ ಕೊಲೆಯನ್ನು ಮುಚ್ಚಿ ಹಾಕುವವರಲ್ಲಿ ಕೆಲವು ಬಲಿಷ್ಠ ರಾಜಕಾರಣ [illegible] 'ಗಣ್ಯ' ವ್ಯಕ್ತಿಗಳ ಕೈವಾಡವಿದೆ [illegible] ಪ್ರೇಮಾನಂದರ ಶಂಕೆ. ಗಣ್ಯ ವ್ಯಕ್ತಿಗಳ ಪ್ರಭಾವವಿಲ್ಲದಿದ್ದರೆ ಈ ಕೇಸನ್ನು ಬಯಲಿಗೆಳೆಯಬಹುದೆಂಬುದು ಅವರ ನಂಬಿಕೆ. ಹೀಗೆ ಒಂದಾದ ಮೇಲೆ ಇನ್ನೊಂದರಂತೆ ಹಗರಣಗಳನ್ನು ಶೋಧಿಸುತ್ತಾ ಸಾರ್ವಜನಿಕರ ಗಮನವನ್ನು ಸೆಳೆದರೆ ನಮ್ಮ ವ್ಯವಸ್ಥೆಯನ್ನು ಸರಿಪಡಿಸ ಬಹುದೆಂಬ ವಿಶ್ವಾಸ ಅವರಿಗಿದ್ದಂತಿದೆ.

ಪುಟ್ಟಪರ್ತಿ ಘಟನೆ ಮತ್ತು ಅಂತಹ ಅನೇಕ ಪ್ರಕರಣಗಳೇನೊ ಪತ್ರಿಕೆಗಳಲ್ಲಿ ರೋಚಕ ಸುದ್ದಿಯಾಗಿ ಕಾಣಿಸಿಕೊಳ್ಳುತ್ತವೆ, ನಿಜ. ಆದರೆ ಇಲ್ಲಿ ಕಾಳಜಿ ಬೇರೆ ರೀತಿಯದ್ದಾಗಿದೆ. ಬಾಬಾರವರ ಮಂತ್ರಮಾಟಕ್ಕಿಂತ ಇನ್ನೂ ವ್ಯಾಪಕವಾದ ಸಂಕೀರ್ಣವಾದ ಮೋಡಿಗೆ ಸಾಮಾನ್ಯಜನರು ಬಲೆಗೆ ಬಿದ್ದಿರಬಹುದಲ್ಲವೇ? ವೈಯಕ್ತಿಕ ಹಗರಣಗಳನ್ನು ಬೆನ್ನಟ್ಟಿಕೊಂಡು ಹೋಗುವ ಹವ್ಯಾಸದಲ್ಲಿ ತೊಡಗಿರುವಾತ, ಒಂದೊಂದೇ ಮರವನ್ನು ಪ್ರತ್ಯೇಕವಾಗಿ ಗುರುತಿಸುವುದರಲ್ಲಿ ಮಗ್ನವಾಗಿರುವವನು ಕಾಡನ್ನು ಇಡಿಯಾಗಿ ನೋಡಲಾರ ದವನಂತಾಗುವ ಅಪಾಯವಿದೆಯಲ್ಲವೇ?

ದೇವಮಾನವರ ಗೊಂದಲವನ್ನು ಬೇರೊಂದು ಲೋಕದೃಷ್ಟಿಯ ಪ್ರಕಾರ ಸಮಸ್ಯಾತ್ಮಕಗೊಳಿ (problematize) ನೋಡಿದಾಗ ಆ ಗೋಜಲಿನ ಮೂಲಗಳನ್ನು ಹುಡುಕುವ ಸಾಧ್ಯತೆಗಳು ಕಂಡುಬರುತ್ತವೆ.

(ಅ) ಬಹುಜನರ ಆಸೆ ಆಕಾಂಕ್ಷೆಗಳು ಈಡೇರದಂಥ ಅಸಮಾನ ಸಾಮಾಜಿಕ ಸಂಬಂಧ ದಲ್ಲಿ ಸ್ಥಾಪಿತವಾದಾಗ, ಸಮಾಜದಲ್ಲಿ ತೀವ್ರತರ ವಾದ ಏರುಪೇರುಗಳು ಉಂಟಾದಾಗ, ಸಾಮಾನ್ಯ ಜನರ ಭಾವನೆಗಳು ನಿತ್ಯ ಜೀವನದ ವಾಸ್ತವಿಕತೆ ಯಿಂದ ಬೇರ್ಪಟ್ಟು ಭ್ರಮಾತ್ಮಕ ಲೋಕದಲ್ಲಿ ಅಭಿವ್ಯಕ್ತಿ ಪಡೆಯಲು ಹವಣಿಸುತ್ತವೆ. ನಮ್ಮ ದೇಶದ ವಿಶಿಷ್ಟ ಚಾರಿತ್ರಿಕ-ಸಾಂಸ್ಕೃತಿಕ ಸಂದರ್ಭದಲ್ಲಿ, ಪರಕೀಯಗೊಂಡ ಇಂಥ ಭಾವನೆಗಳು ಅವತಾರ ಪುರುಷರ ಹಾಗೂ ದೇವಮಾನವರ ಪರಿಕಲ್ಪನೆಯಲ್ಲಿ ಪರಿಹಾರ ಕಂಡುಕೊಂಡಿವೆಯೆಂದು ತೋರುತ್ತದೆ. ನಮ್ಮಿಂದ ಪರಕೀಯಗೊಂಡ ಭಾವನೆಗಳೇ ಅತಿಮಾನುಷ ಪಾತ್ರಗಳನ್ನು ಸೃಷ್ಟಿಸಿವೆಯಾದರೂ ಆ ಪಾತ್ರಗಳು ವಾಸ್ತವ ಜಗತ್ತಿಗಿಂತ ಹೆಚ್ಚು ಅರ್ಥಪೂರ್ಣವೆಂಬಂತೆ ತೋರುತ್ತಿವೆ.

ನಮ್ಮ ದೇಶದಲ್ಲಿ ಹಿಂದೆ ಮತ್ತು ಇಂದು ಆಳುವ ವರ್ಗವು ಅಲ್ಪ ಸಂಖ್ಯಾತರ ಭಾರೀ ಆಸ್ತಿವಂತರ ವರ್ಗ. ಸರ್ವಜನರ ಅಪ್ಪಟ ಪ್ರತಿನಿಧಿ ತಾನು ಎಂದು ತೋರಿಸಿಕೊಳ್ಳ ಬೇಕಾದ ತುರ್ತು ಅದಕ್ಕೆ ಯಾವತ್ತೂ ಇದ್ದೇ ಇದೆ. ಬಹುಜನರ ಪರವಾಗಿ ಅಧಿಕಾರ ಚಲಾಯಿಸುವುದಕ್ಕೆ, ಎಲ್ಲ ವರ್ಗಗಳ ಕಣ್ಣಲ್ಲಿ ತನ್ನನ್ನು ಅಸಲಿಗೊಳಿಸಿಕೊಳ್ಳುವುದಕ್ಕಾಗಿ ಈ ಅಲ್ಪವರ್ಗ ಏನೆಲ್ಲ ಉಪಾಯಗಳನ್ನು ಹೂಡುತ್ತದೆ ! ಯಾವ ದೇವಸ್ಥಾನ ಬಲು ಜನಪ್ರಿಯ ವೆನಿಸಿದೆಯೋ ಅಂಥ ಗುಡಿಗಂಟೆ ಬಾರಿಸಿಯೇ ಅದರ ಪ್ರತಿನಿಧಿಗಳು ಚುನಾವಣಾ ಪ್ರಚಾರಕ್ಕಿಳಿಯುವರು. ನಾಯಕ ಮಣಿಗಳೆನಿಸಿಕೊಂಡವರು ದೇವಮಾನವರ ಕಾಲಿಗೆ ಬಿದ್ದು ಅವರ ಆಶೀರ್ವಚನವನ್ನು ಸ್ವೀಕರಿಸುತ್ತಾ, ಆ ದೃಶ್ಯವನ್ನು ಪ್ರಸಾರ ಮಾಧ್ಯಮಗಳ ಮೂಲಕ ಪ್ರದರ್ಶಿಸಿದ್ದಾದರೆ ಆ ದೇವಮಾನವರ ಹಿಂದಿರುವ ಶಿಷ್ಯಕೋಟಿಯೂ ತಮ್ಮನ್ನೇ ನಿಜ ನಾಯಕರೆಂದು ನಂಬಲಾರರೇ? ಇದಕ್ಕೆ ಪ್ರತಿಯಾಗಿ ದೇವಮಾನವರ ಕೃತ್ಯಗಳು ಬಯಲಾಗದಂತೆ ನೋಡಿಕೊಳ್ಳುವ ಹಂಚಿಕೆಯನ್ನು ರಾಜಕಾರಣಿಗಳು ಹೊಸೆಯಲಾರರೇ? ಒಂದು ಕಡೆ ಧರ್ಮದ ಹೆಸರಿನಲ್ಲಿ ಮೆರೆಯುತ್ತಿರುವ ವ್ಯಕ್ತಿಗಳು ಹಾಗೂ ಸಂಸ್ಥೆಗಳು, ಮತ್ತೊಂದು ಕಡೆ ಆಳುವ ವರ್ಗದ ಪ್ರತಿನಿಧಿಗಳು-ಇವರ ನಡುವಿನ ಕೊಡು-ಕೊಳ್ಳುವ ಬಾಂಧವ್ಯ ಅನೇಕಾನೇಕ ಪ್ರಕಟಿತ ಅಪ್ರಕಟಿತ ರೂಪಗಳನ್ನು ಪಡೆಯುತ್ತಿರುತ್ತವೆ. ಆ ನಂಟು ಬಹು ಪುರಾತನವಾದದ್ದು; ಎಂದೇ ಅದು ಪವಿತ್ರವೂ ಹೌದು!

(ಆ) ದೇವಮಾನವನ ಆತ್ಮವೇನೋ ಅಗೋಚರ, ಅಸ್ಪೃಶ್ಯ: ಯಾವ ಕಟ್ಟುಪಾಡಿಗೂ ಎಟುಕದ ವಸ್ತು ಅದು. ಆದಾಗ್ಯೂ ಆ ಆತ್ಮವು ಒಂದು ಭೌತಿಕ ಶರೀರವನ್ನು ಹೊಕ್ಕಿದೆ. ಇತರ ಸಾಮಾನ್ಯ ಜೀವಂತ ಶರೀರಗಳಂತೆ ದೇವಮಾನವನ ಶರೀರವೂ ಅನ್ನಪಾನೀಯಗಳನ್ನು ಸ್ವೀಕರಿಸುತ್ತದೆ. ಅಷ್ಟು ಮಾತ್ರವಲ್ಲ, ಇತರ ಸಾಮಾನ್ಯ ಶರೀರಗಳೊಂದಿಗೆ ಅದು ಇಹಲೋಕದ ವ್ಯಾಪಾರದಲ್ಲಿ ಬಹುಮಟ್ಟಿಗೆ ತೊಡಗಿದೆ: ಇತರ ವ್ಯಕ್ತಿಗಳಿಗೆ (ಮಂಕು) ಬೂದಿಯನ್ನೋ, ವಾಚು ಉಂಗುರಗಳನ್ನೋ, ಗುಂಡಿನೇಟನ್ನೋ ಕೊಡುವ ವ್ಯವಹಾರ ಅದಾಗಿರಬಹುದು.

ಪ್ರಜೆಗಳ ನಡುವೆ ನಡೆಯುವ ವ್ಯವಹಾರಗಳು – ಹಿಂದಿನ ಕಾಲದ ಸಮಾಜಗಳಲ್ಲಿ ದೈವಭಯದಿಂದ ನಡೆಯುತ್ತಿದ್ದ 'ನ್ಯಾಯ' ವಿಫಲವಾಗಿದ್ದರಿಂದ ಈಗ ಪ್ರಜೆಗಳೇ ರಚಿಸಿಕೊಂಡಿರುವ ಸಂವಿಧಾನದ ಚೌಕಟ್ಟಿನೊಳಗೆ ಜಾರಿಮಾಡಲಾಗಿರುವ ಶಾಸನಬದ್ಧವಾದ ಕಾಯಿದೆಗೆ ಆ ವ್ಯವಹಾರಗಳು ಒಳಪಟ್ಟಿರಬೇಕೆಂದು ಒಪ್ಪಿಕೊಳ್ಳಲಾಗಿದೆಯಷ್ಟೆ. ಹೀಗಿರುವಾಗ, ದೇವಮಾನವನ ಶರೀರಕ್ಕೆ, ಅದು ಆಗಿಂದಾಗ್ಗೆ ತೊಡಗುವ ವ್ಯವಹಾರಕ್ಕೆ ಆತನ ಆತ್ಮವನ್ನು ಹೊರತುಪಡಿಸಿ – ಈ ಸರ್ವಸಮ್ಮತವಾದ ಕಾಯಿದೆಯನ್ನು ಅನ್ವಯಿಸುವುದರಲ್ಲಿ ತಪ್ಪೇನಿದೆ?

ಬಿಹಾರ ರಾಜ್ಯದಲ್ಲಿ ಎರಡು ದೇವರ ನಡುವೆ ಜಮೀನು ಒಡೆತನಕ್ಕೆ ಸಂಬಂಧಿಸಿದಂತೆ ವಿವಾದ ಉಂಟಾಗಿ, ಆ ವ್ಯಾಜ್ಯ ಸರ್ವೋಚ್ಚ ನ್ಯಾಯಾಲಯದ ವರೆಗೂ ಹೋಯಿತು. ಈ ಎರಡು ದೇವರಲ್ಲಿ ಒಂದು ಖೋಟಾ ಎಂದೂ ಇನ್ನೊಂದು ನಿಜ ದೇವನೆಂದೂ ಆ ಇನ್ನೊಂದರ ಹೆಸರಿನಲ್ಲಿಯೇ –ಅದಕ್ಕೆ ಪ್ರಾಣಪ್ರತಿಷ್ಠಾಪನೆ ಆಗಿರುವುದರಿಂದ– ಜಮೀನು ಒಡೆತನದ ಖಾತಾ ಮಾಡಿಸಬೇಕೆಂದು ಸರ್ವೋಚ್ಚ ನ್ಯಾಯಾಲಯ ಹಿಂದೂ ಕಾಯಿದೆ ಪ್ರಕಾರ ಇತ್ತೀಚೆಗೆ ತೀರ್ಪನ್ನು ನೀಡಿದೆ. ಪ್ರಾಣ ಪ್ರತಿಷ್ಠಾಪನೆಗೊಳಿಸಿದ ದೇವ ವಿಗ್ರಹಕ್ಕೆ ಭೂಮಾಲೀಕತ್ವ ವಹಿಸಬಹುದಾದರೆ, ಅದಕ್ಕೆ ಸಾಮಾನ್ಯ ಪ್ರಜೆಯ ಕಾಯಿದೆ ಅನ್ವಯಿಸಬಹುದಾದರೆ, ದೇವಮಾನವನ ಶರೀರಕ್ಕೂ ಅದೇ ಕಾನೂನು ಪದ್ಧತಿಯನ್ನು ಜಾರಿಮಾಡುವುದರಲ್ಲಿ ಬಾಧೆಯೇನಿದೆ? ಇಂತಹ ವಿಚಾರಲಹರಿಯನ್ನು ಮಧ್ಯಮವರ್ಗ ಬುದ್ಧಿವಂತರು ಬೆಳೆಸಿಕೊಂಡರೆ ನಮ್ಮ ಪ್ರಜಾಪ್ರಭುತ್ವ ಒಂದಿಷ್ಟು ಅರ್ಥಪೂರ್ಣವಾದೀತು ಎಂದೆನಿಸುತ್ತದೆ.

(ಇ) ದೇವಮಾನವರು ತಾವು ಎಂದು ಘೋಷಿಸಿಕೊಂಡವರಲ್ಲಿ ನಿಜಕ್ಕೂ ಅತಿಮಾನುಷವಾದ ಶಕ್ತಿ ಯಾ ಗುಣ ಏನಾದರೂ ಇದೆಯೇ? ನಿಸರ್ಗದ ನಿಯಮಗಳನ್ನು ಅವರು ಉಲ್ಲಂಘಿಸಬಲ್ಲರೇ? ಇಂತಹ ವೈಜ್ಞಾನಿಕ ಸಮೀಕ್ಷೆಯ ಪ್ರಶ್ನೆಗಳನ್ನು ಕೇಳುತ್ತಾ ಹೋದರೆ ದೇವಮಾನವರ ಸತ್ಯಾಸತ್ಯತೆಯನ್ನು ಕಂಡುಹಿಡಿಯಬಹುದು ಎಂಬುದು ಕೆಲವು ವಿಜ್ಞಾನಿ-ಶಿಕ್ಷಕ ವಿಚಾರವಾದಿಗಳ ಅಭಿಮತ. ಆದರೆ ನಿಸರ್ಗ ನಿಯಮದ ಸಿದ್ಧಾಂತಗಳನ್ನು ಅಷ್ಟೇನೂ ಗ್ರಹಿಸದ ಜಾದೂಗಾರರು ವಿಜ್ಞಾನಿಗಳಿಗಿಂತ ಹೆಚ್ಚು ಪರಿಣಾಮಕಾರಿಯಾದ ರೀತಿಯಲ್ಲಿ ದೇವಮಾನವರನ್ನು ಆಗಲೇ ಬಯಲಿಗೆಳೆದಿದ್ದಾರಲ್ಲ? ದೇವಮಾನವರ ಸಮಸ್ಯೆಯನ್ನು ಕೇವಲ ಪ್ರಕೃತಿ ವಿಜ್ಞಾನಕ್ಕೆ ಸಂಬಂಧಿಸಿದ ಸಮಸ್ಯೆಯೆಂದು ಭಾವಿಸಿ, ಅದನ್ನು ಪ್ರಾಕೃತಿಕ ವಿಜ್ಞಾನದ ಮಟ್ಟಕ್ಕೆ ಇಳಿಸಿ, ಭೌತಿಕ ವಿಜ್ಞಾನವು ಪ್ರಕೃತಿಯ ಪ್ರಕ್ರಿಯೆಗಳನ್ನು ಅನ್ವೇಷಿಸುವಾಗ ಕೇಳುವಂಥ ಪ್ರಶ್ನೆಗಳನ್ನು ಹಾಕುತ್ತಾ ಕುಳಿತರೆ, ಮತ್ತಷ್ಟು ದೇವಮಾನವರು ಸೃಷ್ಟಿಯಾಗುತ್ತಾ ಹೋಗುತ್ತಾರೆ ಎಂಬುದನ್ನು ಈ ಬಗೆಯ ವಿಚಾರವಾದಿಗಳು ಮನವರಿಕೆ ಮಾಡಿಕೊಳ್ಳಬೇಕಾಗಿದೆ.

ದೇವಮಾನವರ ಮೂಲವು ಮೇಲೆ ಸೂಚಿಸಲಾಗಿರುವಂತೆ (ಅ) ಏರುಪೇರಾಗಿರುವ ಸಾಮಾಜಿಕ ಸಂಬಂಧಗಳಲ್ಲಿ ಅಡಗಿದೆ. (ಆ) ವ್ಯಕ್ತಿ-ವ್ಯಕ್ತಿಗಳ ನಡುವಿನ ಅಂತರ ಕ್ರಿಯೆಯನ್ನು ಮೇಲೆ ಹೇಳಿರುವಂತೆ ಇನ್ನೂ ವ್ಯಾಪಕವಾಗಿ, ಆಳವಾಗಿ ಪ್ರಜಾಪ್ರಭುತ್ವವಾದಿ ಪ್ರಕ್ರಿಯೆಗಳಿಗೆ ಒಳಪಡಿಸಬೇಕಾಗಿದೆ. ಇದಾಗುವ ತನಕ ಒಬ್ಬ ದೇವಮಾನವನ ಮಾಟ ಆಟಗಳನ್ನು ಬಯಲಿಗೆಳೆಯುತ್ತಿದ್ದಂತೆಯೇ ಮತ್ತೊಬ್ಬ ಮಗದೊಬ್ಬ ದೇವಮಾನವ-ಅತೃಪ್ತ ಜನಸಮೂಹಕ್ಕೆ ಹುಸಿ ತೃಪ್ತಿಯನ್ನು ಒದಗಿಸಲು-ಅವತರಿಸುತ್ತಲೇ ಇರುತ್ತಾನೆ.

**ಎಸ್. ಗುರುದತ್**
ನಂ. ೬. 'ಶ್ರೀನಿವಾಸ', ಜವರಯ್ಯ ಗಾರ್ಡನ್ ಬಡಾವಣೆ, ಗಂಗಮ್ಮ ದೇವಸ್ಥಾನದ ಹತ್ತಿರ,
೩ನೇ ಬ್ಲಾಕ್, ತ್ಯಾಗರಾಜನಗರ, ಬೆಂಗಳೂರು - ೫೬೦ ೦೨೮

# ಎಷ್ಟೊಂದು ಗ್ರಹಣಗಳು!!

**ಡಾ|| ಬಿ. ಎಸ್. ಶೈಲಜಾ**

ಅಂಟಾರೆಸ್ ನಕ್ಷತ್ರದೊಡನೆ ಸ್ಪರ್ಧಿಸಿ ಮುನ್ನಡೆದ ಕೆಂಪು ಗ್ರಹ ನಿಮಗೊಂದು ಹೊಸ ವಿಷಯ ತಿಳಿಸಿತಲ್ಲವೆ? ದಿನ ದಿನಕ್ಕೆ ಅದು ಸ್ಥಾನ ಬದಲಿಸಿತು. ಅಲ್ಲದೆ ಪೂರ್ವದತ್ತ ಚಲಿಸಿತು ಎಂಬುದೇ ಈ ಹೊಸ (!) ವಿಷಯ. ಹೀಗೆ ಖಗೋಳದಲ್ಲಿ ಅಲೆದಾಡುವುದರಿಂದಲೇ ಗ್ರಹಗಳಿಗೆ ಅಲೆಮಾರಿಗಳು (ಪ್ಲಾನೆಟ್ ಎಂಬ ಪದದ ಅರ್ಥ ಅಲೆಮಾರಿ ಎಂದು) ಎಂಬ ಹೆಸರು. ಅಲೆಮಾರಿತನದಲ್ಲಿ ಮೊದಲ ಸ್ಥಾನ ಚಂದ್ರನಿಗೆ. ಎಲ್ಲರನ್ನೂ ಹಿಂದೆ ಹಾಕಿ ಪೂರ್ವಕ್ಕೆ ಓಡುವುದರಲ್ಲಿ ಈ ಕಾಯ ನಕ್ಷತ್ರಗಳನ್ನು ಮಾತ್ರವಲ್ಲದೆ ಗ್ರಹಗಳನ್ನೂ ಮುಚ್ಚಬಹುದು. ಇವೆಲ್ಲವೂ ಒಂದು ಬಗೆಯ ಗ್ರಹಣಗಳೇ.

ಐದನೇ ತಾರೀಖು ಶುಕ್ರಗ್ರಹ ಚಂದ್ರನಿಂದ ಸುಮಾರು ೫ ಡಿಗ್ರಿಯಷ್ಟು ದಕ್ಷಿಣಕ್ಕಿರುತ್ತದೆ. ಚಂದ್ರನಿಗೂ ಶುಕ್ರಕ್ಕೂ ನಡುವೆ ಮಿನುಗುವ ನಕ್ಷತ್ರವೇ ಮಘಾ ನಕ್ಷತ್ರ (ರೆಗ್ಯುಲಸ್). ಚಂದ್ರ ಇದನ್ನು ಮರೆಮಾಡಿ ಉಂಟು ಮಾಡುವ ಗ್ರಹಣ ಕೆನಡಿಯನ್ನರಿಗೆ ಮಾತ್ರ ಕಾಣುವುದು.

ಆರನೆಯ ತಾರೀಖು ಬೆಳಿಗ್ಗೆ ಚಂದ್ರ ದೂರ ಸರಿದಿರುವುದರ ಜೊತೆಗೇ, ಶುಕ್ರ ಮತ್ತು ಮಘಾ ನಕ್ಷತ್ರಗಳ ಅಂತರ ಮೂರು




ಡಿಗ್ರಿಗೆ ಇಳಿದಿರುವುದನ್ನು ಗಮನಿಸಬಹುದು.

ಒಂಭತ್ತರಂದು ಸಂಜೆ ೫ ಗಂಟೆಗೆ ಅಮಾವಾಸ್ಯೆ. ಹನ್ನೊಂದರ ಸಂಜೆ ಬಿದಿಗೆ ಚಂದ್ರ ಕಂಡರೆ ಅದಕ್ಕೆ ಏಳು ಡಿಗ್ರಿಗಳಷ್ಟು ದಕ್ಷಿಣಕ್ಕೆ ಬುಧ ಗ್ರಹ ನೋಡಲು ಸಿಗುವುದು.

ನೆಪ್ಚೂನ್ ಮತ್ತು ಯುರೇನಸ್‌ಗಳನ್ನು ನೋಡಬೇಕೆಂಬ ಆಸೆ ಇರುವವರಿಗೆ ಒಂದು ಸದವಕಾಶ - ಅಲ್ಲ - ಎರಡು ಅವಕಾಶಗಳಿವೆ - ೧೮ರಂದು ಮತ್ತು ೧೯ರಂದು, ಚಂದ್ರ ಇವುಗಳ ಮುಂದೆ ಹಾದು ಗ್ರಹಣ ಉಂಟುಮಾಡಿದಾಗ. ಈ ಎರಡೂ ''ಗ್ರಹಣ''ಗಳು ನಮ್ಮ ಹಗಲಿನಲ್ಲಿ ನಡೆಯುತ್ತವೆ. ಆದರೆ ಈ ಕಾರಣ ನಿರಾಶರಾಗಬೇಕಾಗಿಲ್ಲ. ಸಂಜೆ ಚಂದ್ರನನ್ನು ದೂರದರ್ಶಕದಲ್ಲಿ ಅಥವಾ ದುರ್ಬೀನಿನಲ್ಲಿ ಗಮನಿಸಿ. ಅದರ ಅಂಚಿನಲ್ಲಿ (ಪಶ್ಚಿಮದಲ್ಲಿ) ಹುಡುಕಿದಲ್ಲಿ ''ಗ್ರಹಣ ಮುಕ್ತ'' ವಾದ ಗ್ರಹ ಪತ್ತೆ. ೧೮ರಂದು ನೆಪ್ಚೂನ್, ೧೯ರಂದು ಯುರೇನಸ್‌ನನ್ನು ಹೀಗೆ ಗುರುತಿಸಿ, ಚಂದ್ರ ದೂರ ಸರಿದ ಮೇಲೂ (ಮುಂದಿನ ದಿನಗಳಲ್ಲಿ) ಹುಡುಕುವ ಪ್ರಯತ್ನ ಮಾಡಿ.

ಹತ್ತೊಂಬತ್ತರಂದು ಸೂರ್ಯನಿಗೆ ನೇರವಾಗಿ ಎದುರಾಗುವ ಗ್ರಹವೇ ಗುರು. ಮೇಷ ರಾಶಿಯಲ್ಲಿರುವ ಇದು ಸೂರ್ಯಾಸ್ತವಾಗುತ್ತಿದ್ದಂತೆಯೇ ಪೂರ್ವದಲ್ಲಿ ಕಾಣುತ್ತದೆ. ಈ ಕಾರಣ ರಾತ್ರಿ ಇಡೀ ''ಗುರು ದರ್ಶನ'' ಸಾಧ್ಯ.

೨೫ರಂದು ಚಂದ್ರನ ಮೂರು ಡಿಗ್ರಿದಕ್ಷಿಣಕ್ಕಿರುವ ಗ್ರಹಣವೇ ಶನಿ. ೨೭ ರಂದು ''ರೋಹಿಣಿ ಗ್ರಹಣ''. ಚಂದ್ರ ರೋಹಿಣಿಯೊಡನೆ ಆಡುವ ಈ ಆಟ ರಷ್ಯಾದ ಉತ್ತರ ಭಾಗದವರಿಗೆ ಮಾತ್ರ ಲಭ್ಯ. ನಮಗೆ



ಕಾಣುವುದು ಅವುಗಳ ಸಾಮಿಪ್ಯ ಮಾತ್ರ.

೨೫ರ ಬೆಳಿಗ್ಗೆ ೩^{1}/_{2}ಯ ಹೊತ್ತಿಗೆ. ಹುಣ್ಣಿಮೆ ಚಂದ್ರನ ಆಸುಪಾಸಿನಲ್ಲಿ 'ಅಶ್ವಿನಿ'ಯನ್ನು ಹುಡುಕಿ. ಆಶ್ವಯುಜ ಮಾಸಕ್ಕೂ ಅಶ್ವಿನಿಗೂ ನಂಟು ಏನೆಂದು ತಿಳಿಯುತ್ತದೆ.

ಅಕ್ಟೋಬರ್ ಸಂಜೆಯ ನೆತ್ತಿಯಲ್ಲಿ ಕಂಗೊಳಿಸುವುವು ಎರಡು ಹಕ್ಕಿಗಳು. ಒಂದನ್ನೊಂದು ಹಿಂಬಾಲಿಸಿ ಹಾರುವಂತೆ ಕಾಣುವ ಇವು ಉತ್ತರ ದಿಕ್ಕಿಗೆ ವಲಸೆ ಹೊರಟಿವೆಯೇನೋ ಎನ್ನುವಂತಿದೆ. ಆದರೆ ವಾಸ್ತವವಾಗಿ ಈ ಅವಧಿಯಲ್ಲಿ ಹಕ್ಕಿಗಳ ವಲಸೆ ದಕ್ಷಿಣಕ್ಕಲ್ಲವೆ ? ಆದ್ದರಿಂದ ಈ ಆಕೃತಿಗಳನ್ನು ಯೂರೋಪಿಯನ್ನರು ತಲೆಕೆಳಗಾಗಿ ಊಹಿಸಿಕೊಂಡರು. ಸಿಗ್ನಸ್ (ರಾಜಹಂಸ) ಎಂಬುದು ನಮ್ಮಲ್ಲಿಯ ಹೆಸರು. ಅಕ್ವಿಲಾ ಎಂಬುದು ಇನ್ನೊಂದು. ಗರುಡ ಎಂದು [illegible]. ಸಿಗ್ನಸ್‌ನ ಪಕ್ಕದ್ದೇ ಲೈರಾ ಅಥವಾ ವೀಣಾ. ಈ ಮೂರು ಪ್ರಮುಖ ನಕ್ಷತ್ರಗಳಿಂದ ಒಂದು ತ್ರಿಭುಜವನ್ನು [illegible] ಬಹುದಲ್ಲವೆ ! ಅದಕ್ಕೆ ಬೇಸಿಗೆಯ ತ್ರಿಕೋಣ ಎಂದರು ಪಾಶ್ಚಾತ್ಯರು.

ಗರುಡನ ಕೊಕ್ಕಿಯ ನಕ್ಷತ್ರ [illegible] - [illegible] ಯಾವ ರಾಶಿಯಲ್ಲಿದೆ ನೋಡಿದಿರಾ ? [illegible] ಗಳಲ್ಲಂತೂ ಅಲ್ಲ.

ಡಾ|| ಬಿ. ಎಸ್. ಶೈಲಜಾ
[illegible]
[illegible] ರಸ್ತೆ, ಬೆಂಗಳೂರು - [illegible]

# ಶಾಸಕರ ಸವಲತ್ತುಗಳು – ಒಂದು ಇಣುಕು ನೋಟ

ಸೆಪ್ಟೆಂಬರ್ ೫ ಮತ್ತು ೧೧ ರಂದು ಕರ್ನಾಟಕದ ಜನತೆ ವಿಧಾನಸಭೆಗೆ ೨೨೪ ಜನ ಹಾಗೂ ಲೋಕಸಭೆಗೆ ೨೮ ಸದಸ್ಯರನ್ನು ಚುನಾಯಿಸುವ ಸಲುವಾಗಿ ತಮ್ಮ ಮತ ಚಲಾಯಿಸಿದ್ದಾರೆ. ಚುನಾವಣೆಯ ಅಬ್ಬರ ಮುಗಿದಿದೆ. ಅಕ್ಟೋಬರ್ ವೇಳೆಗೆ ಫಲಿತಾಂಶಗಳು ಹೊರಬೀಳಲಿವೆ. ರಾಜ್ಯ ಮತ್ತು ರಾಷ್ಟ್ರಮಟ್ಟದಲ್ಲಿ ಈ ಬಾರಿಯ ಚುನಾವಣೆ ಮತ್ತೊಂದು ಮೈಲಿಗಲ್ಲು. ಫಲಿತಾಂಶಗಳು ಪ್ರಕಟವಾದನಂತರ ಪಕ್ಷಾಂತರ, ರಾಜಕೀಯ ಮಾರುಕಟ್ಟೆಯಲ್ಲಿ ಎಂ.ಎಲ್.ಎ., ಎಂ.ಪಿ.ಗಳ ಹರಾಜು, ಮಂತ್ರಿಗಳಾಗುವ ತರಾತುರಿ ಎಲ್ಲವೂ ನಮ್ಮ ನಿಮ್ಮಂಥವರನ್ನು ದಂಗುಬಡಿಸಲಿವೆ. ಖಿನ್ನ ಮನಸ್ಸಿನವರಾಗುವವರೇ ಜಾಸ್ತಿ.

ಈ ಎಲ್ಲ ಗಲಿಬಿಲಿಗಳ ಮಧ್ಯೆ ನಮ್ಮ ಪ್ರಜಾಪ್ರತಿನಿಧಿಗಳು ಸಂಸತ್ತಿನಲ್ಲಿ ಮತ್ತು ಶಾಸನ ಸಭೆಗಳಲ್ಲಿ ಹೇಗೆ ಕೆಲಸ ಮಾಡುತ್ತಾರೆಂಬುದನ್ನು ಗಮನಿಸಬೇಕು. ಸರ್ಕಾರದಿಂದ ಅವರಿಗೆ ದಕ್ಕುವ ಸೌಲಭ್ಯಗಳೇನು? ಈ ಸವಲತ್ತುಗಳು ಹೇಗೆ ಊರ್ಜಿತ ವಾಗುತ್ತವೆ? ಇವೆಲ್ಲವೂ ಜನಸಾಮಾನ್ಯರ ಕಣ್ಣು ತಪ್ಪಿಸಿ ಹೋಗುವ ವಿಷಯಗಳು. ಈ ವಿವರಗಳನ್ನು ತಿಳಿದರೆ ರಾಜಕಾರಣವನ್ನು ಇನ್ನೂ ಚೆನ್ನಾಗಿ ಅರ್ಥೈಸಬಹುದು.

ಸದ್ಯಕ್ಕೆ ವಿಧಾನಸಭಾ ಮತ್ತು ವಿಧಾನಪರಿಷತ್ ಸದಸ್ಯರ ಕುರಿತ ವಿವರಗಳು ಹೀಗಿವೆ.

**ಶಾಸಕರ ಸಂಬಳ ಮತ್ತು ಭತ್ಯೆಗಳು :-**

| | |
|---|---|
| ಸಂಬಳ | ೩,೫೦೦-೦೦ |
| ಟೆಲಿಫೋನ್ ವೆಚ್ಚ | ೨,೦೦೦-೦೦ |
| ಇತರೆ ಭತ್ಯೆಗಳು | ೨,೫೦೦-೦೦ |
| ಅಂಚೆ ವೆಚ್ಚ | ೫೦೦-೦೦ |
| ಆಪ್ತ ಸಹಾಯಕ ಮತ್ತು ದಲಾಯತೆ | ೨,೦೦೦-೦೦ |
| ಒಟ್ಟು | ೧೦,೫೦೦-೦೦ |

ಸಂಬಳಕ್ಕಿಂತ ಭತ್ಯೆಗಳು ಹಾಗೂ ಇತರೆ ಸೌಲಭ್ಯಗಳು ಹೆಚ್ಚು ದೊರೆಯುತ್ತವೆ. ಸಂಬಳ ಕಡಿಮೆ ನಿಗದಿ ಮಾಡಿರುವುದಕ್ಕೆ ತೆರಿಗೆ ವಿನಾಯ್ತಿ ಉದ್ದೇಶವೂ ಇದೆ. ಇವರಲ್ಲಿರುವ ಭತ್ಯೆಗಳನ್ನು ಹಲವಾರು ಶಾಸಕರು ಸದುಪಯೋಗಪಡಿಸಿಕೊಳ್ಳುತ್ತಿಲ್ಲ. ಮತ್ತು ಟೆಲಿಫೋನ್ ಬಾಡಿಗೆಯನ್ನು ಪ್ರತ್ಯೇಕವಾಗಿ ನೀಡಲಾಗುತ್ತಿದೆ.

**ಶಾಸಕರು ಭಾಗವಹಿಸುವ ಸಭೆಗಳ ಭತ್ಯೆಗಳು**

ಶಾಸಕರಿಗೆ ಅಧಿವೇಶನಗಳು, ಶಾಸಕಾಂಗ ಸಮಿತಿಗಳು ಹಾಗೂ ಇತರೆ ಸಭೆಗಳಲ್ಲಿ ಭಾಗವಹಿಸಿದರೆ ದಿನಕ್ಕೆ ೪೦೦-೦೦ ರೂ. ದೊರೆಯುವುದು. ಒಂದು ವರ್ಷದಲ್ಲಿ ೧೦೦ ದಿನಗಳು ವಿಧಾನಸಭಾ ಅಧಿವೇಶನ ನಡೆಯಲು ಅವಕಾಶವಿದ್ದು ಸುಮಾರು ೭೦ ದಿನಗಳು ಅಧಿವೇಶನ ನಡೆಯುತ್ತದೆ. ಇದರ ಜೊತೆಗೆ ೧೭ ಶಾಸಕಾಂಗ ಸಮಿತಿಗಳಿವೆ. ಈ ಸಮಿತಿಗಳಲ್ಲಿ ೧೦ರಿಂದ ೧೫ ಸದಸ್ಯರಿರುತ್ತಾರೆ. ಪ್ರತಿ ತಿಂಗಳೂ ೨ ಸಭೆ ಸಾಮಾನ್ಯವಾಗಿ ನಡೆಯುತ್ತವೆ. ಈ ಎಲ್ಲಾ ಸಭೆಗಳಲ್ಲಿ ಹಾಜರಾಗುವ ಸದಸ್ಯರಿಗೆ ಪ್ರತಿದಿನ ೪೦೦-೦೦ ರೂ.

ಇಷ್ಟು ಅನುಕೂಲವಿದ್ದರೂ ಅಧಿವೇಶನಗಳಲ್ಲಿ ಹಾಗೂ ಶಾಸಕಾಂಗ ಸಮಿತಿಗಳ ಸಭೆಗಳಲ್ಲಿ ಭಾಗ ವಹಿಸುವ ಬಹುಪಾಲು ಸದಸ್ಯರು ಅಧ್ಯಯನ ನಡೆಸುವುದಿಲ್ಲವೆಂಬ ಆಪಾದನೆ ಇದೆ. ಆಸಕ್ತಿಯಿಂದ ಸಭೆಯಲ್ಲಿ ಭಾಗವಹಿಸದಿರುವದು ವರದಿ ಯಾಗುತ್ತಿರುತ್ತದೆ.

**ಶಾಸಕರ ಪ್ರಯಾಣದ ಭತ್ಯೆಗಳು**

ಶಾಸಕರು ಈ ಸಭೆಗಳಿಗೆ ಬಂದು ಹೋಗಲು ಎರಡು ಕಡೆಗೆ ಪ್ರತಿ ಕಿ.ಮೀ.ಗೆ ೬-೦೦ ರೂ. ನೀಡಲಾಗುವುದು. ಅವರು ಯಾವುದೇ ವಾಹನದಲ್ಲಿ

**ಎನ್. ಪಿ. ಜಗದೀಶ್**

ಬೇಕಾದರೂ ಬರಬಹುದು. ಉಚಿತ ಪಾಸ್ ಸೌಲಭ್ಯ ಕೂಡ ಇದೆ. ಜೊತೆಯಲ್ಲಿ ಒಬ್ಬರನ್ನು ಕರೆದುಕೊಂಡು ಹೋಗಲು ಅವಕಾಶವಿದೆ. ಬೆಂಗಳೂರಿನಲ್ಲೇ ಇದ್ದು, ಸಭೆಗಾಗಿ ದೂರದಿಂದ ಬಂದು ಹೋದುದಾಗಿ ಮಾಹಿತಿ ನೀಡಿ ಭತ್ಯೆ ಪಡೆಯುವ ಪ್ರಕರಣಗಳಿಗೆ ಲೆಕ್ಕವಿಲ್ಲ.

**ವಾಹನ ಖರೀದಿಗೆ ಮುಂಗಡ ಹಣ**

ಶಾಸಕರು ತಮಗೆ ಮೋಟಾರುವಾಹನ ಕೊಳ್ಳಲು ೨ ಲಕ್ಷ ರೂ.ಗಳನ್ನು ಮುಂಗಡವಾಗಿ ಪಡೆಯಬಹುದು. ದ್ವಿಚಕ್ರ ವಾಹನ ಕೊಳ್ಳಲು ೮,೦೦೦ ರೂ.ಗಳ ಸೌಲಭ್ಯವಿದೆ. ಇದಕ್ಕೆ ಶೇಕಡ ಬಡ್ಡಿ ೧೨%. ಬಹುತೇಕ ಶಾಸಕರು ಈ ಸೌಲಭ್ಯ ಪಡೆದಿದ್ದಾರೆ. ಇದರಿಂದ ಶಾಸಕರ ಕ್ಷೇತ್ರಗಳಿಗೆ ಎಷ್ಟು ಪ್ರಯೋಜನವಾಗಿದೆ ಎಂಬುದು ಮತದಾರರಿಗೆ ತಿಳಿದಿದೆ. ದಿ|| ಡಿ. ದೇವರಾಜ ಅರಸ್ ಮುಖ್ಯ ಮಂತ್ರಿಗಳಾಗಿದ್ದಾಗ ಶಾಸಕರು ಪಡೆದ ಈ ಸಾಲವನ್ನು ಮನ್ನಾ ಮಾಡಿದ ಉದಾಹರಣೆಯುಂಟು.

**ಮರ-ಜೋಕಾಲಿ**



ಎಲ್ಲೆಂದರಲ್ಲಿ ಬೆಳೆದಿದೆ ಮೈಲಿ - ಮೈಲಿ
ಬರೀ ಮುಳ್ಳು -ಬೇಲಿ
ಬನ-ಬನ ಬಣಗುಡುತಿದೆ ಖಾಲಿ-ಖಾಲಿ
ಕಟ್ಟೋಣೆಲ್ಲಿ ಜೋಕಾಲಿ?

*- ಜಿ. ಎಸ್. ಪಡಗಾಂವಿ, ರಬಕವಿ-೫೮೭೩೧೪*

**ಶಾಸಕರ ಭವನದಲ್ಲಿ ವಾಹನ ಸೌಕರ್ಯ**

ಶಾಸಕರು ಬೆಂಗಳೂರಿನಲ್ಲಿದ್ದಾಗ, ತಮ್ಮ ಕೆಲಸಗಳಿಗೆ ವಾಹನ ಸೌಲಭ್ಯ ಪಡೆಯುತ್ತಾರೆ. ಎಲ್ಲಾ ಸದಸ್ಯರಿಗೆ ಕಾರುಗಳು ಬಾಡಿಗೆಗೆ ದೊರೆಯುತ್ತವೆ. ವಾಹನ ಪಡೆದ ಒಂದು ಗಂಟೆಗೆ ಕಿ.ಮೀ.ಗೆ ೨-೫೦, ಒಂದು ಗಂಟೆಯಿಂದ ಎರಡು ಗಂಟೆ ಕಾಯುವಿಕೆಗೆ ೫-೦೦ ರೂ. ಪ್ರತಿ ಕಿ.ಮೀ.ಗೆ ೨-೫೦, ಮುಂದುವರಿದರೆ ಕಿ.ಮೀ.ಗೆ ೨-೫೦ ಹಾಗೂ ಪ್ರತಿ ಗಂಟೆಗೆ ಕಾಯುವಿಕೆ ಬಾಡಿಗೆ ನಿಗದಿ ಮಾಡಿದೆ. ಇದರಿಂದ ಶಾಸಕರಿಗೆ ಕಡಿಮೆ ಬೆಲೆಯಲ್ಲಿ ವಾಹನ ಸೌಲಭ್ಯ ಲಭ್ಯವಿದ್ದು ಜನರ ಮತ್ತು ಕ್ಷೇತ್ರದ ಕೆಲಸ ಮಾಡಬಹುದು.

**ತುರ್ತು ವಾಹನಗಳು**

ಶಾಸಕರ ಭವನದಲ್ಲಿ ೨೪ ಗಂಟೆಗಳ ಕಾಲ ಮೋಟಾರು ವಾಹನದ ಸೌಲಭ್ಯವಿದೆ. ಬಾಡಿಗೆ ಪ್ರತಿ ಕಿ.ಮೀ.ಗೆ ೨-೫೦ ಪೈಸೆ ಹಾಗೂ ೨ನೇ ಗಂಟೆಗೆ ೧೦೦-೦೦ ರೂ. ಬಾಡಿಗೆಯನ್ನು ನಿಗದಿ ಮಾಡಿದೆ.

**ಮಿನಿ ಡೀಲಕ್ಸ್ ಲಕ್ಷುರಿ ಬಸ್**

ಶಾಸಕರಿಗೆ ಸಮಿತಿ ಸಭೆಗಳಲ್ಲಿ ಭಾಗವಹಿಸಲು ಮಿನಿ ಡೀಲಕ್ಸ್ ಲಕ್ಷುರಿ ಬಸ್ ಸೌಲಭ್ಯವಿದೆ. ಇದಕ್ಕೆ ಕಿ.ಮೀ.ಗೆ ೫-೦೦ ರೂ. ಈ ಸಮಿತಿಗಳ ಮೂಲಕ ರಾಜ್ಯದ ಹಾಗೂ ದೇಶದ ಯಾವುದೇ ಸ್ಥಳಗಳಿಗೆ ಭೇಟಿ ನೀಡಿ ಅಧ್ಯಯನ ಹಾಗೂ ಮಾಹಿತಿ ಸಂಗ್ರಹಿಸಲು ಅನುಕೂಲವಿದೆ. ಶಾಸಕರು ಹಾಗೂ ಸಿಬ್ಬಂದಿಯವರು ಈ ಬಸ್ಸನ್ನು ಖಾಸಗಿ ಕೆಲಸಕ್ಕೆ ಬಳಸಿಕೊಂಡಲ್ಲಿ ಪ್ರತಿ ಕಿ.ಮೀ.ಗೆ ೬-೦೦ ರೂ ಹಾಗೂ ದಿನವೊಂದಕ್ಕೆ ಒಟ್ಟು ೧,೨೦೦-೦೦ ರೂ.ಗಳನ್ನು ಬಾಡಿಗೆಯಾಗಿ ನಿಗದಿ ಮಾಡಿದೆ. ಸದಸ್ಯರು ಮಿಲಿಟರಿಯಲ್ಲಿ ಮಾರಾಟ ಮಾಡುವ ವಾಹನಗಳನ್ನು ಕೊಳ್ಳಲು ಅನುಮತಿ ಇದೆ.

**ರೈಲ್ವೆ ಮತ್ತು ವಿಮಾನ ಪ್ರಯಾಣಗಳು**

ಶಾಸಕರಿಗೆ ಒಟ್ಟು ೩೦ ಸಾವಿರ ರೂಪಾಯಿಗಳನ್ನು ರೈಲ್ವೇ ಅಥವಾ ವಿಮಾನ ಪ್ರಯಾಣಕ್ಕೆ ನೀಡ

ಲಾಗುವುದು. ವರ್ಷದಲ್ಲಿ ಏಪ್ರಿಲ್ ಮತ್ತು ಅಕ್ಟೋಬರ್ ತಿಂಗಳುಗಳಲ್ಲಿ ಎರಡು ಕಂತುಗಳಲ್ಲಿ ಪಡೆಯಬಹುದು. ಅವರು ರೈಲ್ವೆ ಅಥವಾ ವಿಮಾನ ದಲ್ಲಿ ತಮ್ಮ ಜೊತೆಗೆ ಒಬ್ಬರನ್ನು ಕರೆದುಕೊಂಡು ಹೋಗಬಹುದು.

**ಶಾಸಕರ ವಸತಿ ಸೌಕರ್ಯಗಳು**

ಶಾಸಕರಿಗೆ ಶಾಸಕರ ಭವನದಲ್ಲಿ ವಾಸ್ತವ್ಯ ಮಾಡಲು ಅನುಕೂಲ ಮಾಡಿದೆ. ಇಲ್ಲಿ ಸುಮಾರು ೩೦೦ ಕೊಠಡಿಗಳಿವೆ. ಇವರು ಅಧಿವೇಶನ ಮತ್ತು ಸಮಿತಿಗಳ ಸಭೆಗಳಲ್ಲಿ ಭಾಗವಹಿಸುವ ಸಂದರ್ಭದಲ್ಲಿ ಉಚಿತ ವಸತಿ ಸೌಲಭ್ಯವಿದೆ. ಸದಸ್ಯರು ಹಾಗೂ ಅವರ ಕುಟುಂಬಗಳಿಗೆ ಇತರ ದಿನಗಳಲ್ಲಿ ಪ್ರತಿ ದಿನಕ್ಕೆ ರೂ. ೪-೦೦ ಬಾಡಿಗೆ ನಿಗದಿ ಮಾಡಿದೆ. ಮಾಜಿ ಶಾಸಕರಿಗೆ ಕಾವೇರಿ ವಸತಿ ಗೃಹಗಳಲ್ಲಿ ಉಳಿಯಲು ಅವಕಾಶ ಕಲ್ಪಿಸಿಕೊಡಲಾಗಿದೆ. ಈಗ ಹೊಸದಾಗಿ ಕೊಠಡಿಗಳ ನಿರ್ಮಾಣ ಕೂಡ ಆಗುತ್ತಿದೆ.

**ವೈದ್ಯಕೀಯ ಸೌಲಭ್ಯಗಳು**

ಶಾಸಕರಿಗೆ ಹಾಗೂ ಕುಟುಂಬಕ್ಕೆ ಸರ್ಕಾರಿ ಆಸ್ಪತ್ರೆಗಳು ಹಾಗೂ ಸರ್ಕಾರ ನಿಗದಿ ಪಡಿಸಿದ ಖಾಸಗಿ ಆಸ್ಪತ್ರೆಗಳಲ್ಲಿ ಉಚಿತ ಚಿಕಿತ್ಸಾ ಸೌಲಭ್ಯ ದೊರೆಯುತ್ತದೆ. ಅಧಿವೇಶನದ ಸಮಯದಲ್ಲಿ ಪ್ರತ್ಯೇಕ ವೈದ್ಯಕೀಯ ವ್ಯವಸ್ಥೆ ಮಾಡಲಾಗುತ್ತದೆ.

**ಗ್ರಂಥಾಲಯ ಅನುಕೂಲಗಳು**

ವಿಧಾನ ಸೌಧದಲ್ಲಿ ಸದಸ್ಯರಿಗಾಗಿ ನಾಲ್ಕು ಗ್ರಂಥಾಲಯಗಳಿವೆ. ಇವುಗಳಲ್ಲಿ ಸಾಕಷ್ಟು ವಿವಿಧ ಬಗೆಯ ಪುಸ್ತಕಗಳಿವೆ. ವಿವಿಧ ಇಲಾಖೆಯ ವರದಿಗಳು ಸದನದ ಚರ್ಚೆಯ ವಿಷಯಗಳು, ಮಸೂದೆಗಳು, ಪತ್ರಿಕಾ ಮಾಹಿತಿಗಳು, ಲೇಖನ ಸೂಚಿ ಪತ್ರಿಕೆ, ತಿಂಗಳ ದಾಖಲಾತಿ ಕಡತಗಳು ಮತ್ತು ಹಲವಾರು ಪ್ರಕಟಣೆಗಳು, ವಾರ ಪತ್ರಿಕೆಗಳು ದೊರೆಯುತ್ತವೆ. ಸದಸ್ಯರು ಪುಸ್ತಕಗಳನ್ನು ಪಡೆದು ಹಿಂದಿರುಗಿಸಬಹುದು.

ಆದರೆ ಇದರ ಬಳಕೆ ಸರಿಯಾಗಿ ಆಗುತ್ತಿಲ್ಲದಿರುವುದು ವಿಷಾದನೀಯ. ಕಳೆದ ಅಧಿವೇಶನದಲ್ಲಿದ್ದ ಶೇಕಡ ೭೫ರಷ್ಟು ಸದಸ್ಯರಿಗೆ ಲೈಬ್ರರಿಗಳ ಅಸ್ತಿತ್ವವೇ ತಿಳಿದಿರಲಿಲ್ಲ ಎಂದರೆ ಆಶ್ಚರ್ಯ ಬೇಡ. ಉಳಿದ ಶೇ. ೨೫ರಷ್ಟು ಶಾಸಕರು ತಮ್ಮ ಮಕ್ಕಳ ಶಿಕ್ಷಣಕ್ಕೆ ಪುಸ್ತಕಗಳನ್ನು ತೆಗೆದುಕೊಳ್ಳುತ್ತಿದ್ದುದು ಬೆಳಕಿಗೆ ಬಂದಿದೆ. ಈ ಗ್ರಂಥಾಲಯದ ಮೂಲಕ ಅಧ್ಯಯನ ನಡೆಸಿ ಅಧಿವೇಶನ – ಸಮಿತಿ ಸಭೆಗಳಲ್ಲಿ ಅರ್ಥವತ್ತಾಗಿ ಭಾಗವಹಿಸದಿರುವುದಕ್ಕೆ ಈಚಿನ ಎಷ್ಟೋ ವಿಧಾನಸಭಾ ಅಧಿವೇಶನಗಳೇ ಸಾಕ್ಷಿ. ಇದರ ಪ್ರಯೋಜನ ಪಡೆದವರು ಕೆಲವೇ ಮಂದಿ. ಯಾವ ಪಕ್ಷವೂ ಸದಸ್ಯರ ರಚನಾತ್ಮಕ ಚಟುವಟಿಕೆ ಬಗ್ಗೆ ಕಾಳಜಿ ವಹಿಸುತ್ತಿಲ್ಲವೆಂಬ ದೂರು ಆಗಾಗ್ಗೆ ಕೇಳಿಬಂದಿದೆ.

**ಅಡಿಗೆ ಅನಿಲ ಮತ್ತು ಟೆಲಿಫೋನ್**

ಸದಸ್ಯರಿಗೆ ಹಿಂದೂಸ್ತಾನ್ ಪೆಟ್ರೋಲಿಯಂ ಕಾರ್ಪೋರೇಷನ್‌ನಿಂದ ಅಡಿಗೆ ಅನಿಲದ ಸೌಲಭ್ಯ ಒದಗಿಸಲಾಗುವುದು. ಶಾಸಕರ ಭವನದಲ್ಲಿ ಟೆಲಿಫೋನ್ ಸೌಲಭ್ಯವಿದೆ. ಪ್ರತಿ ತಿಂಗಳಿಗೆ ೩೦೦೦ ಕರೆಗಳು ಉಚಿತ ಹಾಗೂ ಟೆಲಿಫೋನ್ ಬಾಡಿಗೆ ಕೊಡಲಾಗುವುದು; ಮತ್ತೊಂದು ಟೆಲಿಫೋನ್ ಸದಸ್ಯರ ಮನೆಗಳಿಗೆ ನೀಡಲಾಗುವುದು.

**ಗುರುತಿನ ಚೀಟಿ**

ಶಾಸಕರಿಗೆ ಶಾಸಕರ ಪರಿಚಯವಿರುವ ಗುರುತಿನ ಚೀಟಿ ನೀಡಲಾಗುವುದು. ಇದನ್ನು ವಿಧಾನ ಸೌಧದ ಒಳಗೆ ಪ್ರವೇಶಕ್ಕೆ ಮತ್ತು ಅಗತ್ಯವಾದ ಕಡೆ ಬಳಸಬಹುದು.

**ಇತರೆ ಸೌಲಭ್ಯಗಳು**

ಶಾಸಕರ ಭವನದಲ್ಲಿ ಸದಸ್ಯರಿಗೆ ಶಾಕಾಹಾರಿ, ಮಾಂಸಹಾರಿ ಹಾಗೂ ಉತ್ತರ ಕರ್ನಾಟಕದ ಊಟಗಳ ಸೌಲಭ್ಯವಿದೆ. ಅಧಿವೇಶನದ ಅವಧಿಯಲ್ಲಿ ವಿಧಾನ ಸೌಧದಲ್ಲಿ ಕ್ಯಾಂಟೀನ್ ವ್ಯವಸ್ಥೆ ಇರುತ್ತದೆ.

ಶಾಸಕರ ಭವನದಲ್ಲಿ ಅಂಚೆ ಕಛೇರಿ, ಬ್ಯಾಂಕ್, ಧೋಬಿ ಅಂಗಡಿಗಳು, ರೈಲ್ವೆ ಮತ್ತು ಬಸ್ ಹಾಗೂ ವಿಮಾನ ಪ್ರಯಾಣಕ್ಕೆ ಮುಂಗಡ ಕಾದಿರುಸುವಿಕೆಗೆ ಸೌಲಭ್ಯವಿದೆ.

ಜನತಾ ಬಜಾರ್, ಪೋಲಿಸ್ ಠಾಣೆ ಹಾಗೂ ವ್ಯಾಯಾಮಶಾಲೆ ವ್ಯವಸ್ಥೆಯು ಶಾಸಕರಿಗೆ ಲಭ್ಯವಿದೆ. ಆಯುರ್ವೇದಿಕ್ ಆಸ್ಪತ್ರೆ, ಟೈಪಿಂಗ್ ವಿಭಾಗ, ಪುಸ್ತಕ ಅಂಗಡಿಗಳು, ವಾಚನಾಲಯ, ಖಾಸಗಿ ಟ್ರಾವೆಲ್ಸ್ ಹಾಗೂ ಜೆರಾಕ್ಸ್ ಸೌಲಭ್ಯ ಒದಗಿಸಿದೆ.

**ಹೌಸಿಂಗ್ ಸೊಸೈಟಿ**

ಶಾಸಕರ ಭವನದಲ್ಲಿ ಹೌಸಿಂಗ್ ಸೊಸೈಟಿ ಅಸ್ತಿತ್ವದಲ್ಲಿದೆ. ಇದರಲ್ಲಿ ಶಾಸಕರು, ಮಾಜಿ ಶಾಸಕರು ಸದಸ್ಯರು. ಈ ಸೊಸೈಟಿ ಮೂಲಕ ಸದಸ್ಯರಿಗೆ ನಗರದ ವಿವಿಧ ಬಡಾವಣೆಗಳಲ್ಲಿ ಲಕ್ಷಾಂತರ ರೂಪಾಯಿ ಮೌಲ್ಯದ ಬಿ.ಡಿ.ಎ. ನಿವೇಶನ ದಕ್ಕಿದೆ. ಸದಸ್ಯರು ಬೆಂಗಳೂರಿನಲ್ಲಿ ಸ್ವಂತ ಮನೆಯಿದ್ದರೂ, ಶಾಸಕರ ಭವನದಲ್ಲಿ ವಸತಿ ಸೌಕರ್ಯವಿದೆ.




– ಜಿ. ಎಸ್. ವಡಗಾಂವಿ, ರಬಕವಿ-೫೮೭೩೧೪

**ನಿವೃತ್ತಿ ವೇತನ**

ಮಾಜಿ ಶಾಸಕರು ತಿಂಗಳಿಗೆ ೨,೫೦೦ ರೂ. ನಿವೃತ್ತಿ ವೇತನ ಪಡೆಯುತ್ತಾರೆ. ಒಂದಕ್ಕಿಂತ ಹೆಚ್ಚು ಬಾರಿ ಆಯ್ಕೆಯಾದರೆ ೪,೦೦೦ ರೂ. ವೇತನ ದೊರೆಯುತ್ತದೆ. ಸದಸ್ಯರಾಗಿದ್ದಾಗಲೇ ನಿಧನ ಹೊಂದಿದರೆ ಅವರ ಕುಟುಂಬಕ್ಕೆ ೫೦೦ ರೂ. ಭತ್ಯೆ ನೀಡಲಾಗುವುದು. ಮಾಜಿ ಶಾಸಕರಿಗೂ ಕೂಡ ಉಚಿತ ವೈದ್ಯಕೀಯ, ಬಸ್‌ಪಾಸ್ ಸೌಲಭ್ಯವಿದೆ.

ಜನರ ತೆರಿಗೆ ಹಣದಲ್ಲಿ ಶಾಸಕರಿಗೆ ಈ ಎಲ್ಲಾ ಸವಲತ್ತುಗಳನ್ನು ಒದಗಿಸಲಾಗಿದ್ದರೂ ಅವುಗಳು ಸದ್ಬಳಕೆಯಾಗಿಲ್ಲ ಎಂಬ ಅಪಸ್ವರದ ಮಾತು ಯಾವತ್ತೂ ಕೇಳಿಬಂದಿದೆ. ಗ್ರಂಥಾಲಯ ಬಳಕೆ, ವ್ಯಾಯಾಮಶಾಲೆ ಮುಂತಾದ ರಚನಾತ್ಮಕ ಚಟುವಟಿಕೆ ಗಳಲ್ಲಿ ಶಾಸಕರು ಭಾಗವಹಿಸದೇ ಇರುವುದು ಸರ್ವೇಸಾಮಾನ್ಯ ಸಂಗತಿಯಾಗಿದೆ. ಶಾಸಕರ ಸರ್ವತೋಮುಖ ಬೆಳವಣಿಗೆಗೆಂದೇ ರೂಪಿಸಲಾದ ಇಂತಹ ಸವಲತ್ತುಗಳ ಬಗ್ಗೆ ಶಾಸಕರ ಅನಾದರ ಸಾರ್ವಜನಿಕ ಟೀಕೆಗೂ ಒಳಗಾಗಿದೆ.

ಈ ಸವಲತ್ತುಗಳು ದುರ್ಬಳಕೆಗೆ ಒಳಗಾಗುತ್ತಿವೆ ಎನ್ನುವ ಮಾತಿನಲ್ಲಿಯೂ ಸತ್ಯವಿದೆ. ಶಾಸಕರ ಭವನ ಶಾಸಕರ ಹಿಂಬಾಲಕರ 'ತವರು ಮನೆ' ಯಾಗಿದೆ ಎಂಬುದು ಸತ್ಯಕ್ಕೆ ಹತ್ತಿರವಾದ ಟೀಕೆ. ಶಾಸಕರ ಹೆಸರಿನಲ್ಲಿ ಅಲ್ಲಿ ನಡೆಯುತ್ತಿರುವ ದರ್ಬಾರಿಗೆ ಕಡಿವಾಣ ಹಾಕಲೇಬೇಕು.

ಇತ್ತೀಚೆಗೆ ಶಾಸಕರು ಲೋಕ ಆಯುಕ್ತ ಕಾಯಿದೆ ಮೇರೆಗೆ ಆಸ್ತಿಪಾಸ್ತಿ ಲೆಕ್ಕ ಸಲ್ಲಿಸದೆ ತಪ್ಪಿರುವ ವಿವಾದ ಸುಪ್ರೀಂ ಕೋರ್ಟ್ ಮೆಟ್ಟಿಲು ಹತ್ತಿದೆ. ಇದರಲ್ಲಿ ಇಬ್ಬರು ಸಚಿವರು ಹಾಗೂ ೯ ಮಂದಿ ಮಂಡಳಿಗಳ ಅಧ್ಯಕ್ಷರಾಗಿರುವ ಶಾಸಕರ ರಾಜೀನಾಮೆ ಕುರಿತು ಹೈ ಕೋರ್ಟ್ ತೀರ್ಪು ಬಂದಿದೆ. ಒಟ್ಟು ಲೆಕ್ಕ ಸಲ್ಲಿಸದಿರುವವರು ಸಂಖ್ಯೆ ೮೨ ದಾಟಿದೆ. ಇದನ್ನು ಗಮನಿಸಿದರೆ ಜನ ಪ್ರತಿನಿಧಿಗಳು ತಾವು ಮಾಡಿದ ಕಾನೂನನ್ನು ಎಷ್ಟು ಗೌರವಿಸುವರು ಎಂಬುದು ಅರ್ಥವಾಗುತ್ತದೆ.

ಸಾರ್ವಜನಿಕ ಬದುಕಿನಲ್ಲಿ ಜನಪ್ರತಿನಿಧಿಗಳು ತಮ್ಮ ಜವಾಬ್ದಾರಿ ಅರಿತು ಸಂಸದೀಯ ಮೌಲ್ಯಗಳನ್ನು ಕಾಪಾಡುವಲ್ಲಿ ನಿಷ್ಠೆ ಹೊಂದಬೇಕು. ಈ ನಿಟ್ಟಿನಲ್ಲಿ ಪ್ರಬಲವಾದ ಜನಾಭಿಪ್ರಾಯ ಮೂಡಿಸಲು ಹತ್ತು ಹಲವು ಪ್ರಯತ್ನಗಳು [illegible]ಬೇಕಾಗಿದೆ.

ಎನ್. ಪಿ. [illegible]
ನಂ. [illegible], ೩ನೇ ಮೈನ್ ೨ನೇ ಕ್ರಾಸ್, ಕಲ್ಯಾಣ ನಗರ
[illegible] ರಸ್ತೆ, ಬೆಂಗಳೂರು - [illegible]

# ಬ್ಯಾಂಕಿಂಗ್ ವ್ಯವಸ್ಥೆ ಮತ್ತು ಪುಟಿಯುವ ಚೆಕ್ಕುಗಳು

ಎಸ್. ಆರ್. ಗೌತಮ್

ನಿಮಗೆ ಯಾರಾದರೂ ಕೊಟ್ಟ ಚೆಕ್ಕು ನಗದಾಗದೇ ತಿರಸ್ಕೃತವಾದರೆ, ಅವರಿಗೆ ನೋಟೀಸ್ ಕೊಟ್ಟು ಆಗಲೂ ಅವರು ಹಣ ಕೊಡದೆ ಹೋದರೆ ಅವರ ವಿರುದ್ಧ ಕ್ರಿಮಿನಲ್ ದೂರನ್ನು ಕೊಡಬಹುದು ಮತ್ತು ಅವರ ತಕ್ಸೀರು ಸಾಬೀತಾದರೆ, ಅವರಿಗೆ ಚೆಕ್ಕಿನ ಮೊಬಲಗಿನ ಎರಡರಷ್ಟರವರೆಗಿನ ದಂಡ ಹಾಗೂ ಒಂದು ವರ್ಷದವರೆಗೆ ಜೈಲು ಶಿಕ್ಷೆ ವಿಧಿಸಬಹುದು ಎಂದು ಕಳೆದ ಸಂಚಿಕೆಯಲ್ಲಿ ನೋಡಿದೆವು.

ಇನ್ನೊಬ್ಬರು ನಿಮಗೆ ''ಕೊಡಬೇಕಾದ ಸಾಲವನ್ನು'' ಎನ್ನುವಲ್ಲಿ ''ಸಾಲ'' ಎಂದರೆ ಕಾನೂನು ರೀತ್ಯಾ ಒಬ್ಬರು ನಿಮಗೆ ಕೊಡಬೇಕಾದ ಹಣ ಎಂದರ್ಥ. ಸಾಲವಾಗಿ ಕೊಂಡ ಸರಕಿನ ಬೆಲೆ ಸೇವೆಯನ್ನು ಪಡೆದುಕೊಂಡಿದ್ದಕ್ಕೆ, ಆ ಸೇವೆಗೆ ಕರಾರಿನಂತೆ ಕೊಡಬೇಕಾದ ರುಸುಮು, ನಗದಾಗಿ ತೆಗೆದುಕೊಂಡ ಸಾಲ - ಈ ಸಂದರ್ಭಗಳಲ್ಲಿ, ಇದೇ ತೆರನಾದ ಇತರ ಸಂದರ್ಭಗಳಲ್ಲಿ, ಒಬ್ಬರು ಇನ್ನೊಬ್ಬರಿಗೆ ಕೊಡಬೇಕಾದ ಹಣ, ಇವೂ ಅದರಲ್ಲಿ ಸೇರುತ್ತವೆ. ''ಸಾಲ'' ಪದದ ವ್ಯಾಪ್ತಿಯಲ್ಲಿ ''ಬಡ್ಡಿ'' ಕೂಡ ಸೇರಿಕೊಂಡಿದೆ. ಈ ಸಾಲವನ್ನು ಚುಕ್ತಾ ಮಾಡುವುದಕ್ಕಾಗಿ ಕೊಟ್ಟ ಚೆಕ್ಕು, ಬ್ಯಾಂಕಿಗೆ ಬಂದಾಗ ಅದು ಪುರಸ್ಕೃತವಾಗುವಂತೆ ಎಚ್ಚರಿಕೆ ವಹಿಸಬೇಕು.

'ಖಾತೆಯಲ್ಲಿ ಹಣ ಇಲ್ಲದೆ ಹೋದರೆ' ಎಂಬ ವಾಕ್ಯಕ್ಕೂ ಅರ್ಥ ಬಾಹುಳ್ಯವಿದೆ. ನ್ಯಾಯಾಲಯಗಳ ಇತ್ತೀಚಿನ ನಿರ್ವಚನಗಳ ಪ್ರಕಾರ ''ಪಾವತಿಯನ್ನು ತಡೆ ಹಿಡಿಯಿರಿ'' ಎಂಬ ಸೂಚನೆಯನ್ನು ಬ್ಯಾಂಕಿಗೆ ಕೊಟ್ಟಿದ್ದರೂ, ಖಾತೆಯನ್ನು ನೀವು ಮುಚ್ಚಿಬಿಟ್ಟಿದ್ದರೂ, ಹಣ ಇಲ್ಲದಿದ್ದರೂ, ಚೆಕ್ಕಿನ ಮೊಬಲಗು ನೀವು ಬ್ಯಾಂಕಿನೊಡನೆ ಮಾಡಿಕೊಂಡಿರುವ ವ್ಯವಸ್ಥೆಯ ಮಿತಿಯನ್ನು ಮೀರಿದ್ದರೂ, ನೀವು ಅಪರಾಧ ಮಾಡಿದ ಹಾಗೆಯೇ ಎಂದು ಭಾವಿಸಲಾಗುತ್ತದೆ. ''ಅಪರಾಧಿ'' ಎಂಬ ಹಣೆಪಟ್ಟಿ ಕಟ್ಟಿಕೊಳ್ಳುವುದಕ್ಕೆ ನಿಮಗೆ ಇಷ್ಟವಿಲ್ಲದಿದ್ದರೆ, ಚೆಕ್ಕನ್ನು ಕೊಡಲೇಬೇಡಿ; ಕೊಟ್ಟರೆ ನಗದಾಗುವಂತೆ ನೋಡಿಕೊಳ್ಳಿ. ಚೆಕ್ಕನ್ನು ಚೆಕ್ಕಿನ ತಾರೀಖಿನಿಂದ ಆರು ತಿಂಗಳ ಒಳಗಾಗಿ ನಿಮ್ಮ ಬ್ಯಾಂಕಿಗೆ ಸಲ್ಲಿಸಬೇಕು. ಒಂದು ವೇಳೆ ಚೆಕ್ಕಿನ ಮೇಲೆ ಅದನ್ನು ಸಲ್ಲಿಸಬೇಕಾದ ಅವಧಿಯನ್ನು ನಿಗದಿಪಡಿಸಿದ್ದರೆ, ಆ ಅವಧಿಯೊಳಗೇ ಚೆಕ್ಕನ್ನು ಸಲ್ಲಿಸಬೇಕು. ಚೆಕ್ಕು ತಿರಸ್ಕೃತವಾದಾಗ, ಯಾವ ಬ್ಯಾಂಕಿನ ಖಾತೆಯ ಮೇಲೆ ಅದನ್ನು ಕೊಡಲಾಗಿದೆಯೋ, ಆ ಬ್ಯಾಂಕ್, ವಸೂಲಿ ಬ್ಯಾಂಕಿಗೆ ಒಂದು ಹಿಂಬರಹವನ್ನು ಕೊಡುತ್ತದೆ. ವಸೂಲಿ ಬ್ಯಾಂಕು ಆ ಹಿಂಬರಹವನ್ನು ತನ್ನದೇ ಆದ ಇನ್ನೊಂದು ಹಿಂಬರಹದೊಂದಿಗೆ ತಿರಸ್ಕೃತವಾದ ಚೆಕ್ಕಿನೊಂದಿಗೆ ನಿಮಗೆ ವಾಪಸ್ ಮಾಡುತ್ತದೆ. ಅದು ನಿಮ್ಮ ಕೈ ಸೇರಿದ ೧೫ ದಿವಸಗಳ ಒಳಗೆ ನೀವು ಚೆಕ್ಕು ಕೊಟ್ಟವರಿಗೆ ನೋಟೀಸ್ ಕೊಡಬೇಕು. ಸಾಮಾನ್ಯವಾಗಿ ಇಂಥ ನೋಟೀಸನ್ನು ವಕೀಲರ ಮೂಲಕ ಕೊಡಿಸುತ್ತಾರೆ. ವಕೀಲರ ಮೂಲಕವೇ ಕೊಡಿಸಬೇಕೆಂದು ಕಾನೂನಿನ ನಿರ್ಬಂಧವೇನೂ ಇಲ್ಲ. ನೀವೇ ನೋಟೀಸ್ ಕೊಡಬಹುದು. ನೋಟೀಸಿನ ಒಕ್ಕಣೆ ಹೀಗಿರಲಿ:

..... ಇಂಥವರಿಗೆ, ... ನೀವು ನನ್ನಿಂದ .... ನೇ ತಾರೀಖು ..... ರೂಪಾಯಿಗಳನ್ನು ಸಾಲವಾಗಿ ಪಡೆದುಕೊಂಡಿದ್ದು, ಅದರ ಬಗ್ಗೆ ಒಂದು ಪ್ರೋನೋಟನ್ನು ಬರೆದುಕೊಟ್ಟಿರುತ್ತೀರಿ. ಆ ಸಾಲ ಮತ್ತು ಬಡ್ಡಿಯನ್ನು ಚುಕ್ತಾ ಮಾಡುವುದಕ್ಕಾಗಿ .... ಬ್ಯಾಂಕಿನ ... ಶಾಖೆಯ ನಿಮ್ಮ ಖಾತೆಯ ಮೇಲೆ .... ತಾರೀಖಿನ .... ನಂಬರಿನ .... ರೂಪಾಯಿಯ ಚೆಕ್ಕನ್ನು ಕೊಟ್ಟಿದ್ದು, ಅದನ್ನು ನಾನು ನನ್ನ ಬ್ಯಾಂಕ್ ಖಾತೆಗೆ ... ತಾ॥ ಕಟ್ಟಿದ್ದು, ಅದು ತಿರಸ್ಕೃತವಾಗಿ ಬಂದಿದೆ ಎಂದು ನನಗೆ ... ತಾ॥ ನನ್ನ ಬ್ಯಾಂಕಿನಿಂದ ಹಿಂಬರಹ ಬಂದಿದೆ. ಈ ಮೂಲಕ ನಿಮಗೆ ತಗಾದೆ ಮಾಡುವುದೇನೆಂದರೆ, ಈ ತಿಳುವಳಿಕೆ ನಿಮಗೆ ತಲುಪಿದ ೧೫ ದಿವಸಗಳ ಒಳಗೆ, ಚೆಕ್ಕಿನ ಮೊಬಲಗಾದ ... ರೂಗಳನ್ನು ನಗದಾಗಿಯಾಗಲೀ ಅಥವಾ ಡಿಮ್ಯಾಂಡ್ ಡ್ರಾಫ್ಟ್ ಮೂಲಕವಾಗಿಯಾಗಲೀ ಪಾವತಿ ಮಾಡತಕ್ಕದ್ದು. ತಪ್ಪಿದರೆ ನಿಮ್ಮ ಮೇಲೆ ಸಿವಿಲ್/ಕ್ರಿಮಿನಲ್ ಮೊಕದ್ದಮೆಯನ್ನು ಜರುಗಿಸಲಾಗುತ್ತದೆ ಎಂದು ಈ ಮೂಲಕ ಎಚ್ಚರಿಸಲಾಗಿದೆ.''

ನೋಟೀಸನ್ನು ನೋಂದಾಯಿತ ಅಂಚೆ ಮೂಲಕ ಕಳುಹಿಸಿ. ನೋಟೀಸಿನ ಪ್ರತಿಯನ್ನು "ಅಂಚೆ ಸಮರ್ಥನಾ ಪತ್ರ" ಪಡೆದುಕೊಂಡು ಸಾಧಾರಣ ಅಂಚೆಯಲ್ಲೂ ಕಳುಹಿಸಿ. ಒಂದು ವೇಳೆ ನೋಂದಾಯಿತ ಅಂಚೆ ತಿರಸ್ಕೃತವಾಗಿ ಬಂದರೆ, ನೀವು ಸರ್ಟಿಫಿಕೇಟ್ ಆಫ್ ಪೋಸ್ಟಿಂಗ್ ಮೇಲೆ ಕೂಡ ಕ್ರಮ ಜರುಗಿಸಬಹುದು.

ನೋಟೀಸನ್ನು ನೋಂದಾಯಿತ ಅಂಚೆ ಮೂಲಕ ಕಳುಹಿಸಿದರೆ ಅದನ್ನು ತಲುಪಿಸಲಾದ ದಿನವನ್ನು ಪಾವತಿ ಕಾರ್ಡಿನ ಮೇಲೆ ನಮೂದಿಸಲಾಗಿರುತ್ತದೆ. ಸಾಧಾರಣ ಅಂಚೆಯಾದರೆ ತಲುಪುವ ತಾರೀಖನ್ನು ಅಂಚೆಗೆ ಹಾಕಿದ ಮೂರು ದಿವಸದ ನಂತರ ಎಂದು ಇಟ್ಟುಕೊಳ್ಳಬಹುದು. ಪಾವತಿ ತಾ॥ ನಿಂದ ೧೫ ದಿನಗಳ ಕಾಲ ನಿರೀಕ್ಷಿಸಿ. ಹಣ ಬಾರದಿದ್ದ ಪಕ್ಷದಲ್ಲಿ, ೧೫ ದಿನಗಳ ನಂತರ, ಆದರೆ ಒಂದು ತಿಂಗಳ ಒಳಗಾಗಿ, ಕ್ರಿಮಿನಲ್ ಕೋರ್ಟಿನಲ್ಲಿ ಅರ್ಜಿ ಸಲ್ಲಿಸಿ. ಉದಾಹರಣೆಗೆ, ನಿಮಗೆ ಬ್ಯಾಂಕಿನ ಹಿಂಬರಹ ಅಕ್ಟೋಬರ್ ೧ ರಂದು ತಲುಪಿದೆ. ನೀವು ಅಕ್ಟೋಬರ್ ೧೦ರಂದು ನೋಟೀಸ್ ಕೊಟ್ಟಿದ್ದೀರಿ. ಈ ನೋಟೀಸು ಚೆಕ್ಕು ಕೊಟ್ಟವನಿಗೆ ಅಕ್ಟೋಬರ್ ೧೫ನೇ ತಾ॥ ತಲುಪಿದೆ. ಅವನು ಅಕ್ಟೋಬರ್ ೨೯ರೊಳಗೆ ಹಣ ಪಾವತಿ ಮಾಡಬೇಕು. ಹಣ ಕೊಡದಿದ್ದರೆ, ನೀವು ಅಕ್ಟೋಬರ್ ೩೦ರಿಂದ, ನವೆಂಬರ್ ೨೯ನೇ ತಾ॥ನ ಒಳಗೆ ಕ್ರಿಮಿನಲ್ ಅರ್ಜಿಯನ್ನು ನ್ಯಾಯಾಲಯಕ್ಕೆ ಸಲ್ಲಿಸಬೇಕು. ತಡವಾಗಿ ಸಲ್ಲಿಸಿದ ಅರ್ಜಿಗಳನ್ನು ನ್ಯಾಯಾಲಯ ತಿರಸ್ಕರಿಸುತ್ತದೆ. ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಲು ನೀವು ನಿಮ್ಮ ವಕೀಲರೊಂದಿಗೆ ಖುದ್ದಾಗಿ ನ್ಯಾಯಾಲಯಕ್ಕೆ ಹಾಜರಾಗಬೇಕು. ಅರ್ಜಿಯ ಜೊತೆಯಲ್ಲಿ ಎಲ್ಲಾ ಮೂಲ ದಾಖಲೆಗಳನ್ನು, ಅಂದರೆ, ಪ್ರಾಮಿಸರಿ ನೋಟು, ತಿರಸ್ಕೃತವಾದ ಚೆಕ್ಕು, ಬ್ಯಾಂಕಿನ ಹಿಂಬರಹ, ನೋಟೀಸಿನ ನಕಲು, ನೋಟೀಸ್ ಜಾರಿಯಾಗಿದ್ದಕ್ಕೆ ಪಾವತಿ, ಅಂಚೆ ಸಮರ್ಥನಾ ಪತ್ರ, ಇತ್ಯಾದಿಗಳನ್ನು ಲಗತ್ತಿಸಬೇಕು. ನ್ಯಾಯಾಲಯಕ್ಕೆ ಪುರುಸೊತ್ತಿದ್ದರೆ, ನೀವು ಅರ್ಜಿ ಸಲ್ಲಿಸಿದ ದಿವಸವೇ ನಿಮ್ಮ ಪ್ರಮಾಣೀಕೃತ ಹೇಳಿಕೆಯನ್ನು ಪಡೆದುಕೊಳ್ಳುತ್ತದೆ. ಇಲ್ಲದೆ ಹೋದರೆ ಇನ್ನೊಂದು ದಿವಸವನ್ನು ನಿಗದಿಪಡಿಸುತ್ತದೆ. ನಿಮ್ಮ ಪ್ರಮಾಣೀಕೃತ ಹೇಳಿಕೆಯನ್ನು ಪಡೆದುಕೊಂಡ ಮೇಲೆ, ಮೇಲ್ನೋಟಕ್ಕೆ ಆಪಾದಿತ ತಪ್ಪು ಮಾಡಿದ್ದಾನೆ ಎಂದು ನ್ಯಾಯಾಲಯಕ್ಕೆ ಅನಿಸಿದರೆ, ಅವನಿಗೆ ಸಮನ್ಸ್ ಜಾರಿ ಮಾಡಲು ಆದೇಶಿಸುತ್ತದೆ. ಸಮನ್ಸ್ ಜಾರಿ ಆದ ಮೇಲೆ, ಆಪಾದಿತ ನ್ಯಾಯಾಲಯಕ್ಕೆ ಒಬ್ಬ ಜಾಮೀನುದಾರನೊಂದಿಗೆ ಹಾಜರಾಗಿ ಜಾಮೀನು ಪಡೆಯುತ್ತಾನೆ. ಅನೇಕ ಸಂದರ್ಭಗಳಲ್ಲಿ ಆಪಾದಿತನಿಗೆ ಸಮನ್ಸ್ ಜಾರಿಯಾಗುವುದಕ್ಕೆ ಹಲವಾರು ತಿಂಗಳುಗಳು ಕಳೆಯುತ್ತವೆ. ಆಪಾದಿತ ನ್ಯಾಯಾಲಯಕ್ಕೆ ಹಾಜರಾದ ಮೇಲೂ ಕೂಡ ಮೊಕದ್ದಮೆ ಬೇಗ ಇತ್ಯರ್ಥವಾಗುವುದಿಲ್ಲ. ಒಂದಲ್ಲ ಒಂದು ಕಾರಣ ಕೊಟ್ಟು ಆಪಾದಿತ ನ್ಯಾಯಾಲಯಕ್ಕೆ ಗೈರುಹಾಜರಾಗುತ್ತಾನೆ. ಕ್ರಿಮಿನಲ್ ಮೊಕದ್ದಮೆಗಳಲ್ಲಿ ಆಪಾದಿತನ ಗೈರುಹಾಜರಿಯಲ್ಲಿ ವಿಚಾರಣೆ ಮುಂದುವರೆಯುವುದಿಲ್ಲ. ಹೀಗಾಗಿ ಐದಾರು ವರ್ಷಗಳಿಂದ ಇತ್ಯರ್ಥವಾಗದೆ ಉಳಿದಿರುವ ಅನೇಕ ಪ್ರಕರಣಗಳಿವೆ. ಕೆಲಸದ ಒತ್ತಡದಿಂದ ನ್ಯಾಯಾಲಯಗಳು ವಿಚಾರಣೆಯ ತಾರೀಖನ್ನು ದೂರದೂರಕ್ಕೆ ಮುಂದೂಡುತ್ತವೆ. ಇತ್ತೀಚೆಗಂತೂ ಪ್ರಕರಣಗಳ ಸಂಖ್ಯೆ ಏರುತ್ತಲೇ ಹೋಗಿ ನ್ಯಾಯಾಲಯಗಳ ಮೇಲೆ ಒತ್ತಡ ಹೆಚ್ಚುತ್ತಲೇ ಇದೆ. ಕೇವಲ ಚೆಕ್ ಪ್ರಕರಣಗಳಿಗಾಗಿಯೇ ಬೆಂಗಳೂರು ನಗರದಲ್ಲಿ ಈಗ ನಾಲ್ಕು ಕ್ರಿಮಿನಲ್ ನ್ಯಾಯಾಲಯಗಳಿವೆ. ಹಾಗಾದರೂ ಇತ್ಯರ್ಥವಾಗದ ಪ್ರಕರಣಗಳು ಗುಡ್ಡೆಯಾಗುತ್ತಲೇ ಇವೆ. ಮುಂಬೈ ನಗರ ಒಂದರಲ್ಲೇ ಇತ್ಯರ್ಥವಾಗದ ಪ್ರಕರಣಗಳ ಸಂಖ್ಯೆ ೨೬ ಸಾವಿರಕ್ಕೂ ಮಿಕ್ಕಿವೆಯಂತೆ.

ಯಾವ ಉದ್ದೇಶಕ್ಕಾಗಿ ನೆಗೋಷಿಯಬಲ್ ಇನ್‌ಸ್ಟ್ರುಮೆಂಟ್ಸ್ ಕಾಯಿದೆಗೆ ತಿದ್ದುಪಡಿಯನ್ನು ತರಲಾಯಿತೋ, ಆ ಉದ್ದೇಶ ನಿರರ್ಥಕವಾಗಿದೆ. ಆಗಿರುವ ಉಪಕಾರವೆಂದರೆ, ನ್ಯಾಯಾಲಯಗಳ ಮೇಲೆ ಮೊದಲೇ ಇರುವ ಹೊರಲಾಗದ ಹೊರೆಯ ಮೇಲೆ ಇನ್ನೂ ಅಷ್ಟು ಹೊರೆ! ಗಾದೆಯೊಂದನ್ನು ತಿದ್ದಿ ಬರೆಯುವುದಾದರೆ, ಎತ್ತಿಗೆ ಜ್ವರ ಬಂದರೆ ಎಮ್ಮೆಗೆ ತಲೆನೋವಿನ ಔಷಧ ಕುಡಿಸಿದಂತೆ ಆಗಿದೆ!

ಅಂತು, ವಿಚಾರಣೆ ಮುಗಿದು, ಆಪಾದಿತನಿಗೆ ಶಿಕ್ಷೆ ಆದರೆ ಅವನಿಗೆ ವಿಧಿಸಿದ ದಂಡದಲ್ಲಿ ಚೆಕ್ಕಿನ ಮೊಬಲಗಿನಷ್ಟನ್ನು ಅರ್ಜಿದಾರನಿಗೆ ಕೊಡಲು ನ್ಯಾಯಾಲಯ ಆದೇಶಿಸುತ್ತದೆ. ಅರ್ಜಿದಾರ ದಂಡವನ್ನು ಕೊಡದೆ ಹೋದರೆ ಏನು ಉಪಾಯ ಎಂದು ಕಾನೂನಿನಲ್ಲಿ ಹೇಳಿಯೇ ಇಲ್ಲ! ಹೇಗಾದರೂ ನಿಮ್ಮ ಹಣ ವಸೂಲು ಮಾಡಲು ನೀವು ಸಿವಿಲ್ ನ್ಯಾಯಾಲಯದ ಬಾಗಿಲನ್ನು ತಟ್ಟಲೇಬೇಕಾಗುತ್ತದೆ.

ಎಸ್. ಆರ್. ಗೌತಮ್
ನಂ. ೫೨೭, ೧೭ನೇ ಕ್ರಾಸ್, ೧ನೇ ಬ್ಲಾಕ್, ಆರ್. ಟಿ. ನಗರ, ಬೆಂಗಳೂರು- ೫೬೦ ೦೩೨

# ಬುದ್ಧಿವಂತರಿಗೊಂದಿಷ್ಟು ಪ್ರಶ್ನೆಗಳು

ಎ. ನಾಗರಾಜ ಶೆಣೈ

ಹೇಳಿ ಕೇಳಿ ನಮ್ಮ ದೇಶ ಬುದ್ಧಿವಂತರ ದೇಶ. ನಮ್ಮ ಜನ ಎಲ್ಲೇ ಹೋಗಲಿ ತಮ್ಮ ಬುದ್ಧಿವಂತಿಕೆಯನ್ನು ಮೆರೆಸಿಯೇ ಬರೋದು. ಹೀಗಾಗಿಯೇ ವಿದೇಶಕ್ಕೆ ಅತಿ ಹೆಚ್ಚಾಗಿ ರಫ್ತಾಗುವ ಭಾರತದ ಸರಕು ಅಂದರೆ ಇಲ್ಲಿಯ ಬುದ್ಧಿವಂತ ಜನ. ಅಂಥದ್ರಲ್ಲಿ ಆ ಎಲ್ಲ ಬುದ್ಧಿವಂತ ಜನರ ತವರೂರು, ಈ ದೇಶ, ಸ್ವರ್ಗಾದಪಿ ಗರಿಯಸೀ ಎಂಬಂತಾಗಲಿಲ್ಲವೇಕೆ ? ಅದು ಹೋಗಲಿ, ನಮ್ಮ ದಿನನಿತ್ಯದ ಜೀವನದಲ್ಲಿ, ಜೀವನದ ಆಗುಹೋಗುಗಳಲ್ಲಿ, ನಮಗಿಂತ ದೊಡ್ಡವರೆನಿಸಿಕೊಂಡ ಜನರ ಜೀವನದಲ್ಲಿಯ ವೈರುಧ್ಯಗಳಿಗೆ ಈ ಬುದ್ಧಿವಂತ ಜನತೆ ಯಾವ ಅಚ್ಚರಿಯೂ ಇಲ್ಲದೆ ಆರಾಮಾಗಿ ಹೊಂದಿಕೊಂಡು ನಡೆದುಬಿಟ್ಟಿದ್ದಾರೆ. ಬಹುಶಃ ಇನ್ನೂ ಅಷ್ಟು ಬುದ್ಧಿವಂತನಾಗದೇ ಇದ್ದ ಕಾರಣದಿಂದಲೇ ಇರಬೇಕು, ನನಗೆ ಈ ಅಚ್ಚರಿಗಳು ಕಾಡುತ್ತಿವೆ. ಆದಕ್ಕಾಗಿಯೇ ಸುದೀರ್ಘ ಅವಧಿಯಲ್ಲಿ ಗಮನಿಸಿದ ಅಂಥ ಕೆಲ ಪ್ರಶ್ನೆಗಳನ್ನು ನಮ್ಮ ಬುದ್ಧಿವಂತ ಜನರ ಅವಗಾಹನೆಗೆ ಇಡುತ್ತಿದ್ದೇನೆ. ತಿಳಿದವರು ಉತ್ತರಿಸುವ ಕೃಪೆ ಮಾಡಬೇಕು.

ಅ. ಯಾವುದಾದರೂ ದೇಶವನ್ನೇ ಬೆಚ್ಚಿಬೀಳಿಸುವಂಥ ಹಗರಣವಾಗಿ, ಪತ್ರಿಕೆಗಳು, ಮಾಧ್ಯಮಗಳು, ಸಂಘಟನೆಗಳು ಮತ್ತು ಜನಸಾಮಾನ್ಯರೆಲ್ಲ ಬೊಬ್ಬೆಹಾಕಲಾರಂಭಿಸಿ ಈ ಪ್ರಕರಣ ಸಂಸತ್ತಿನಲ್ಲಿ ಪ್ರತಿಧ್ವನಿಸಿದಾಗಲೆಲ್ಲ ನಮ್ಮ ಪ್ರಧಾನಮಂತ್ರಿಗಳಾದಿಯಾಗಿ ಎಲ್ಲ ದೊಡ್ಡ ಜನರೂ ''ಹಗರಣಕ್ಕೆ ಜವಾಬ್ದಾರರೆಂದು ಕಂಡುಬಂದ ವ್ಯಕ್ತಿಗಳು, ಅವರೆಷ್ಟೇ ಉನ್ನತ ಸ್ಥಾನದಲ್ಲಿರಲಿ, ಅವರ ವಿರುದ್ಧ ಉಗ್ರಕ್ರಮ ಕೈಗೊಳ್ಳಲು ಸರ್ಕಾರ ಹಿಂಜರಿಯದು'' ಎಂಬ ಹೇಳಿಕೆ ನೀಡುತ್ತಾರೆ. ನಂತರ ತನಿಖೆ ನಡೆಸಿದ ಆಯೋಗ ಮುಖಕ್ಕೆ ಹೊಡೆದಂತೆ ತಪ್ಪಿತಸ್ಥರ ಹೆಸರು ಹೇಳಿದರೂ ಮುಂದೆ ಅವರು ಹೇಳಿದಂಥದ್ದೇನೂ ಆಗುವುದೇ ಇಲ್ಲ. ಕಾರಣವೇನು ?

ಆ. ಅಧಿಕಾರಕ್ಕೆ ಬರುವ ಮುಂಚೆ ಬರೀ ಶಾಸಕ ಯಾ ನಾಯಕರಾಗಿದ್ದವರು ಯಾವುದಾದರೂ ಪ್ರಕರಣ ಅಥವಾ ಸಮಸ್ಯೆಯ ಚರ್ಚೆ ಬಂದಾಗ ಅದರ ಕುರಿತು ''ತಕ್ಷಣ ಉಗ್ರಕ್ರಮ ಕೈಗೊಳ್ಳಲು'' ಸರ್ಕಾರವನ್ನು ಒತ್ತಾಯಿಸುತ್ತಾರೆ. ಕೆಲದಿನಗಳ ನಂತರ ಸ್ವತಃ ತಾವೇ ಅಧಿಕಾರಕ್ಕೆ ಬಂದಾಗ ಅದೇ ಪ್ರಕರಣ ಅಥವಾ ಸಮಸ್ಯೆಯ ಬಗ್ಗೆ ''ಸಹಾನುಭೂತಿಯಿಂದ ಪರಿಶೀಲಿಸಲಾಗುವುದು'' ಎಂದು ಹೇಳಿಕೆ ನೀಡುತ್ತಾರೆ. ಇದೆಂಥ ಮನಃಪರಿವರ್ತನೆ ?

ಇ. ಚುನಾವಣೆಯಲ್ಲಿ ಗೆದ್ದ ಪಕ್ಷಕ್ಕೆ ಹಿಂಡುಹಿಂಡಾಗಿ ಪಕ್ಷಾಂತರ ಮಾಡುವ ನಮ್ಮ ನಾಯಕ ಮಣಿಗಳು ಆ ಪಕ್ಷಕ್ಕೆ ಯಾವುದೇ ಅಧಿಕಾರ, ಮಂತ್ರಿ ಪದವಿ ಅಥವಾ ಮಾಡಿದ ಹಗರಣಗಳಿಂದ ರಕ್ಷಣೆ ಪಡೆಯಲು ಹೋಗುವುದೇ ಇಲ್ಲ; ಬದಲಾಗಿ ಆ ಪಕ್ಷದ ''ಕಾರ್ಯಕ್ರಮ, ಸಿದ್ಧಾಂತ ಮತ್ತು ಜನಪರ ನಿಲುವುಗಳಿಗೆ ಮಾರುಹೋಗಿಯೇ'' ಪಕ್ಷಾಂತರ ಮಾಡುತ್ತಾರೆ. ಆದರೆ ಇವರಿಗೆಲ್ಲ ಸದಾ ಅಧಿಕಾರದಲ್ಲಿರುವ ಪಕ್ಷದ ತತ್ವ ಸಿದ್ಧಾಂತಗಳೇ ಆಕರ್ಷಕವಾಗಿರಲು ಕಾರಣವೇನು ?

ಈ. ಸರಕಾರಿ ಸಂಸ್ಥೆ ಅಥವಾ ಮಂಡಳಿಗಳ ಅಧ್ಯಕ್ಷರು, ನಿರ್ದೇಶಕರುಗಳಿಗೆ ಸಮಯಾಭಾವದಿಂದ ನಮ್ಮ ಕಡೆಯ ಹಳ್ಳಿಪಟ್ಟಣಗಳ ಸ್ಥಿತಿಗತಿ, ಅಲ್ಲಿಯ ತಂತ್ರಜ್ಞಾನ ಕುರಿತು ಅಧ್ಯಯನ ಮಾಡಲಾಗಿರುವುದಿಲ್ಲ. ಆದರೆ ಅದಕ್ಕಿಂತ ಮುಂಚೆ, ಅದಕ್ಕೂ ಹೆಚ್ಚಿನ ಅಧ್ಯಯನಕ್ಕಾಗಿ ಅವರಿಗೆ ಸರಕಾರಿ ಖರ್ಚಿನಲ್ಲಿ ವಿದೇಶಕ್ಕೆ ಹೋಗಬೇಕಾಗಿ ಬರುವುದು. ಏನಿದರ ಜಾದೂ ?

ಉ. ರಾಜಕಾರಣಿಯೊಬ್ಬ ಯಾವುದೇ ಕಾರಣದಿಂದ ಒಬ್ಬ ಪತ್ರಕರ್ತನನ್ನೋ ಅಥವಾ ಸಾಹಿತಿಯನ್ನೋ (ತನ್ನನ್ನು ಟೀಕಿಸಿದ್ದಕ್ಕೆ ಪ್ರತಿಯಾಗಿ) ಬಹಿರಂಗವಾಗಿ ಟೀಕಿಸಿದಾಗ ''ಪ್ರಜಾಪ್ರಭುತ್ವದಲ್ಲಿ ಟೀಕೆ ವಿಮರ್ಶೆಗಳನ್ನು ಸಂಯಮದಿಂದ ಸ್ವೀಕರಿಸುವ ಮನೋಭಾವನೆ ಇರಬೇಕು'' ಎಂದು ಹಿರಿಕಿರಿಯರಾದಿಯಾಗಿ ಎಲ್ಲ ಪತ್ರಕರ್ತ, ಸಾಹಿತಿಗಳೂ, ಆ ರಾಜಕಾರಣಿಗೆ ಉಪದೇಶ ನೀಡಿ ಛೀಮಾರಿ ಹಾಕುತ್ತಾರೆ. ಆದರೆ ಅದೇ ಸಾಹಿತಿಯನ್ನು ಇನ್ನೊಬ್ಬ ಸಾಹಿತಿ ಬಹಿರಂಗವಾಗಿ ಟೀಕಿಸಿದಾಗ ಈ ಮುಂಚಿನ ಉಪದೇಶಕರು ತಮ್ಮ ಗುಂಪಿನೊಂದಿಗೇ ಹೋಗಿ ಟೀಕಿಸಿದಾತನ ಜನ್ಮ



ಜಾಲಾಡಿಬಿಡುತ್ತಾರೆ. ಏಕೆ ?

ಊ. ಅಧಿಕಾರದಲ್ಲಿಲ್ಲದ ರಾಜಕಾರಣಿಗಳ ಎಲ್ಲ ಕಾಯಿಲೆಗಳೂ ಇಲ್ಲಿನ ವೈದ್ಯರ ಆರೈಕೆಯಿಂದಲೇ ಗುಣವಾಗಿ ಬಿಡುತ್ತವೆ. ಆದರೆ ಅಧಿಕಾರ ಸಿಕ್ಕಮೇಲೆ ಬರುವ ಯಾವುದೇ ಕಾಯಿಲೆ ವಿದೇಶದಲ್ಲೇ ಗುಣವಾಗಬೇಕಾದ ''ವಿದೇಶೀ ಕಾಯಿಲೆ'' ಆಗಿರುತ್ತದೆ. ಇವರಿಗೆ ಅಧಿಕಾರ ಸಿಕ್ಕಿದ್ದು ಆ ವಿದೇಶೀ ಕಾಯಿಲೆಗೆ ಅದು ಹೇಗೆ ತಿಳಿಯುತ್ತದೆ ?

ಋ. ಏನಾದರೂ ಆಪತ್‌ಸ್ಥಿತಿ ಅಥವಾ ಆತಂಕ ಒದಗಿಬಂದಾಗಲೆಲ್ಲ ಪ್ರಧಾನಿಗಳು ಕರೆಯುವ ಸಂಪುಟದ ತುರ್ತುಸಭೆಗೆ ದೇಶಾದ್ಯಂತದ ಪ್ರವಾಸದಿಂದ ಧಾವಿಸಿಬರುವ ಸದಸ್ಯರು **ಯಾವಾಗಲೂ** ''ಎಲ್ಲ ನಿರ್ಧಾರ ಕೈಗೊಳ್ಳುವ ಅಧಿಕಾರವನ್ನು ಪ್ರಧಾನಿಗೇ ವಹಿಸಿಕೊಟ್ಟು, ಅವರ ನಾಯಕತ್ವದಲ್ಲಿ ಸಂಪೂರ್ಣ ವಿಶ್ವಾಸ ವ್ಯಕ್ತಪಡಿಸುವ ''ಮಹತ್ವದ ನಿರ್ಣಯ''ವನ್ನೇ ಕೈಗೊಳ್ಳುತ್ತಾರೆ. ದೆಹಲಿಗೆ ಬಂದು ಆಯಾಸ ಮಾಡಿಕೊಳ್ಳುವ ಬದಲು ಈ ''ಮಹತ್ವದ'' ನಿರ್ಣಯವನ್ನು ಎಲ್ಲರೂ ತಂತಮ್ಮ ಮನೆಗಳಲ್ಲೇ ಕೈಗೊಂಡು ಅದನ್ನು ದೆಹಲಿಗೆ ರವಾನಿಸಬಹುದಲ್ಲ ?

ೠ. ತೀವ್ರ ಹಣಕಾಸು ಕೊರತೆ, ಕೊರತೆ ಬಜೆಟ್ ಇರುವ ಕಾರ್ಪೊರೇಶನ್‌ಗಳಲ್ಲಿ ಅನೇಕ ಅಭಿವೃದ್ಧಿ ಕಾರ್ಯಗಳಿಗೆ ಹಣವಿರುವುದಿಲ್ಲ. ಇಂಥ ಪರಿಸ್ಥಿತಿಯಲ್ಲಿ ಅದಕ್ಕೆ ಪ್ರತಿವರ್ಷ ಹೊಸದಾಗಿ ಆಯ್ಕೆಯಾಗುವ ಮೇಯರುಗಳ ವರ್ಷಭವಿಷ್ಯದಲ್ಲಿ [illegible] ಜನಾಕ್ರೋಶದ ಮಧ್ಯೆಯೂ, ''ಕಾರ್ಪೊರೇಶನ್ ಖರ್ಚಿನಲ್ಲಿ ವಿದೇಶ ಪ್ರಯಾಣಯೋಗ'' ಒದಗಿಬರುತ್ತದೆ. [illegible]

ಎ. ಸರ್ವಸಂಗ ಪರಿತ್ಯಾಗಿಗಳಾದ [illegible] ಧಾರ್ಮಿಕ ಸಭೆಗಳಲ್ಲಿ ತಮ್ಮ ಆಶೀರ್ವಚನಗಳಲ್ಲಿ ಜನರಿಗೆ ಎಲ್ಲ ಬಗೆಯ [illegible]

ಆದರೆ ತಮ್ಮ ಕ್ಯಾಪಿಟೇಶನ್ ಕಾಲೇಜುಗಳಲ್ಲಿ ಸರ್ಕಾರ ನ್ಯಾಯಾಲಯದ ಆಜ್ಞೆಯಂತೆ, ನ್ಯಾಯವಾದ ಫೀಸಿನಲ್ಲಿ ಅರ್ಹತೆಯುಳ್ಳ ವಿದ್ಯಾರ್ಥಿಗಳನ್ನು ಸೇರಿಸಲು ಕೇಳಿದೊಡನೆ ಉಗ್ರವಾಗಿ ಸಿಡಿದಾಡಿ ಪತ್ರಿಕಾ ಹೇಳಿಕೆ, ರ್‍ಯಾಲಿ ಇತ್ಯಾದಿಗಳ ಮೂಲಕ ಸರಕಾರಕ್ಕೆ ಬೆದರಿಕೆ ಹಾಕುವರು. ಎಂಥ ಪವಾಡ ಸದೃಶ ಪರಿವರ್ತನೆ ?

> ಮತಧರ್ಮ ಪ್ರತಿವ್ಯಕ್ತಿಯ ವೈಯಕ್ತಿಕ ವಿಷಯ. ಅದನ್ನು ರಾಜಕೀಯ ಅಥವಾ ರಾಷ್ಟ್ರೀಯ ವ್ಯವಹಾರಗಳ ಜೊತೆ ಸೇರಿಸಬಾರದು.
>
> *- ಗಾಂಧೀಜಿ*

ಏ. ನಮ್ಮ ದೇಶದಲ್ಲಿ ಶಾಲೆಗೆ ಸೇರಿಸುವಾಗಿನಿಂದ ಹಿಡಿದು ಕೆಲಸಕ್ಕೆ ಸೇರುವತನಕ (ಕ್ಷಮಿಸಿ, ಮುಂದೆ ಭಡ್ತಿಯಾಗಿ ನಿವೃತ್ತಿಯಾಗುವ ತನಕ) ಜಾತಿಯೇ ಮುಖ್ಯ ಪರಿಗಣನೆ. ಅರ್ಹತೆಯೊಂದೇ ಎಂದೂ ಅಲ್ಲ. ಅದೇ ರೀತಿ ರಾಜಕೀಯದಲ್ಲೂ ಅಭ್ಯರ್ಥಿ ಆಯ್ಕೆ ಹಿಡಿದು, ಮಂತ್ರಿ, ಮುಖ್ಯಮಂತ್ರಿ ಆಯ್ಕೆ ತನಕ ಎಲ್ಲೆಡೆ ಜಾತಿಯದ್ದೇ ಮುಖ್ಯ ಪರಿಗಣನೆ ಢಣಾ ಡಂಗುರವಾಗಿ ನಡೆದಿರುತ್ತದೆ. ಆದರೂ ನಮ್ಮೆಲ್ಲ ನೇತಾರರೂ ಇಂದಿಗೂ ತಮ್ಮ ಪಕ್ಷವನ್ನು ''ಜಾತ್ಯತೀತ'' ಪಕ್ಷವೆಂದೂ, ಎದುರು ಪಕ್ಷವನ್ನು ಜಾತಿವಾದಿ ಕೋಮುವಾದಿಯೆಂದೂ, ನಮ್ಮ ದೇಶವನ್ನು ''ಜಾತ್ಯತೀತ'' ದೇಶವೆಂದೂ ಹೇಳುತ್ತಾರೆ. ಅವರ ಕಲ್ಪನೆಯಲ್ಲಿ ''ಜಾತ್ಯತೀತ'' ಶಬ್ದದ ಅರ್ಥ ಶಬ್ದಕೋಶಕ್ಕಿಂತ ಭಿನ್ನವಾಗಿರಬಹುದೆ ?

ಐ. ಖಾಸಗಿಯವರು ಲಕ್ಷುರಿಯಂಥ ಬಸ್‌ಗಳನ್ನು, ಹದವಾಗಿ ಜನ ತುಂಬಿ ಓಡಿಸಿದರೂ ಅವರ ಮೇಲೆ ಲಕ್ಷ್ಮೀ ಕಟಾಕ್ಷ ಇರುತ್ತದೆ. ಆದರೆ ಸರಕಾರಿ ಬಸ್‌ನವರು ತಮ್ಮ ಲಟಾರಿ ಬಸ್‌ಗಳಲ್ಲಿ ಕುರಿಮಂದೆಯಂತೆ ಜನರನ್ನು ಒಳಗೆ (ಮತ್ತು ಟಾಪ್ ಮೇಲೆ ಸಹ) ತುಂಬಿದರೂ ಯಾವತ್ತೂ ನಷ್ಟದೇವತೆಯ ಕೃಪಾಕಟಾಕ್ಷದಲ್ಲೇ ಇರುತ್ತಾರೇಕೆ ? ಇದಕ್ಕೆ ಕಾರಣ ಬೆಂಗಳೂರಿನಲ್ಲಿರುವ ಮೇಲಿನವರೋ ಅಥವಾ ಟಾಪ್ ಮೇಲೆ ಕೂರುವ ಕೆಳಗಿನವರೋ ?

ಒ. ಸರ್ಕಾರ ಎಂದಾದರೂ ಜನಮನ ಕಲಕುವಂಥ ಗಲಭೆ ಮತ್ತು ಹಗರಣ ಇತ್ಯಾದಿ ಜರುಗಿದಾಗ ಭುಗಿಲೇಳುವ ಜನಾಕ್ರೋಶಕ್ಕೆ ಮಣಿದು ಕೂಡಲೇ ನ್ಯಾಯಾಂಗ ತನಿಖೆಗೆ ಆಜ್ಞಾಪಿಸುತ್ತದೆ. ಆದರೆ ಹೀಗೆ ಆಜ್ಞಾಪಿಸಿದ ಅನೇಕ ಪ್ರಕರಣಗಳಲ್ಲಿ ಇಂಥದೊಂದು ತನಿಖೆಗೆ ನ್ಯಾಯಮೂರ್ತಿಯನ್ನೇ ನೇಮಿಸದೆ ಆ ಪ್ರಕರಣವೇ ಮರೆತುಹೋಗುವಂತೆ ಮಾಡುವುದು, ಇನ್ನುಳಿದ ಕೆಲ ಬೆರಳೆಣಿಕೆಯ ಪ್ರಕರಣಗಳಲ್ಲಿ ಅಂಥ ತನಿಖೆ ವರ್ಷಗಟ್ಟಲೆ ನಡೆದು, ಲಕ್ಷಗಟ್ಟಲೆ ಹಣ ಖರ್ಚಾಗಿ, ಅದರ ಪ್ರತಿಫಲವಾಗಿ ಸರ್ಕಾರಕ್ಕೆ ಸಲ್ಲಿಸುವ ವರದಿ ಸರ್ಕಾರದ ಕಡತಗಳ ರಾಶಿಯಲ್ಲೇ ಕೊಳೆತು ಜನಮನದಿಂದ ಮರೆಯಾಗುವುದು. ಇದುವರೆಗೆ ಯಾವ ಪ್ರಕರಣದಲ್ಲೂ ಅಪರಾಧಿಗೆ ಶಿಕ್ಷೆಯಾದ (ದೊಡ್ಡ ಹೆಗ್ಗಣಕ್ಕೆ, ಸಣ್ಣ ಇಲಿಗಳಿಗಲ್ಲ) ಉದಾಹರಣೆಗಳಿಲ್ಲ, ಮೊದಲು ನ್ಯಾಯಾಂಗ ತನಿಖೆಗೆ ಒತ್ತಾಯಿಸಿದ ಜನರೂ ಸೇರಿ ಎಲ್ಲರೂ ಪ್ರಕರಣ ಮರೆತು ಹಾಯಾಗಿರುತ್ತಾರೆ. ಇದೆಂಥ ಜನಮರೆವು ?

ಪ್ರಶ್ನೆಗಳ ಯಾದಿ ಮುಗಿಯಲಿಕ್ಕಿಲ್ಲ. ಆದರೆ ಸದ್ಯಕ್ಕೆ ಇಷ್ಟು ಸಾಕು. ವಿದ್ಯಮಾನಗಳ ಬಗ್ಗೆ ಕುತೂಹಲ ಬೆಳೆಸಿಕೊಳ್ಳೋ 'ದುಶ್ಚಟ' ಬೆಳೆಸಿಕೊಂಡ್ರೆ ಎಷ್ಟೆಲ್ಲ ವೈಚಿತ್ರ್ಯಗಳು ! ಎಷ್ಟೆಲ್ಲ ಸಮಸ್ಯೆಗಳು !! ಅದಕ್ಕೇ ಯಾವುದಕ್ಕೂ ಅಚ್ಚರಿಪಡದೆ ಮುಂದುವರಿಯುವುದು ಮನಸ್ಸಿನ ಶಾಂತಿ ಕಾಪಾಡಿಕೊಳ್ಳುವ ಒಂದು ಉತ್ತಮ ಮಾರ್ಗವಾಗಿರಬಹುದು. ಅದೇ ಬುದ್ಧಿವಂತಿಕೆಯೂ ಆಗಿರಬಹುದೇ ?

ಏ. ನಾಗರಾಜ ಶೆಣೈ
೨೮೬೦, ೧೪ನೇ 'ಡಿ' ಮುಖ್ಯರಸ್ತೆ, ೮ನೇ 'ಇ' ಅಡ್ಡರಸ್ತೆ,
ಆರ್. ಪಿ. ಸಿ. ಬಡಾವಣೆ, ಅತ್ತಿಗುಪ್ಪೆ, ಬೆಂಗಳೂರು - ೫೬೦ ೦೪೦

ನಮ್ಮ ತಾರ್ಕಿಕ ಶಕ್ತಿಯನ್ನು ಅಭಿವ್ಯಕ್ತಿಗೊಳಿಸಲು ಅನುಕೂಲವಾಗುವಂತಹ ಸವಾಲೊಂದನ್ನು ಗಣಿತಶಾಸ್ತ್ರದ ಪ್ರಾಧ್ಯಾಪಕರಾದ 'ಯಕ್ಷ' ಎಂಬುವರು ಇಲ್ಲಿ ಹಾಕಿದ್ದಾರೆ. ಇಂತಹ ಪ್ರಶ್ನೆಗಳು ಬೇರೆ ಬೇರೆ ರೂಪಗಳಲ್ಲಿ 'ವಿನೋದ ಗಣಿತ'ವೆಂದು ಪ್ರಸಿದ್ಧಿ ಹೊಂದಿವೆ. ಇದರಲ್ಲಿ ತೀರಾ ಹೊಸದೇನೂ ಇಲ್ಲ. ಆದರೆ ಪ್ರಶ್ನೆಯನ್ನು ಬಿಡಿಸಲು ಯತ್ನಿಸಿದರೆ ತಾರ್ಕಿಕವಾಗಿ ಚಿಂತಿಸಬೇಕಾದ್ದು ಅವಶ್ಯಕವಾಗುತ್ತದೆ. ನಿಮ್ಮ ಉತ್ತರವನ್ನು 'ಹೊಸತು' ಸಂಪಾದಕರಿಗೆ ಕಳಿಸಿಕೊಡಿ. ಸರಿಯಾದ ಉತ್ತರಗಳನ್ನು ನೀಡಿದವರ ವಿವರಗಳನ್ನು ಉತ್ತರದೊಂದಿಗೆ ಮುಂದಿನ ಸಂಚಿಕೆಯಲ್ಲಿ ಪ್ರಕಟಿಸಲಾಗುವುದು. ಜೊತೆಗೆ, ಇನ್ನೊಂದು ಇಂಥದೇ ಪ್ರಶ್ನೆಯನ್ನೂ ಹಾಕಲಾಗುತ್ತದೆ.

**ಸಂಪಾದಕ**

ಒಂದು ರಾಜ್ಯದ ಮುಖ್ಯ ಮಂತ್ರಿಗಳು 'ಸಕ್ಕರೆ ಹಗರಣ'ದ ತನಿಖೆ ನಡೆಸಲು ತುಂಬಾ ಒತ್ತಡಕ್ಕೊಳಗಾದರು. ಸಮೀಪದಲ್ಲೆ ಚುನಾವಣೆ ನಡೆಯಲಿದ್ದು ತನಿಖಾ ವರದಿ ಮುಖ್ಯಮಂತ್ರಿಗಳ ರಾಜಕೀಯ ಜೀವನಕ್ಕೇ ಮಾರಕವಾಗಬಹುದಾಗಿತ್ತು. ಆದರೆ ನಮ್ಮ ಮಂತ್ರಿಗಳು ಮೌಲ್ಯಾಧಾರಿತ ರಾಜಕಾರಣದ ಸ್ವಯಂ ಘೋಷಿತ ಆಚಾರ್ಯರು. ಹಾಗಾಗಿ ಆರು ಸದಸ್ಯರುಳ್ಳ ಒಂದು ಸಮಿತಿ ರಚಿಸಲು ನಿರ್ಧರಿಸಿ, ವಿಪಕ್ಷದಲ್ಲಿದ್ದ ವೈಯಕ್ತಿಕ ನೆಲೆಯಲ್ಲಿ ತುಂಬಾ ಸ್ನೇಹಿತರಾಗಿದ್ದ, ಇಬ್ಬರು ವರ್ಚಸ್ವೀ ಎಂ.ಎಲ್.ಎ.ಗಳನ್ನು ಮನೆಗೆ ಕರೆದು ಒಂದು ಭರ್ಜರಿ ಔತಣಕೂಟ ಏರ್ಪಡಿಸಿದರು.

ಮರುದಿನವೇ ಆ ಎಂ.ಎಲ್.ಎ.ಗಳು ಪತ್ರಿಕಾ ಗೋಷ್ಠಿಯನ್ನು ಕರೆದು ಮುಖ್ಯಮಂತ್ರಿಗಳು ಕೂಡಲೆ ಒಂದು ತನಿಖಾ ಸಮಿತಿಯನ್ನು ರಚಿಸಬೇಕೆಂದು ಒತ್ತಾಯಿಸಿದರು. ಅವರಲ್ಲೊಬ್ಬರು ಸಮಿತಿಯಲ್ಲಿ ಆರು ಸದಸ್ಯರಿರಬೇಕೆಂದು ಆಗ್ರಹಿಸಿದರು. ಇನ್ನೊಬ್ಬರು, ತನಿಖೆಯು ನಿಷ್ಪಕ್ಷಪಾತವಾಗಿರಬೇಕೆಂಬ ಬಯಕೆಯಿಂದ, ಸಮಿತಿಯ ಸದಸ್ಯರಲ್ಲಿ ಇಬ್ಬರಿಗಿಂತ ಹೆಚ್ಚು ಮಂದಿ ವೈಯಕ್ತಿಕ ನೆಲೆಯಲ್ಲಿ ಪರಸ್ಪರ ಮಿತ್ರರಿರಕೂಡದು ಎಂದು ತಾಕೀತು ಮಾಡಿದರು. ಮೊದಲಿನ ಎಂ.ಎಲ್.ಎ. ಅಷ್ಟೇ ಅಲ್ಲ, ಸಮಿತಿಯು ಒಗ್ಗಟ್ಟಿನಿಂದ ಕೆಲಸ ಮಾಡಿ ವರದಿಯನ್ನು ಬೇಗ ಕೊಡಬೇಕೆಂಬ ಉದ್ದೇಶದಿಂದ,



## ನಿಮ್ಮ ಬುದ್ಧಿಗೊಂದು ಸವಾಲು

ಸದಸ್ಯರಲ್ಲಿ ಪರಸ್ಪರ ವಿರೋಧಿಗಳು (ವೈಯಕ್ತಿಕ ನೆಲೆಯಲ್ಲಿ) ಇಬ್ಬರಿಗಿಂತ ಹೆಚ್ಚಿರಬಾರದೆಂದು ಕೇಳಿಕೊಂಡರು. ನಮ್ಮ ಮುಖ್ಯಮಂತ್ರಿಗಳು ಮರುದಿನವೇ ವಿಪಕ್ಷದ ಮುಖಂಡರನ್ನು ಕಂಡು ಸಮಿತಿಯ ಸಂಪೂರ್ಣ ಜವಾಬ್ದಾರಿಯನ್ನು ವಿಪಕ್ಷಕ್ಕೇ ವಹಿಸಿ ಪತ್ರಿಕೆಗಳ ಸಂಪಾದಕೀಯಗಳಲ್ಲಿ ಹೊಗಳಿಸಿಕೊಂಡರು.

ನಮ್ಮ ಮುಖ್ಯ ಮಂತ್ರಿಗಳು ಮೌಲ್ಯಾಧಾರಿತ ರಾಜಕಾರಣಕ್ಕಲ್ಲದೆ ರಾಜಕೀಯ ತಂತ್ರದಲ್ಲಿ ಚಾಣಕ್ಯರೆಂದು ಪ್ರಸಿದ್ಧಿ ಹೊಂದಿದವರು. ಎಂ.ಎಲ್.ಎ.ಗಳು ವಿಧಿಸಿದ ರೂಪದಲ್ಲಿ ತನಿಖಾ ಸಮಿತಿಯ ರಚನೆಯಾಗಲೇ ಇಲ್ಲ, ಏಕೆಂದರೆ ಆರು ಸದಸ್ಯರಿರುವ ಯಾವುದೇ ಸಮಿತಿಯಲ್ಲಿ ಯಾವಾಗಲೂ ಮೂರು ಮಂದಿ ಪರಸ್ಪರ ಮಿತ್ರರು ಅಥವಾ ಮೂರು ಮಂದಿ ಪರಸ್ಪರ ವಿರೋಧಿಗಳು ಇರಲೇಬೇಕಾಗುತ್ತದೆ ! ಅದು ಹೇಗೆ ?

ಸೂಚನೆ : ಈ ಪ್ರಶ್ನೆಯ ಸಂದರ್ಭದಲ್ಲಿ ಇಬ್ಬರು ವ್ಯಕ್ತಿಗಳು ಪರಸ್ಪರ ಮಿತ್ರರಲ್ಲದಿದ್ದರೆ ಪರಸ್ಪರ ವಿರೋಧಿಗಳೆಂದೂ, ವಿರೋಧಿಗಳಲ್ಲದಿದ್ದರೆ ಪರಸ್ಪರ ಮಿತ್ರರೆಂದೂ ಪರಿಗಣಿಸಬೇಕು.

'ಅ' ಎಂಬ ವ್ಯಕ್ತಿ 'ಕ' ಎಂಬ ವ್ಯಕ್ತಿಗೆ ಮಿತ್ರನಾದರೆ 'ಕ' ಎಂಬುವನು 'ಅ'ಗೆ ಮಿತ್ರ, 'ಅ' 'ಕ'ಗೆ ವಿರೋಧಿಯಾದರೆ 'ಕ'ಗೆ 'ಅ' ವಿರೋಧಿ.

'ಅ' 'ಕ'ಗೆ ಮಿತ್ರ (ಅಥವಾ ವಿರೋಧಿ), 'ಕ' 'ಗ'ಗೆ ಮಿತ್ರ (ಅಥವಾ ವಿರೋಧಿ) ಆಗಿದ್ದರೆ 'ಅ'ಗೆ 'ಗ' ಮಿತ್ರ (ಅಥವಾ ವಿರೋಧಿ) ಆಗಿರಲೇಬೇಕೆಂದಿಲ್ಲ.

### ಇವಳು

ಅವಳೇ - ಇವಳು
ನನ್ನ ನಲ್ಲೆಯ ಧೈರ್ಯಕೆ
ನಾನೆಷ್ಟು ಮೆಚ್ಚಲಿ -
ಸಮಾಜವನ್ನೆ ಎದುರಿಸಿ,
ನಿಲ್ಲುವಳು !
ಆದರೆ
ಮನೆಯೊಳಗಿನ ಜಿರಳೆ
ಇಲಿಗಳಿಗೆ ಹೆದರಿ
ನಡುಗಿ ಬಹುದೂರ
ನಿಲ್ಲುವಳು !



### ಮಹಾಮಂತ್ರಿ

ಬಕಾಸುರನಿಗಾದರೂ
ಹೊಟ್ಟೆ ತುಂಬಿತ್ತೇನೋ
ಆದರೆ
ನಮ್ಮ ಈ ಮಹಾಮಂತ್ರಿಗಳ
ದುರಾಸೆಯ ಹೊಟ್ಟೆ
ತುಂಬಿಲ್ಲ ಇನ್ನೂ....!!

**ಕೊಪ್ಪರಂ ಅನ್ನಪೂರ್ಣ, ಬೆಂಗಳೂರು - 3**



ನವಕರ್ನಾಟಕ ಪ್ರಕಾಶನ ಪ್ರಕಟಿಸಿರುವ 'ಕರ್ನಾಟಕ ಏಕೀಕರಣ ಇತಿಹಾಸ' ಕೃತಿಗಾಗಿ, ಶ್ರೀಮತಿ ಶೈಲಜಾ ರಚಿಸಿದ ಕರ್ನಾಟಕ ಏಕೀಕರಣಕ್ಕಾಗಿ ದುಡಿದ ೧೩೯ ಮಂದಿ ಮಹನೀಯರ ರೇಖಾಚಿತ್ರಗಳನ್ನು ನಿರಂತರ ಪ್ರದರ್ಶನಕ್ಕೆಂದು ಕನ್ನಡ ಭವನಕ್ಕೆ ನೀಡಲಾಯಿತು. ತಾ. ೨೩-೮-೯೯ ರಂದು ನಡೆದ ಸರಳ ಸಮಾರಂಭದಲ್ಲಿ ನವಕರ್ನಾಟಕ ಸಂಸ್ಥೆಯ ಶ್ರೀ ಆರ್. ಎಸ್. ರಾಜಾರಾಮ್ ಹಿರಿಯರಾದ ಶ್ರೀ ನಿಟ್ಟೂರು ಶ್ರೀನಿವಾಸರಾಯರ ಮೂಲಕ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಕಾರ್ಯದರ್ಶಿ ಶ್ರೀ ಚಂದ್ರಹಾಸಗುಪ್ತ (ಬಲದಿಂದ ಎರಡನೆಯವರು) ಅವರಿಗೆ ಚಿತ್ರಗಳನ್ನು ಹಸ್ತಾಂತರ ಮಾಡಿದರು

## ಜಾಗತೀಕರಣದಲ್ಲಿ ಆಸ್ತಿ ಯಾರ ಪಾಲಿಗೆ?

ರಾಷ್ಟ್ರೀಯ ಆರ್ಥಿಕತೆ ಎಂಬುದರ ಕಲ್ಪನೆಯೇ ಇನ್ನು ಮುಂದೆ ಅಸಹಜ. ಆಯಾ ರಾಷ್ಟ್ರಗಳ ಜನರ ಕೌಶಲ್ಯ ಮತ್ತು ಅಂತರ್ದೀಪ್ತಿಗಳೇ ಇನ್ನು ಮೇಲೆ ಪ್ರಮುಖ ಆಸ್ತಿ. ಜಾಗತಿಕ ಆರ್ಥಿಕತೆಯೊಡನೆ ಮಿಳಿತವಾಗಿ ವೃದ್ಧಿಯಾಗಲು ಅನುವು ಮಾಡಿಕೊಳ್ಳುವುದು ಪ್ರತಿಯೊಂದು ರಾಷ್ಟ್ರದ ಇಂದಿನ ರಾಜಕೀಯ ಕರ್ತವ್ಯ. ಕೌಶಲ್ಯವಿದ್ದು ಅದನ್ನು ಪ್ರಯೋಗಿಸುವವನು ಸಂಪತ್ತಿನ ಒಡೆಯನಾಗುತ್ತಾನೆ. ಹಾಗೆ ಮಾಡದವನು ಆರ್ಥಿಕವಾಗಿ ದುರ್ಬಲನಾಗುತ್ತಾನೆ.

- ರಾಬರ್ಟ್ ರೈಚ್

**— ಕೌಶಲ್ಯವು ಆಸ್ತಿ ಹೌದು. ಆದರೆ ಜಾಗತೀಕರಣದ ಹೆಸರಿನಲ್ಲಿ ಆ ಆಸ್ತಿಯು ಪರಕೀಯರಿಗೆ ಸಂಪತ್ತು ಶೇಖರಿಸಿಕೊಡುವಂತಾಗಿದೆ. ಹೆಸರಿಗೆ ಕುಶಲಿಯೇ ಸಂಪತ್ತಿನ ಒಡೆಯ; ಅದರ ಲಾಭ ಪಡೆಯಲು ರಚಿತವಾದ ವ್ಯವಸ್ಥೆ ವಾಸ್ತವಿಕವಾಗಿ ಆವನ ಕೌಶಲ್ಯವನ್ನು ಬಹಳ ಕಡಿಮೆ ಬೆಲೆಗೆ ಖರೀದಿಸಿಬಿಡುತ್ತದೆ. ಭಾರತದಂತಹ ರಾಷ್ಟ್ರಗಳ ಪರಿಸ್ಥಿತಿ ಇದು.**

## ಸೀಮಾರೇಖೆ ಯಾರಿಗೆ ?

ಕಳೆದ ಎರಡು ದಶಕಗಳಲ್ಲಿ ರಾಷ್ಟ್ರೀಯ ಎಲ್ಲೆಗಳನ್ನು ದಾಟಿ ಹೊರಹೋಗುತ್ತಿರುವವರ ಸಂಖ್ಯೆ ಹೆಚ್ಚಾಗಿದೆ. ಸಾರಿಗೆ ಮತ್ತು ಸಂಪರ್ಕದ ಸೌಲಭ್ಯಗಳು ಉತ್ತಮಗೊಂಡುದರ ಪರಿಣಾಮವಾಗಿ ಈಚಿನ ದಿನಗಳಲ್ಲಿ ಕಾಲ ಮತ್ತು ದೇಶಗಳು ಸಂಕುಚಿತಗೊಂಡಿವೆ ಹಾಗೂ ಸೀಮಾರೇಖೆಗಳು ಅದೃಶ್ಯವಾಗುತ್ತಿವೆ. ಇಡೀ ವಿಶ್ವವನ್ನು ಒಂದು ಹಳ್ಳಿ ಎಂದು ಕರೆಯುವುದು ಈಗ ವಾಡಿಕೆಯಾಗಿದೆ. ವಿಶ್ವಸಂಸ್ಥೆಯ ಅಭಿವೃದ್ಧಿ ಯೋಜನಾ ಸಂಸ್ಥೆ 1999ರಲ್ಲಿ ಇಡೀ ವಿಶ್ವಕ್ಕೆ ಸಂಬಂಧಿಸಿದಂತೆ ಮಾನವ ಸಂಪನ್ಮೂಲದ ಕೂಲಂಕಷ ಪರಿಶೀಲನೆ ನಡೆಸಿ ಒಂದು ವರದಿ ನೀಡಿದೆ. ಅದರಲ್ಲಿ ಮೇಲಿನ ಅಂಶಗಳನ್ನು ಕಾಣಿಸಿ ಮುಂದುವರಿದು ಹೀಗೆನ್ನಲಾಗಿದೆ : ''ಕಾಲ- ದೇಶ-ಸೀಮಾರೇಖೆಗಳು ಸಂಕುಚಿತಗೊಂಡು ವಿಶ್ವವು ಒಂದು ಹಳ್ಳಿಯಾಗಿ ಪರಿವರ್ತನೆಗೊಂಡಿರಬಹುದೇನೋ. ಆದರೆ ವಿಶ್ವದ ಎಲ್ಲ ಜನ ಅದರ ಪ್ರಜೆಗಳಾಗುವಂತಿಲ್ಲ. ಜಾಗತಿಕವಾಗಿ ತೀರಾ ಶ್ರೀಮಂತವೆನಿಸುವ ಕೆಲವು ಉದ್ಯೋಗಗಳಿಗೆ ಸೀಮಾರೇಖೆಗಳು ಅದೃಶ್ಯವಾಗುತ್ತಿವೆ, ನಿಜ. ಆದರೆ ಕೋಟಿಗಟ್ಟಲೆ ಜನಸಾಮಾನ್ಯರಿಗೆ ಸೀಮಾರೇಖೆಗಳು ಹಿಂದಿಗಿಂತಲೂ ಹೆಚ್ಚು ಬಿಗಿಗೊಂಡಿವೆ.''

**- ಭಾರತದಂತಹ ದೇಶದ ಜನರ ಅನುಭವವೂ ಇದೇ ಆಗಿರುವಾಗ ವಿಶೇಷ ವ್ಯಾಖ್ಯಾನವೇನೂ ಬೇಕಿಲ್ಲ.**

## ಸಾದರ ಸ್ವೀಕಾರ

**ಆಯ್ದ ರಷ್ಯನ್ ಕಥೆಗಳು**
ಅನು : ಶ್ರೀನಿವಾಸ್ ವಿ. ಸುತ್ರಾವೆ
ಪುಟ : ೯೬ + ೧೨ ಬೆಲೆ ರೂ. ೩೦
ವಿನಯ್ ಪ್ರಕಾಶನ, ೧೯೬೨/೧೧೦ 'ಬಿ'
ವಿದ್ಯಾನಗರ, ದಾವಣಗೆರೆ-೫

**ಕರಿಯನ ಪುರಾಣ** (ಗದ್ಯ ಲೇಖನಗಳು)
ಡಾ|| ಸಿ. ಪಿ. ನಾಗರಾಜ
ಪುಟ : ೭೭ ಬೆಲೆ ರೂ. ೧೮
ನಾಗು ಸ್ಮಾರಕ ಪ್ರಕಾಶನ, ಕಾಳಮುದ್ದನದೊಡ್ಡಿ-೫೭೧ ೪೨೨,
ಮದ್ದೂರು ತಾ, ಮಂಡ್ಯ ಜಿಲ್ಲೆ.

**ಗೀತಾಂಜಲಿ** (ಇನ್ನೂರು ಕವನಗಳು)
ಅನು : ಜಿ. ರಾಮನಾಥ ಭಟ್
ಪುಟಗಳು : ೨೯೦ ಬೆಲೆ ರೂ. ೯೫
ಗೀತಾ ಬುಕ್ ಹೌಸ್ : ಪ್ರಕಾಶಕರು : ಮೈಸೂರು

**ವಾತ್ಸಲ್ಯ**
(ಪ್ರೊ|| ಪಂಚಾಕ್ಷರಿ ಹಿರೇಮಠರ ಅಭಿನಂದನ ಗ್ರಂಥ)
ಸಂಪಾದಕರು : ಡಾ|| ಸಿ.ವಿ. ವೇಣುಗೋಪಾಲ.
ಡಾ|| ಬಸವರಾಜ ನಾಯ್ಕರ
ಪುಟ : ೪೫೮ + ೧೨ ಬೆಲೆ ರೂ. ೨೨೫
ಪ್ರೊ|| ಪಂಚಾಕ್ಷರಿ ಹಿರೇಮಠ ಅಭಿನಂದನ ಸಮಿತಿ, ಧಾರವಾಡ

**ಮಹಿಳೆ ಮತ್ತು ಆಸ್ತಿ ಹಕ್ಕು** (ಕಾನೂನು ಲೇಖನಗಳು)
ಹೇಮಲತಾ ಮಹಿಷಿ
ಪುಟ : ೪೮ ಬೆಲೆ ರೂ. ೨೦
ಶ್ರೀಮತಿ ಯಶೋದಾ ರಾಗೌ ಟ್ರಸ್ಟ್
[illegible], ಕಾಳಿದಾಸ ರಸ್ತೆ, ಜಯಲಕ್ಷ್ಮೀಪುರಂ.
ಮೈಸೂರು-[illegible]

**ದಿಬ್ಬಣದ ಹಾಡು** (ಕವನ ಸಂಕಲನ)
ಪ್ರೊ|| ವಸಂತ ಕುಷ್ಟಗಿ
ಪುಟ : ೯೪ ಬೆಲೆ ರೂ. ೫೦
ಶ್ರೀ ಬತ್ತೇರೇಶ ಪ್ರಕಾಶನ, ಎಂ.ಐಯ್.ಜಿ. ೨೬
ಆದರ್ಶನಗರ, ಮೊದಲ ಹಂತ (ಹುಡ್ಕೊ ಕಾಲನಿ)
ಕಲಬುರಗಿ-೫೮೫ ೧೦೫

**ಕನ್ನಡ ಹೋರಾಟಗಳು** ಒಂದು ನೋಟ
ರಾ. ನಂ. ಚಂದ್ರಶೇಖರ
ಪುಟ : ೧೨೫ + ೧೨ ಬೆಲೆ ರೂ. ೫೦
ಕನ್ನಡ ಗೆಳೆಯರ ಬಳಗ, ೬, ರಾಘವೇಂದ್ರ ಕಾಂಪ್ಲೆಕ್ಸ್,
೨ನೇ ಅಡ್ಡ ರಸ್ತೆ, ಸಿ.ಕೆ.ಸಿ. ಗಾರ್ಡನ್, ಬೆಂಗಳೂರು-೨೭

**ಯುರೋ-ದರ್ಶನ**
ಹೇಮಲತಾ ಮಹಿಷಿ
ಪುಟ : ೧೮೪ ಬೆಲೆ ರೂ. ೮೦
ಮನೋಹರ ಗ್ರಂಥಮಾಲಾ, ಲಕ್ಷ್ಮಿಭವನ, ಸುಭಾಸ ರಸ್ತೆ
ಧಾರವಾಡ-೫೮೦ ೦೦೧

**ನಿರ್ಬೀಜೀಕರಣದ ವಿರಾಟ್ ಸ್ವರೂಪ**
ವಿ. ಚಂದ್ರಶೇಖರ ನಂಗಲಿ
ಪುಟ : ೨೨ ಬೆಲೆ ರೂ. ೧೨
ಲೋಹಿಯಾ ಪ್ರಕಾಶನ, ಬಳ್ಳಾರಿ

**ಶತಮಾನದಂಚಿನಲಿ** (ವಿವಿಧ ಲೇಖಕರು)
ಸಂ : ನಾಗತಿಹಳ್ಳಿ ಚಂದ್ರಶೇಖರ
ಪುಟ : ೧೮೦ ಬೆಲೆ ರೂ. ೮೦
ಅಭಿವ್ಯಕ್ತಿ, ನಂ. ೧೩, ಎಂ.ಕೆ.ಕೆ. ರಸ್ತೆ,
ಪದ್ಮನಾಭ ನಗರ, ಬೆಂಗಳೂರು-೫೬೦ ೦೭೦

**ತೇಲ್‌ನೋಟ** (ವ್ಯಂಗ್ಯ ಬರಹಗಳು)
ಕು. ಗೋ.
ಪುಟ : ೧೫೮ ಬೆಲೆ ರೂ. ೫೦
ಸು.ಹಾ.ಸಂ. ವಾಗ್ದೇವಿ, ಹಯಗ್ರೀವ ನಗರ
ಉಡುಪಿ-೫೭೬ ೧೦೨

**ಧರೆ ಹೊತ್ತಿ ಉರಿದೀತು** (ಕವನ ಸಂಕಲನ)
ಎ. ಎಂ. ಸಾವಣಕರ
ಪುಟ : ೫೩ ಬೆಲೆ ರೂ. ೨೫
ಡಾ|| ಬಾಬಾ ಸಾಹೇಬ್ ಅಂಬೇಡ್ಕರ್ ವಿಚಾರ ವೇದಿಕೆ,
ನಂ. ೧೧, ಸಿ.ಎಂ.ಸಿ. ಕಾಲನಿ, ಇಬ್ರಾಹಿಂಪುರ,
ವಿಜಾಪುರ

**ಚಿತ್ತಸ್ಫುರಣ** (ಚಿಂತನ ಸೂತ್ರಗಳು)
ಅರ್ಜುನ ತಾ. ಕೋರಟಕರ 'ಭಾವಜ್ಞ'
ಪುಟ : ೫೬ + ೮ ಬೆಲೆ ರೂ. ೩೦
ಬರಹಗಾರ ಪ್ರಕಾಶಕ-ಅರ್ಜುನ, ತಾ. ಕೋರಟಕರ ಭಾವಜ್ಞ
ಜಮಖಂಡಿ-೫೮೭ ೩೦೧, ವಿಜಾಪುರ ಜಿಲ್ಲೆ.

**ಗ್ರಹಣ** (ಖಗೋಳದಲ್ಲಿ ಕಣ್ಣಾಮುಚ್ಚಾಲೆ)
ಡಾ|| ಬಿ. ಎಸ್. ಶೈಲಜಾ
ಪುಟ : ೧೫೬ ಬೆಲೆ ರೂ. ೮೦
ಓರಿಯಂಟ್ ಲಾಂಗ್‌ಮನ್, ಮಹಾತ್ಮ ಗಾಂಧಿ ರಸ್ತೆ
ಬೆಂಗಳೂರು ೫೬೦ ೦೦೧

**ಕಾವ್ಯದಲ್ಲಿ ಪ್ರತಿಮಾ ಸಂವಿಧಾನ**
'ಜೀವಿ' ಕುಲಕರ್ಣಿ, ಎ. ವಿ. ಗೋಕಾಕ
ಪುಟ : ೮೦ ಬೆಲೆ ರೂ. ೪೦
ಹರ್ಷವರ್ಧನ ಪ್ರಕಾಶನ, ೮-ಅ, ೧೫, ಜವಾಹರ ಸೊಸೈಟಿ,
ಗೋಪಿಂದ ನಗರ, ಬೋರಿವಿಲಿ (ಪಶ್ಚಿಮ)
ಮುಂಬೈ - ೪೦೦ ೦೯೨

# ಯೋಗಪ್ರವೇಶ -೩

ಜಿ. ರಾಮಕೃಷ್ಣ

## ಗಾಂಧೀಜಿ ಯೋಗ ಕಲಿತದ್ದು

೧೯೨೭ರ ಏಪ್ರಿಲ್‌ನಲ್ಲಿ ಗಾಂಧೀಜಿ ಬೆಳಗಾವಿಯ ಬಳಿ ಅಂಬೋಲಿ ಎಂಬೆಡೆ ಇದ್ದರು. ಗಂಗಾಧರರಾವ್ ದೇಶಪಾಂಡೆಯವರು ಅವರ ಶುಶ್ರೂಷೆ ಮಾಡಲು ಅಲ್ಲೇ ತಂಗಿದ್ದರು. ದೇಹಾರೋಗ್ಯ ಅಷ್ಟು ಚೆನ್ನಾಗಿಲ್ಲದಿದ್ದುದರಿಂದ ಅವರನ್ನು ಸೆರೆಮನೆಯಿಂದ ಬಿಡಲಾಗಿತ್ತು. ಅಲ್ಲಿಂದ ನಂದೀದುರ್ಗಕ್ಕೆ ಬಂದು ಕೆಲಕಾಲ ವಿಶ್ರಮಿಸಿಕೊಳ್ಳುವುದೆಂದು ತೀರ್ಮಾನವಾಗಿತ್ತು. ಯಾವ ವ್ಯಾಯಾಮ ಮಾಡಬೇಕೆಂಬ ಜಿಜ್ಞಾಸೆ ನಡೆಸಿ ಯೋಗಾಭ್ಯಾಸದತ್ತ ಒಲವು ತೋರಿಸಿದರು. ಆಗ ಅವರೊಂದಿಗಿದ್ದು ಯೋಗಾಸನ ಮತ್ತು ಪ್ರಾಣಾಯಾಮ ಹೇಳಿಕೊಡಲು ಯೋಗಸಂಶೋಧನಾ ಪಟು ಸ್ವಾಮಿ ಕುವಲಯಾನಂದರನ್ನು ಪುಣೆಯ ಹತ್ತಿರದ ಲೋನವ್ಲಾದಿಂದ ನಂದಿಗೆ ಕರೆಸಿಕೊಳ್ಳಲಾಯಿತು. ಕೈವಲ್ಯಧಾಮವೆಂಬ ಆಶ್ರಮ ಸ್ಥಾಪಿಸಿ ಅನೇಕ ಸಂಶೋಧನೆಗಳನ್ನು ನಡೆಸುತ್ತಾ ಚಿಕಿತ್ಸೆಯಲ್ಲೂ ತೊಡಗಿದ್ದ ಜೆ. ಜಿ. ಗುಣೆ ಕುವಲಯಾನಂದ ಎಂಬ ಹೆಸರನ್ನಿಟ್ಟುಕೊಂಡಿದ್ದರು. ಟಿಲಕರ ಅನುಯಾಯಿಯಾಗಿದ್ದ ಅವರು ಗಾಂಧೀಜಿಯವರಿಗೆ ಚೆನ್ನಾಗಿ ಪರಿಚಿತರಾಗಿದ್ದರು.

ನಂದಿಯಿಂದ ಏಪ್ರಿಲ್ ೧೭ ರಂದು ಕುವಲಯಾನಂದರಿಗೆ ಪತ್ರ ಬರೆದು ತಾವು ಆಗಲೆ ಅಭ್ಯಾಸ ಮಾಡುತ್ತಿದ್ದ ಶೀರ್ಷಾಸನ ಮುಂತಾದುವುಗಳ ಬಗ್ಗೆ ಗಾಂಧೀಜಿ ಸ್ಪಷ್ಟೀಕರಣ ಬಯಸಿದರು. ತೆಳ್ಳನೆಯ ಬಟ್ಟೆಯಿಂದ ನೇತಿ ಕ್ರಿಯೆಯನ್ನು (ಮೂಗನ್ನು ಸ್ವಚ್ಛಗೊಳಿಸುವ ವಿಧಾನ) ಮಾಡುತ್ತಿರುವುದಾಗಿಯೂ ತಿಳಿಸಿದರು. ಶೀರ್ಷಾಸನದಿಂದ ರಕ್ತದ ಒತ್ತಡ ಹೆಚ್ಚುತ್ತದೋ ಕಡಿಮೆಯಾಗುತ್ತದೋ ತಿಳಿಸಬೇಕೆಂದೂ ಕೇಳಿದರು.

ಮೇ ೫ರ ಪತ್ರದಲ್ಲಿ ಕುವಲಯಾನಂದರು ಹಲವು ವಿವರಣೆಗಳನ್ನು ನೀಡಿ ಗಾಂಧೀಜಿ ಯಾವ ಆಹಾರವನ್ನು ಎಷ್ಟು ಪ್ರಮಾಣದಲ್ಲಿ ಸ್ವೀಕರಿಸಬೇಕೆಂಬ ಸಲಹೆ ನೀಡಿದರು. ಅಂತೆಯೇ ಉಜ್ಜಾಯಿ (ಉಸಿರಾಟದ ಒಂದು ವಿಧಾನ), ಶವಾಸನ ಮತ್ತು ಸರ್ವಾಂಗಾಸನಗಳನ್ನು ಯಾವ ಕ್ರಮದಲ್ಲಿ ಎಷ್ಟು ವೇಳೆ ಮಾಡಬೇಕೆಂಬುದನ್ನು ತಿಳಿಸಿದರು. ಇದಾದ ನಂತರ ಸ್ವಾಮೀಜಿ ಖುದ್ದಾಗಿ ಬಂದು ನಂದಿಯಲ್ಲಿ ಗಾಂಧೀಜಿ ಜೊತೆಯಿದ್ದು ಯೋಗಾಭ್ಯಾಸವನ್ನು ಸಕ್ರಮವಾಗಿ ಹೇಳಿಕೊಟ್ಟರು ಮತ್ತು ಅವರ ಆರೋಗ್ಯ ಸುಧಾರಿಸಲು ಅಭ್ಯಾಸವನ್ನು ಹೇಗೆ ಮುಂದುವರೆಸಬೇಕೆಂದು ಸುದೀರ್ಘವಾಗಿ ಟಿಪ್ಪಣಿ ಬರೆದುಕೊಟ್ಟರು. ಹೊಟ್ಟೆ ಮತ್ತು ಎದೆಯನ್ನು ನೀವಿಕೊಳ್ಳುವ ವಿಧಾನವನ್ನು ಗಾಂಧೀಜಿಗೆ ಹೇಳಿಕೊಡಲಾಗಿತ್ತು.

ಸ್ವಾಮೀಜಿ ಲೋನಾವ್ಲಾಕ್ಕೆ ಹಿಂದಿರುಗಿದ ಮೇಲೆ ಗಾಂಧೀಜಿ ಆಗಾಗ್ಗೆ ಅವರಿಗೆ ತಮ್ಮ ಆರೋಗ್ಯದ ವಿವರಗಳು, ಆಹಾರ ಸೇವನೆ, ಅಭ್ಯಾಸದ ಕ್ರಮ, ಮುಂತಾದುವನ್ನು ಬರೆದು ತಿಳಿಸಿ ಸಲಹೆಗಳನ್ನು ಪಡೆದುಕೊಳ್ಳುತ್ತಿದ್ದರು. ಜೂನ್ ೮ರ ಪತ್ರದಲ್ಲಿ ಶವಾಸನ ಮತ್ತು ಸರ್ವಾಂಗಾಸನಗಳ ಅವಧಿಯನ್ನು ಹೆಚ್ಚಿಸಬೇಕೆಂಬ ಆಶಯ ವ್ಯಕ್ತಪಡಿಸಿ ತಮ್ಮ ರಕ್ತಚಲನೆಯಲ್ಲಿ ಏನೋ ವ್ಯತ್ಯಯ ಉಂಟಾಗಿದೆಯೆಂಬ ಭಾವನೆಯನ್ನು ಪ್ರಕಟಪಡಿಸಿದರು. ಜೂನ್ ೧೪ರಂದು ಅದಕ್ಕೆ ಉತ್ತರ ಬರೆಯುತ್ತಾ ಸ್ವಾಮೀಜಿಯವರು ಗ್ರೇ ಬರೆದ ''ಅನಾಟಮಿ'' ಪುಸ್ತಕದಿಂದ ಕೆಲವು ಆಧಾರಗಳನ್ನು ನೀಡಿ, ಎದೆಯನ್ನು ನೀವುವುದರಿಂದ ಹೃದಯಕ್ಕೆ ಹೇಗೆ ಅನುಕೂಲವಾಗುತ್ತದೆಂಬುದನ್ನು ವಿವರಿಸಿದ್ದಾರೆ. ಗಾಂಧೀಜಿಯವರಿಗೆ ನೀವುವುದನ್ನು ಕುರಿತಂತೆ ಏಕೋ ಅನುಮಾನ. ಅದಕ್ಕಾಗಿಯೇ ಸ್ವಾಮೀಜಿ ಸುದೀರ್ಘವಾಗಿ ಅದರ ಬಗ್ಗೆ ತಿಳುವಳಿಕೆ ನೀಡಬೇಕಾಯಿತೆಂದು ತೋರುತ್ತದೆ.

ಜೂನ್ ೧೭ರ ವೇಳೆಗೆ ಗಾಂಧೀಜಿ ಬೆಂಗಳೂರಿನ



ಕುಮಾರ ಕೃಪಾಕ್ಕೆ ಬಂದು ತಂಗಿದ್ದರು. ಅಲ್ಲಿಂದ ಪತ್ರ ಬರೆಯುತ್ತಾ ನೀವುವ ಕ್ರಿಯೆಯನ್ನು ಯಥಾವತ್ತಾಗಿ ವಿವರಿಸಿದ್ದಕ್ಕೆ ಸ್ವಾಮೀಜಿಯವರಿಗೆ ಗಾಂಧೀಜಿ ಆಭಾರ ಮನ್ನಿಸಿದ್ದಾರೆ. ''ನಿಮ್ಮಲ್ಲಿ ನನಗೆ ಶ್ರದ್ಧೆ ಇದೆಯಾದ್ದರಿಂದ ನೀವು ಹೇಳಿಕೊಟ್ಟಿರುವಂತೆ ನಾನು ಅಭ್ಯಾಸ ಮುಂದುವರಿಸಿದ್ದೇನೆ; ಆದರೆ ನನ್ನ ಅನುಮಾನ ಬಗೆಹರಿಸಿಕೊಳ್ಳಲಷ್ಟೇ ಆ ಪ್ರಶ್ನೆಗಳನ್ನೆತ್ತಿದ್ದು'' ಎಂದು ಗಾಂಧೀಜಿ ಆ ಪತ್ರದಲ್ಲಿ ಬರೆದಿದ್ದಾರೆ. ಮುಂದುವರಿದು ಅವರೆನ್ನುತ್ತಾರೆ: ''ನಿಮಗೆ ಪತ್ರ ಬರೆದ ನಂತರ ನಾನು ಒಂದು ಹೆಜ್ಜೆ ಮುಂದಿಟ್ಟೆ, ಅದಕ್ಕೆ ನೀವೇನೆನ್ನುತ್ತೀರೋ ತಿಳಿಯದು. ಸರ್ವಾಂಗಾಸನ ಮಾಡುವಾಗ ೩೦ ಡಿಗ್ರಿಯಿಂದ ೬೦ ಡಿಗ್ರಿವರೆಗೆ ಹೆಚ್ಚಿಸಿ ಅವಧಿಯನ್ನು ನಿಮಿಷಗಳಿಗೆ ವಿಸ್ತರಿಸಿದ್ದೇನೆ. ಮಂಚದ ಮೇಲೆ ಒಂದು ಹಲಗೆಯನ್ನು ಆನಿಸಿ ಅದರ ಮೇಲೆ ರಗ್ಗುಗಳನ್ನು ಹರಡುವ ಏರ್ಪಾಟು ಮಾಡಿಕೊಂಡಿದ್ದೇನೆ. ಹೀಗಾಗಿ ನನ್ನ ಸರ್ವಾಂಗಾಸನ ಸುಧಾರಿಸಿದೆಯೆಂದು ಬಗೆದಿದ್ದೇನೆ. ಮಹದೇವ (ದೇಸಾಯಿ) ಡಿಗ್ರಿಯನ್ನು ಅಳೆಯಲು ಸಹಕರಿಸುತ್ತಿದ್ದಾರೆ. ಅವರ ಪ್ರಕಾರ ಅದು ಈಗ ೫೦ ಡಿಗ್ರಿ ಇದೆ. ಹೇಗೂ ಇರಲಿ, ನನಗೆ ಆಯಾಸವಿಲ್ಲದೆ ಅದನ್ನು ಮಾಡುತ್ತಿದ್ದೇನೆ. ಅದರಿಂದ ರಕ್ತದ ಒತ್ತಡ ಹೆಚ್ಚಿದರೆ ಅದನ್ನು ನಿಲ್ಲಿಸುತ್ತೇನೆ. ಆ ಬಗ್ಗೆ ನಿಮ್ಮಿಂದ ಸೂಚನೆ ಬರುವವರೆಗೆ ಇದನ್ನು ಹೀಗೇ ಮುಂದುವರಿಸುತ್ತಿರುತ್ತೇನೆ.''

ಇದೇ ಪತ್ರದಲ್ಲಿ ಗಾಂಧೀಜಿ ಅಭ್ಯಾಸ ಮಾಡುತ್ತಿದ್ದ ಹಲಾಸನದ ಪ್ರಸ್ತಾಪವೂ ಇದೆ. ಆದರೆ ಅದಕ್ಕೆ ಆ ಹೆಸರಿದೆಯೆಂದು ಗಾಂಧೀಜಿ ತಿಳಿದಿಲ್ಲ. ಅದನ್ನು ಅವರಿಗೆ ಡಾ॥ ಕೇಳ್ಕರ್ ಹೇಳಿಕೊಟ್ಟಿದ್ದರಂತೆ. ಸ್ವಾಮೀಜಿಗೆ ಡಾ॥ ಕೇಳ್ಕರ್ ಪರಿಚಿತರೆಂಬುದು ಗಾಂಧೀಜಿಯವರಿಗೆ ತಿಳಿದಿದೆ. ಹಲಾಸನದ ಅಭ್ಯಾಸವು ಹಿತವಾಗಿರುತ್ತದೆಂದೂ ಆ ಬಗ್ಗೆ ಇನ್ನೂ ಹೆಚ್ಚಿನ ವಿವರ ನೀಡಬೇಕೆಂದೂ ಗಾಂಧೀಜಿ ವಿನಂತಿಸಿಕೊಂಡಿದ್ದಾರೆ.

ಇದಕ್ಕೆ ಪ್ರತ್ಯುತ್ತರವಾಗಿ ಸ್ವಾಮೀಜಿ ಜೂನ್ ೨೫ರಂದು ಲೋನಾವ್ಲಾದಿಂದ ಪತ್ರ ಬರೆದಿದ್ದಾರೆ: ''ಬೆಂಗಳೂರಿನಲ್ಲಿದ್ದೀರಾದ್ದರಿಂದ ಶಾಲೆಗಳಲ್ಲಿ ರೇಖಾಗಣಿತ ಬೋಧಿಸಲು ಉಪಯೋಗಿಸುವ ದೊಡ್ಡ ಪ್ರೊಟ್ರಾಕ್ಟರ್ ತರಿಸಿಕೊಂಡು ಆಸನದ ಕೋನ ಎಷ್ಟು ಡಿಗ್ರಿಯದೆಂದು ಮಾಪನ ಮಾಡಿಕೊಳ್ಳಿ. ಹಲಾಸನವನ್ನು ಈಗಿನಂತೆಯೇ ಮುಂದುವರಿಸಿ. ನಿಮ್ಮ ಹೊಟ್ಟೆಗೆ ಅದು ಉತ್ತಮ ಆಸನ. ನಿಮ್ಮ ದೇಹಸಾಮರ್ಥ್ಯ ಉತ್ತಮಗೊಂಡಿದ್ದರೆ ಜೊತೆಗೆ ಭುಜಂಗಾಸನವನ್ನೂ ಆರಂಭಿಸಿ. ಮೊದಲಿಗೆ ಒಮ್ಮೆ ಮಾತ್ರ ಮಾಡಿ ಕ್ರಮೇಣ ಮೂರಕ್ಕೆ ಹೆಚ್ಚಿಸಿ.''

ಜೂನ್ ೨೯ರ ಪತ್ರದಲ್ಲಿ ಗಾಂಧೀಜಿ ತಮ್ಮ ರಕ್ತದ ಒತ್ತಡ ೧೫೦ ರಿಂದ ೧೬೦ಕ್ಕೆ ಹೆಚ್ಚಿದೆಯೆಂದೂ ಹೀಗೇಕಾಯಿತೆಂದು ವೈದ್ಯರು ಗಾಬರಿಯಾಗಿದ್ದರೆಂದೂ ಸ್ವಾಮೀಜಿಯವರಿಗೆ ಬರೆದಿದ್ದಾರೆ. ಹಲಾಸನ ಮತ್ತು ಸರ್ವಾಂಗಾಸನಗಳನ್ನು ಮಾಡಿ ತೋರಿಸಿದಾಗ ಅವನ್ನು ಕೂಡಲೆ ನಿಲ್ಲಿಸಬೇಕೆಂದು ವೈದ್ಯರು ಸಲಹೆ ನೀಡಿದ್ದಾಗಿಯೂ, ಸಲಹೆ ಇಲ್ಲದಿದ್ದರೂ ರಕ್ತದ ಒತ್ತಡ ಜಾಸ್ತಿಯಾಗಿದ್ದುದರಿಂದ ತಾವೇ ಅವನ್ನು ನಿಲ್ಲಿಸಬೇಕೆಂದು ತೀರ್ಮಾನಿಸಿದ್ದುದಾಗಿಯೂ ಗಾಂಧೀಜಿ ಈ ಪತ್ರದಲ್ಲಿ ಹೇಳಿದ್ದಾರೆ. ಆಹಾರ ಸೇವನೆಯ ವಿವರ ನೀಡುತ್ತಾ ಮೂರು ಚಮಚ ಬೆಣ್ಣೆ, ೩೦ ಔನ್ಸ್ ಹಾಲು ಮತ್ತು ಒಂದು ರೊಟ್ಟಿ ತೆಗೆದುಕೊಳ್ಳುತ್ತಿರುವುದಾಗಿ ತಿಳಿಸಿದ್ದಾರೆ. ''ಈ ಪರಿಸ್ಥಿತಿಯಲ್ಲಿ ಭುಜಂಗಾಸನ ಮುಂದುವರಿಸಬಹುದೆ? ಆಸನಗಳು ದೇಹಕ್ಕೆ ಸ್ವಾಸ್ಥ್ಯ ನೀಡುತ್ತಿವೆಯಾದರೂ ಅದರಿಂದ ರಕ್ತದ ಒತ್ತಡ ಹೆಚ್ಚಿದ್ದೇಕೆ ಎಂಬುದನ್ನು ತಿಳಿಯುವ ಕುತೂಹಲ ನನಗಿದೆ.'' ಎಂದೂ ಈ ಪತ್ರದ ಒಕ್ಕಣೆಯಲ್ಲಿದೆ.

(೬೩ನೇ ಪುಟ ನೋಡಿ)

# ‘ಗಾಂಧೀವಾದದ ಶವಪರೀಕ್ಷೆ’




ಹಿಂದಿ ಮೂಲ : ಯಶಪಾಲ್

ಕನ್ನಡ ಅನುವಾದ : ಡಾ॥ ಪ್ರಧಾನ ಗುರುದತ್ತ

ಬೆಲೆ : ರೂ. 45

ಡಿ. ವಿ. ಕೆ. ಮೂರ್ತಿ, ಮೈಸೂರು ಇವರ ಪ್ರಕಟಣೆ

ಗಾಂಧೀಜಿ ರಾಜಕೀಯ ನಾಯಕರಾಗಿ ಈ ನಾಡಿನ ಸಾರ್ವಜನಿಕ ಜೀವನವನ್ನು ಪ್ರವೇಶಿಸಿದರು. ಆದರೆ ನಾಡಿನ ಬಹುಪಾಲು ಅವಿದ್ಯಾವಂತರೂ, ಮುಗ್ಧರೂ, ಸಂಪ್ರದಾಯ ಬದ್ಧರೂ ಆಗಿದ್ದ ಜನರ ವಿಶ್ವಾಸವನ್ನು ಪಡೆದು ಕೊಳ್ಳುವ ಸಲುವಾಗಿ, ತಮ್ಮ ರಾಜಕೀಯ ಕಾರ್ಯಕ್ರಮವನ್ನು ಅವರು ಭಗವಂತನ ಸಂಕಲ್ಪದ ಮಾರ್ಗವೆಂದು ಬಣ್ಣಿಸಿ, ಅದಕ್ಕೆ ಧಾರ್ಮಿಕ ನಂಬಿಕೆಯ ರೂಪವನ್ನು ನೀಡಿಬಿಟ್ಟಿದ್ದರು. ಜನರ ದೃಷ್ಟಿಯಲ್ಲಿ ಅವರು ಮಹಾತ್ಮನೇ ಆಗಿ, ಆಧ್ಯಾತ್ಮಿಕಶಕ್ತಿಯುಳ್ಳ ನಾಯಕನೇ ಆಗಿಬಿಟ್ಟಿದ್ದರು.

ಸರ್ವೋದಯವನ್ನು ತನ್ನ ಧ್ಯೇಯವಾಗಿಸಿ ಕೊಂಡಿರುವ, ದರಿದ್ರನಾರಾಯಣನನ್ನೇ ಆರಾಧಿಸುವುದಾಗಿ ಹೇಳಿಕೊಳ್ಳುವ ಈ ಗಾಂಧೀವಾದದ ವೈಫಲ್ಯದ ಕಾರಣಗಳನ್ನು ಅರ್ಥಮಾಡಿಕೊಳ್ಳಬೇಕಾದರೆ, ಅದರ ಸಿದ್ಧಾಂತಗಳನ್ನು ಒರೆಹಚ್ಚಿ ನೋಡುವುದು ಅಗತ್ಯವಾಗುತ್ತದೆ. ನಮ್ಮ ಭೌತಿಕ ಸಮಸ್ಯೆಗಳಿಗೆ ಮತ್ತು ಬಾಳಿನ ಬವಣೆಗಳಿಗೆ ಗಾಂಧೀವಾದೀ ಆಧ್ಯಾತ್ಮದ ಮೂಲಕ ಪರಿಹಾರ ದೊರೆಯಲು ಸಾಧ್ಯವಿದೆಯೇ ಅಥವಾ ಆರ್ಥಿಕ ಮತ್ತು ರಾಜಕೀಯ ಕಾರ್ಯಕ್ರಮಗಳ ಮೂಲಕ ಅಂಥ ಪರಿಹಾರ ದೊರೆಯುವ ಸಂಭವ ಇದೆಯೇ ಎಂಬುದನ್ನು ಜನತೆ ಅರಿತುಕೊಳ್ಳಬೇಕಾಗಿದೆ.

ಗಾಂಧೀವಾದ ಕುರಿತಂತೆ ಇಂಥ ಅರಿವನ್ನು ಐತಿಹಾಸಿಕ ಪ್ರಜ್ಞೆಯಿಂದ ಪಡೆದುಕೊಳ್ಳಲು ಯಶಪಾಲರ ಈ ವೈಚಾರಿಕ ಜಿಜ್ಞಾಸೆ ‘ಗಾಂಧೀವಾದ್ ಕೀ ಶವಪರೀಕ್ಷಾ’ ಎಂದಿಗಿಂತ ಇಂದು ಹೆಚ್ಚು ಸಂಗತವಾಗಿದೆ.

ಕರ್ನಾಟಕದಲ್ಲಿರುವ ಎಲ್ಲ ನವಕರ್ನಾಟಕ ಮಳಿಗೆಗಳಲ್ಲಿ, ನವಕರ್ನಾಟಕ ಪುಸ್ತಕ ಪ್ರದರ್ಶನಗಳಲ್ಲಿ ಹಾಗೂ ಇತರ ಪ್ರಮುಖ ಪುಸ್ತಕ ವ್ಯಾಪಾರಿಗಳಲ್ಲಿ ದೊರೆಯುತ್ತದೆ.

(೬೧ನೇ ಪುಟದಿಂದ )

ಗಾಂಧೀಜಿಯವರ ಈ ಪತ್ರದಿಂದ ಕುವಲಯಾನಂದರು ಹೌಹಾರಿದರು. ಜುಲೈ ೪ರಂದೇ ದೀರ್ಘವಾದ ಉತ್ತರ ಬರೆದರು : "ಹಲಾಸನವನ್ನು ಹಟಾಸನವೆಂದು ತಪ್ಪಾಗಿ ಕರೆದಿದ್ದೀರಿ. ನಿಮ್ಮ ಸದ್ಯದ ಮಾನಸಿಕ ಒತ್ತಡದಿಂದಾಗಿ ಹಲಾಸನವು ನಿಮ್ಮಲ್ಲಿ ರಕ್ತದ ಒತ್ತಡವನ್ನು ಹೆಚ್ಚಿಸಿರಬಹುದೆಂಬುದನ್ನು ಒಪ್ಪಬಹುದು. ಹಾಗೆ ನೋಡಿದರೆ ನಿಮ್ಮ ಭಾರವಾದ ಮನಸ್ಸಿಗೆ ಈಗ ಯಾವುದೇ ವ್ಯಾಯಾಮವೂ ಅಹಿತವಾಗಿ ಪರಿಣಮಿಸಬಹುದು. ದೂರದಲ್ಲಿದ್ದುಕೊಂಡು ಹೀಗೆ ಆರೋಗ್ಯದ ಬಗ್ಗೆ ಸಲಹೆ ನೀಡುವುದು ಅಪಾಯಕಾರಿಯೆಂದು ಬಗೆಯುತ್ತೇನೆ. ನಾನೇ ನಿಮ್ಮ ಬಳಿ ಇದ್ದಾಗ ಎಲ್ಲಾ ಸರಿಯಾಗಿಯೇ ಪರಿಣಮಿಸುತ್ತದೆಂದು ನನ್ನ ಅರ್ಥವಲ್ಲ. ಆದರೂ ಆಗ ತಪ್ಪುಗಳು ಕಡಿಮೆ ಇರುತ್ತವೆ. ..... ಖಾದಿ ಪ್ರದರ್ಶನ, ಸುತ್ತಾಟ, ಮುಂತಾದ ಕಾರ್ಯಕ್ರಮಗಳು ನಿಮಗರಿವಿಲ್ಲದಂತೆ ನಿಮ್ಮ ಮಿದುಳಿನ ಮೇಲೆ ಪರಿಣಾಮ ಬೀರಿವೆ. ಅದರಿಂದ ರಕ್ತದ ಒತ್ತಡ ಹೆಚ್ಚಿರುವ ಸಂಭವವಿದೆ, ಹಲಾಸನದಿಂದ ಅಲ್ಲ. ಸರ್ವಾಂಗಾಸನದಿಂದ ಅಂತೂ ಖಂಡಿತ ಅಲ್ಲ. ಅದನ್ನು ಸಕ್ರಮವಾಗಿ ಮಾಡಿದರೆ ರಕ್ತದ ಒತ್ತಡ ಹೆಚ್ಚುವ ಸಾಧ್ಯತೆ ಇಲ್ಲ. ಬದಲಾಗಿ, ಅದು ಒತ್ತಡವನ್ನು ಕಡಿಮೆ ಮಾಡುತ್ತದೆಂದು ನನ್ನ ಖಚಿತ ನಿಲುವು. ನಾನು ದಿನಕ್ಕೆ ೨೪ ನಿಮಿಷಗಳಂತೆ ಸತತವಾಗಿ ಆರು ತಿಂಗಳ ಅಭ್ಯಾಸ ಮಾಡಿದ್ದಾಗ ಅತಿ ಹೆಚ್ಚೆಂದರೆ ನನ್ನ ರಕ್ತದ ಒತ್ತಡ ೧೭೦ರಷ್ಟು ಇದ್ದಿತು. ನೀವು ಹಲಗೆಯ ಸಹಾಯದಿಂದ ಮಾಡುವಾಗ ಅದು ಹೆಚ್ಚಲು ಕಾರಣವಿಲ್ಲ. ಹೇಗೂ ಸರಿ, ನಿಮ್ಮ ಕೆಲಸಗಳ ಮಧ್ಯೆ ಸದ್ಯಕ್ಕೆ ಶವಾಸನವೊಂದನ್ನು ಬಿಟ್ಟು ಮಿಕ್ಕವನ್ನು ದೂರವಿಡಿ. ..... ಅಲ್ಲದೆ ಈಗಾಗಲೆ ರಾಷ್ಟ್ರದ ಉದ್ದಗಲಕ್ಕೂ ಸಂಚಾರ ಹೊರಡುವ ತೀರ್ಮಾನ ಬೇರೆ ಪ್ರಕಟಿಸಿದ್ದೀರಿ. ಅದು ಪತ್ರಿಕೆಗಳಲ್ಲಿ ಬಂದಾಗಲೇ ಬರೆಯೋಣವೆಂದಿದ್ದೆ. ಕನಿಷ್ಠ ಪಕ್ಷ ಜುಲೈ-ಆಗಸ್ಟ್ ಅಂತ್ಯದವರೆಗೆ ನೀವು ಸಂಪೂರ್ಣವಾಗಿ ವಿರಾಮ ಪಡೆಯಬೇಕೆಂದು ನಾನು ಮೊದಲೇ ತಿಳಿಸಿದ್ದೆ. ಸ್ಥಳೀಯ ವೈದ್ಯರ ಸಲಹೆಯಂತೆ ನಡೆದುಕೊಳ್ಳುತ್ತಿರಬಹುದೆಂದು ಊಹಿಸಿ ಸುಮ್ಮನಾದೆ. ....ಮಹಾತ್ಮಾಜಿ, ನನ್ನ ಉದ್ಗಾರವನ್ನು ಮನ್ನಿಸಿ. ನೀವು ನಿಶ್ಶಕ್ತಿಯನ್ನು ನೀಗಿಕೊಂಡು ಚೈತನ್ಯ ಪಡೆಯಬೇಕೆಂಬುದು ನಿಮ್ಮ ಹಾಗೂ ರಾಷ್ಟ್ರದ ಹಿತಕ್ಕೆ ಅತ್ಯವಶ್ಯಕ. ಜೊತೆಗೆ ನನ್ನ ಇನ್ನೊಂದು ಆತಂಕವೂ ಇದೆ. ನಿಮ್ಮ ವಿಶಿಷ್ಟ ಜೀವನದ ಒತ್ತಡಗಳಿಂದ ಉಂಟಾಗುವ ಪರಿಣಾಮಗಳನ್ನು ನೀವು ಮಾಡುವ ಆಸನಗಳ ಪರಿಣಾಮವೆಂದು ಯಾರೂ ತಪ್ಪು ತಿಳಿಯಬಾರದೆಂಬುದು ನನ್ನ ಆಶಯ. ಈಗಾಗಲೇ ಯೋಗಶಾಸ್ತ್ರವೆಂದರೆ ವಿದ್ಯಾವಂತರೆನಿಸಿಕೊಂಡ ಕೆಲವರು ಮೂಗು ಮುರಿಯುತ್ತಾರೆ. ಆ ಶಾಸ್ತ್ರದ ಪರವಾಗಿ ವಿವೇಚನೆ ಮಾಡಬೇಕೆಂಬಷ್ಟು ಸಹನೆ ಕೂಡ ಅವರಲ್ಲಿಲ್ಲ. ಯಾವುದೇ ಅಪರಾಧಿಗೂ ತನ್ನ ಪರವಾಗಿ ಸಮರ್ಥನೆ ನೀಡುವ ಅವಕಾಶವಿರುವಾಗ ಯೋಗಶಾಸ್ತ್ರ ಅದರಿಂದ ವಂಚಿತವಾಗಿರುವುದು ಒಂದು ದೌರ್ಭಾಗ್ಯ. ಇನ್ನು ಆಸನದಿಂದ ನಿಮಗೆ ತೊಂದರೆಯಾಯಿತೆಂದರೆ ಏನು ಗತಿ ! ನಾನಾಗಲಿ ನೀವಾಗಲಿ ಅಭ್ಯಾಸ ಮಾಡುವಾಗ ತಪ್ಪಿದರೆ ಶಾಸ್ತ್ರಕ್ಕೆ ಕಳಂಕ ಬಂದೀತು. ಆದ್ದರಿಂದ, ಮಹಾತ್ಮಾಜಿ, ನಾನು ನಿಮ್ಮಲ್ಲಿ ಅಂಗಲಾಚಿ ಬೇಡುತ್ತೇನೆ, ಇನ್ನೊಂದು ತಿಂಗಳಾದರೂ ಪೂರ್ಣವಾಗಿ ವಿಶ್ರಮಿಸಿಕೊಳ್ಳುವ ಕೃಪೆ ಮಾಡಿ."

ಆದರೆ ಗಾಂಧೀಜಿಯವರಿಗೆಲ್ಲಿಯ ವಿಶ್ರಾಮ. ಅವರು ತಮ್ಮ ಚಟುವಟಿಕೆಗಳನ್ನು ತೀವ್ರಗೊಳಿಸಿದರು, ಅಂತೆಯೇ ಯೋಗಾಭ್ಯಾಸವನ್ನೂ ಸಹ.

ᴑᴑ

> ಮತಧರ್ಮ ಮತ್ತು ಪ್ರಭುತ್ವ ಪ್ರತ್ಯೇಕ. ನಾನು ನನ್ನ ಧರ್ಮವನ್ನು ಪ್ರೀತಿಸುತ್ತೇನೆ. ನಾನು ಅದಕ್ಕಾಗಿ ಸಾಯಲೂ ಸಿದ್ಧ. ಆದರೆ ಅದು ನನ್ನ ಸ್ವಂತ ವಿಷಯ. ಇದಕ್ಕೂ ಪ್ರಭುತ್ವಕ್ಕೂ ಸಂಬಂಧವಿಲ್ಲ. ನಮ್ಮ ಸಂಕ್ಷೇಮ, ಆರೋಗ್ಯ, ಸಂಪರ್ಕ, ವಿದೇಶೀ ಸಂಬಂಧ, ನಾಣ್ಯ ಮತ್ತು ಇತರ ವಿಷಯಗಳನ್ನು ನೋಡಿಕೊಳ್ಳುವುದು ಪ್ರಭುತ್ವದ ಕಾರ್ಯ. ನಮ್ಮ ನಿಮ್ಮ ಮತಧರ್ಮ ನೋಡಿಕೊಳ್ಳುವುದಲ್ಲ. ಅದು ಪ್ರತಿಯೊಬ್ಬನ ವೈಯಕ್ತಿಕ ವಿಷಯ.
>
> –ಗಾಂಧೀಜಿ



## ಯಾರು ಮನುಷ್ಯ, ಯಾವುದು ಸನಾತನ !

ನಮ್ಮ ಸುತ್ತ-ಮುತ್ತಲ ಜೀವನ ನೋಡಿದಾಗಲೆಲ್ಲ ಕಣ್ಣಲ್ಲಿ ನೀರು ತುಂಬಿ ಬರುತ್ತದೆ. ನಿರಾಶೆ, ದುಃಖ, ದುಗುಡ, ದುಮ್ಮಾನ ಕಂಡು ಜೀವ ಹಿಂಡಿದ ಅನುಭವ. ಇದಕ್ಕೇ ಜೀವನವೆನ್ನುವುದಾದರೆ ಜೀವನವಲ್ಲದ್ದು ಎಷ್ಟು ಭಯಂಕರವಾಗಿರಬೇಕು ? ಕಲ್ಪಿಸಿದರೇನೇ ಮೈ ಜುಮ್ಮೆನ್ನುತ್ತದೆ.

ನಮ್ಮ ಸುತ್ತ ಸುಳಿವ ಸಹಸ್ರ-ಸಹಸ್ರ ಕಣ್ಣುಗಳಿಂದ ಬರೀ ಕಣ್ಣೀರು ಸುರಿಯುತ್ತಲಿವೆ. ಎಂದಾದರೂ, ಕೆಲಕ್ಷಣವಾದರೂ ಆ ದುಃಖಿಗಳ ತುಟಿಯ ಮೇಲೆ ಸುಖ, ಸಂತಸದ ನಗೆಯ ಬೆಳದಿಂಗಳು ನಿಂತು ಬೆಳಗಿದ್ದನ್ನು ನೊಡಲು ನಾನು ಚಿಂತಿತನಾಗಿದ್ದೇನೆ. ಆ ಚಿಂದಿ, ಬೆನ್ನಿಗೆ ಅಂಟಿದ ಹೊಟ್ಟೆಯ ಪಾಡು, ಅದರ ಹಿಂದಿರುವ ಕರುಣಾಜನಕ ಕಟುವಾಸ್ತವ- ಇದನ್ನೆಲ್ಲ ನೋಡುವ, ನೋಡಿ ಅವರಿಗಾಗಿ ಅನುಕಂಪ ಮಿಡಿವ ಹೃದಯಗಳನ್ನು ನಾನು ಹುಡುಕುತ್ತಿದ್ದೇನೆ... ಇಂಥ ನಿರಾಶೆಗೆ ಕೊಂಚ ಸಮಾಧಾನ ನೀಡಲೆಂದು ತಾಯಿ ಥೆರೆಸಾ ಕಣ್ಣಲ್ಲಿ ನೆಲೆ ನಿಲ್ಲುತ್ತಾಳೆ... ಆಗ ಸಮಾಧಾನದ ಉಸಿರು ಆಡುತ್ತದೆ...

ಆದರೆ.... ಬಹಳಷ್ಟು ಮಂದಿ ತನಗೆ ಮಾತ್ರ ನಗೆ ಸುಖ ಸಂಪತ್ತು ಐಷಾರಾಮ ಎನ್ನುವವರೇ ತುಂಬಿದ್ದಾರಲ್ಲ ನಮ್ಮ ಸುತ್ತ.... ಇವರಿಗೆ ಮನುಷ್ಯರೆಂದು ಹೇಗೆ ಕರೆಯು ವುದು ? ಈ ಕಾಲದ ಪೋಜಿನ, ಮೋಜಿನ ಬುದ್ಧಿ ಜೀವಿಗಳ, ಲೋಕ ಸೇವಕರ, ರಾಜ ಕಾರಣಿಗಳ ಉಡಾಫೆ ಕಂಡಾಗ, ಇವರು ಮಾಡುವ ದೇಶ, ಈಶ, ಬಡಬಗ್ಗರ ಸೇವೆ ಬರೀ ಬೂಟಾಟಿಕೆ, ತೋರಿಕೆ ಮಾತ್ರವಲ್ಲ, ಮೋಸ, ವಂಚನೆಯ ಕರಾಮತ್ತುಗಳು ಎನ್ನಿಸುತ್ತವೆ.

* * *

ಜೀವನ ಒಂದು ಸಂಗೀತವೆಂದು ತಿಳಿದವನು ನಾನು. ಜೀವನಕ್ಕೂ ಒಂದು ತಾಲ, ಲಯವಿದೆ. ಅದಕ್ಕೂ ಹೆಚ್ಚು ಜೀವನಕ್ಕೂ ಒಂದು ಅರ್ಥವಿದೆ. ಈ ಲಯ, ತಾಲ, ಅರ್ಥ ಜೀವನದಿಂದ ದೂರಾದಾಗ ಜಗತ್ತು ಪ್ರಳಯದತ್ತ ಧಾವಿಸುತ್ತದೆ. ಇಂದಿನ ಬದುಕು ನೋಡಿದಾಗ ನನಗನ್ನಿಸುತ್ತಲಿದೆ-ನಾವು ಜೀವನೋನ್ಮುಖರಾಗಿ ಸಾಗಿಲ್ಲ, ಪ್ರಳಯೋನ್ಮುಖರಾಗಿ ಸಾಗಿದ್ದೇವೆ- ಎಂದು.

ಗೀತೆ ಹೇಳುವ ಹಾಗೆ ಒಂದು ಸಮಾಧಾನ- ಇದೆಲ್ಲ ಪರಿವರ್ತನಶೀಲವಾಗಿದೆ ಎನ್ನುವುದು. ಒಳ್ಳೇದು ಬರುತ್ತದೆ-ಎನ್ನುವುದು. ಇಂಥ ಕೇಡಿಗೂ ಕೊನೆಯಿದೆ ಎನ್ನುವುದು. ಆದ್ದರಿಂದ ಈಗ ನಮ್ಮಂಥವರು ತಾಳಿಕೊಳ್ಳಬೇಕು. ಸಮಾಧಾನಿಗಳಾಗಿರಬೇಕು. ತಾಳಿದವ ಬಾಳಿಯಾನು.

* * *

ಅಪರಿವರ್ತನ ಯಾವುದಾದರೂ ಇರುವುದಾದರೆ ಆಕಾಶವೊಂದೇ. ಅದು ವೈಶಾಖದ ಉರಿಬಿಸಿಲು, ವರ್ಷಾ ಕಾಲದ ಜಡಿಮಳೆ, ಚಳಿಗಾಲದ ಮೈ ಕೊರೆವ ಛಳಿ-ಈ ಎಲ್ಲವನ್ನೂ ಸಹಿಸಿಯೂ ತಾನೇ ತಾನಾಗಿ, ನಿರ್ಲೇಪವಾಗಿ ಉಳಿಯುವುದು. ಅದರಲ್ಲಿ ಯಾವ ಋತುಮಾನಗಳೂ ಪರಿವರ್ತನೆ ತರಲಾರವು. ಅದು ವೈಶಾಖದ ಉರಿಬಿಸಿಲಲ್ಲಿ ಸುಡುವುದಿಲ್ಲ. ವರ್ಷಾ ಕಾಲದಲ್ಲಿ ತೊಯ್ದು ತಪ್ಪಡಿಯಾಗುವುದಿಲ್ಲ.

ಚಳಿಗಾಲದ ಛಳಿಗೆ ಗಡಗಡ ನಡುಗುವುದಿಲ್ಲ. ಅದು ಸದಾ ಶುಭ್ರ, ಹೊಳೆ ಹೊಳೆವ ಬಾನು ! ಎಲ್ಲ... ಎಲ್ಲವನೂ ಆಚೆ ಸರಿಸಿ... ತಾನೇ ತಾನಾಗಿ ಉಳಿವ ಕಲೆ ಬಲ್ಲ.. ಆಕಾಶ.... ಅದು ಸನಾತನವಾದುದು... ಅದು ನಮಗೆ... ಭೂಮಿಯ ಮೇಲಿರುವ ನಮಗೆ ಗುರು... ನಿಶ್ಚಲವಾಗಿರು.... ಅಳುಕದಿರು... ನಿರ್ಲೇಪತ್ವ ಪಡೆ.... ಎಂದು ಸಾರುತ್ತಿರುವ ಅದು-ಆ ಆಕಾಶ ಮಾತ್ರ ಸನಾತನವಾದುದು....

**-ಡಾ|| ಪಂಚಾಕ್ಷರಿ ಹಿರೇಮಠ**, ಜಯನಗರ, ಧಾರವಾಡ-೧

## ನೋವು - ಒಂದು ನೋಟ

ಕಡಲಿನ ಮೊಗದಲಿ ಅಲೆಗಳ ನಗೆ, ಒಡಲಲಿ ಮಲಗಿದೆ ನೋವಿನ ಬಗೆ.

ಶಿಲುಬೆಗೆ ಏರಿಸಿದ ಏಸುವಿನ ಚಿತ್ರವನ್ನು ಹಾಗೂ ಗುಂಡಿಗೆ ಬಲಿಯಾದ ಗಾಂಧಿಯ ಚಿತ್ರವನ್ನು ಕಂಡ ಮಗು ಕೇಳಿತು, ಹೆಚ್ಚು ನೋವಾದದ್ದು ಏಸುವಿಗೋ ಮಹಾತ್ಮ ಗಾಂಧಿಗೋ? ಎಂದು. ಮಗುವಿನದು ಮುಗ್ಧ ಮನಸ್ಸು. ನೋವನ್ನು ಕಂಡರೆ ಸಹಿಸಿಕೊಳ್ಳ ಲಾಗದ ಹೂಮನಸು. ಏಸುವಿನ, ಗಾಂಧಿಯ ಆ ಚಿತ್ರಗಳು ಮಗುವಿನ ಹೂ ಮನಸ್ಸಿನಲ್ಲಿ ಮೂಡಿಸಿರುವ ನೋವಿನ ಅಲೆಗಳನ್ನು ಊಹಿಸಿಕೊಳ್ಳಲೂ ಸಾಧ್ಯವಿಲ್ಲ. ಮಗು, ನೀನೇ ಹೇಳು ಯಾರಿಗೆ ಹೆಚ್ಚು ನೋವಾಗಿದೆ ಎಂದಾಗ ಥಟ್ಟನೆ ಏಸುವಿಗೆ ಎಂದು ಉತ್ತರಿಸಿತು.

ಮಗುವಿನ ಕಣ್ಣಿಗೆ ಸಹಜವಾಗಿ ಕಾಣುವುದು ಏಸುವನ್ನು ಶಿಲುಬೆಗೆ ಏರಿಸಿ ಕೈ ಕಾಲುಗಳಿಗೆ ಹೊಡೆದಿರುವ ಮೊಳೆ, ತಲೆಗೆ ತೊಡಿಸಿರುವ ಮುಳ್ಳಿನ ಕಿರೀಟ. ಅದು ಯಾತನಾಮಯ ನಿಜ. ಆದರೆ ಇಲ್ಲಿಯ ಸ್ವಾರಸ್ಯ ಎಂದರೆ ಮಗುವಿಗೆ ಯಾವುದು ನೋವು ಎಂದು ಕಾಣುತ್ತದೆಯೋ ಏಸುವಿಗೆ ಅದು ನೋವಲ್ಲ. ಏಸುವಿನ ನೋವು ಬೇರೆಯದು. ಆದಕಾರಣದಿಂದಲೇ ತನ್ನನ್ನು ಶಿಲುಬೆಗೆ ಏರಿಸಿ ಮೊಳೆಹೊಡೆದವರನ್ನು ಕುರಿತು ಏಸು ಹೇಳಿದ್ದು, 'ಓ ದೇವರೆ, ಇವರನ್ನು ಕ್ಷಮಿಸು. ಇವರು ಏನು ಮಾಡುತ್ತಿದ್ದಾರೆ ಎಂಬುದು ಇವರಿಗೆ ತಿಳಿಯದು.' ಮೊಳೆಯಿಂದ ತನ್ನ ಶರೀರಕ್ಕೆ ಆದ ನೋವಿಗಿಂತ ಜನರ ಅಜ್ಞಾನದ ನೋವು ಏಸು ಕ್ರಿಸ್ತನನ್ನು ಹೆಚ್ಚು ಘಾಸಿಗೊಳಿಸಿತು. ಎಂದಮೇಲೆ ನೋವಿನ ಮೂಲ ಹಾಗೂ ಅದರ ನೆಲೆ ಬೇರೆಯೇ ಇದೆ. ಪ್ರಕೃತಿಯ ಆ ಸೂಕ್ಷ್ಮವನ್ನು ಅರಿಯುವುದರಿಂದ ನೋವಿನಿಂದ ದೂರವಾಗಿ ಆನಂದಕ್ಕೆ ಹತ್ತಿರವಾಗಬಹುದು. ಗಾಂಧಿಯ ಎದೆಗೆ ಗುಂಡು ಹೊಕ್ಕಾಗ 'ಹೇ ರಾಮ್' ಎಂದರು. ಅವರ ಎದೆಯನ್ನು ಹೊಕ್ಕ ಗುಂಡು ಉಂಟು ಮಾಡಿದ ನೋವಿಗಿಂತ ಜನಾಂಗೀಯ ದ್ವೇಷದ ದಳ್ಳುರಿ ಉಂಟುಮಾಡಿದ ನೋವು ಅವರನ್ನು ಹೆಚ್ಚು ಘಾಸಿಗೊಳಿಸಿತು. ನೋವು ಭೌತಿಕವಾದದ್ದಕ್ಕಿಂತ ಹೆಚ್ಚಾಗಿ ಆಂತರಿಕವಾದುದು. ಪ್ರೀತಿ, ವಿಶ್ವಾಸ, ನಂಬಿಕೆಗಳಿಗೆ ಆಗುವ ಆಘಾತಗಳು ಶರೀರಕ್ಕೆ ಆಗುವ ಆಘಾತಗಳಿಗಿಂತ ತೀವ್ರವಾದುದು.

ಜ್ಯೂಲಿಯಸ್ ಸೀಸರನನ್ನು ಆಪ್ತರು ಮೋಸದಿಂದ ಇರಿದರು. ಅದು ಅವನ ನಿರೀಕ್ಷೆಗೆ ಮೀರಿದ ಘಟನೆಯಾಗಿತ್ತು. ಎದುರಿಗೆ ಬಂದ ಆಪ್ತನಾದ, ವಿಶ್ವಾಸಕ್ಕೆ ಅರ್ಹನೆನಿಸಿದ್ದ, ನಂಬಿಕೆಗೆ ಪಾತ್ರನಾಗಿದ್ದ ಬ್ರೂಟಸ್‌ನನ್ನು ಸಾಂತ್ವನಕ್ಕಾಗಿ ಆತ್ಮೀಯವಾಗಿ ಆಲಿಂಗಿಸಿಕೊಳ್ಳಲು ಹೋದಾಗ ಬ್ರೂಟಸ್‌ನ ಕೈಯಿನ ಚಾಕು ಸೀಸರನ ಶರೀರವನ್ನು ಹೊಕ್ಕಿತ್ತು. ಆಗ ಸೀಸರನ ಬಾಯಿಂದ ಬಂದ 'ಬ್ರೂಟಸ್, ನೀನೂ ಕೂಡ' ಎನ್ನುವ ಉದ್ಗಾರದಲ್ಲಿ ಇರಿದ ಚಾಕುವಿನ ನೋವಿಗಿಂತ ಸ್ನೇಹಿತನ ನಂಬಿಕೆಯ, ವಿಶ್ವಾಸ ದ್ರೋಹಗಳ ನೋವು ಸೀಸರನನ್ನು ತೀವ್ರವಾಗಿ ಘಾಸಿಗೊಳಿಸಿತು.

ವಾಸ್ತವ ವಿಚಾರಗಳನ್ನು ಒಪ್ಪಿಕೊಳ್ಳಲಾಗದ ಜನ ಸಾಕ್ರಟೀಸನಿಗೆ ವಿಷ ಉಣಿಸಿ ಮರಣದಂಡನೆಗೆ ಗುರಿಮಾಡಿದರು. ಸಾಕ್ರಟೀಸ್ ವಿಷವನ್ನು ಸಂತೋಷದಿಂದಲೇ ಕುಡಿಯುತ್ತಿದ್ದ. ಅದು ಅವನಿಗೆ ನೋವುಂಟುಮಾಡಲಿಲ್ಲ. ಪ್ಲೇಟೋ ಆದಿಯಾಗಿ ಆತನ ಶಿಷ್ಯರು ತಪ್ಪಿಸಿಕೊಳ್ಳುವ ಕಳ್ಳಹಾದಿಯನ್ನು ಕಂಡುಕೊಂಡುಬಂದರು. ಕದ್ದು ಓಡಿ ಹೋಗಲು ಸಾಕ್ರಟೀಸನನ್ನು ಪ್ರೇರೇಪಿಸಿದರು. ತನ್ನ ಬೋಧನೆಯನ್ನು ಆಪ್ತಗೆಳೆಯರು ಅರ್ಥ ಮಾಡಿಕೊಳ್ಳಲಿಲ್ಲವಲ್ಲ ಎನ್ನುವ ನೋವು ಸಾಕ್ರಟೀಸನನ್ನು ವಿಷಕುಡಿವ ನೋವಿಗಿಂತ ಹೆಚ್ಚು ಘಾಸಿಗೊಳಿಸಿತು.

ಇಂತಹ ಘಟನೆಗಳನ್ನು ಅವಲೋಕಿಸಿದಾಗ ಮಗುವಿಗೆ ಕಾಣುವ ನೋವು ಒಂದು ಬಗೆಯದಾದರೆ ಆ ನೋವಿನ ಹಿಂದಿರುವ ಆಂತರಿಕ ಸತ್ಯಗಳೇ ಬೇರೆ ಬಗೆಯವು. ಪ್ರಕೃತಿಯ ಅಂತರಂಗದ ಈ ಸೂಕ್ಷ್ಮವನ್ನು ಅರಿಯುವುದೆಂದರೆ ಆನಂದದ ಬಾಗಿಲನ್ನು ತೆರೆವುದು ಎಂದರ್ಥ.

ಧಾರ್ಮಿಕ, ಶೈಕ್ಷಣಿಕ, ಸಾಹಿತ್ಯಿಕ ಕ್ಷೇತ್ರಗಳೂ ಸೇರಿದಂತೆ ನಮ್ಮ ಬದುಕಿನ ಎಲ್ಲ ಆಯಾಮಗಳಲ್ಲೂ ಮೋಸ, ವಂಚನೆಗಳು ಹಾಸು ಹೊಕ್ಕಾಗಿ ಪ್ರತಿಕ್ಷಣವೂ ಅನುಭವಿ ಸುತ್ತಿರುವ ನೋವಿನ ಎದುರು ಏಸುವಿಗೆ ಹೊಡೆದ ಮೊಳೆಯ ನೊವಾಗಲೀ, ಮಹಾತ್ಮ ಗಾಂಧಿಗೆ ಹೊಡೆದ ಗುಂಡಿನ ಏಟಾಗಲೀ, ಸೀಸರನಿಗೆ ಇರಿದ ಈಟಿಯ ಇರಿತವಾಗಲೀ, ಸಾಕ್ರಟೀಸನಿಗೆ ಉಣಿಸಿದ ವಿಷವಾಗಲೀ ಏನೇನೂ ಅಲ್ಲ ಎನ್ನುವಷ್ಟು ಕ್ರೂರವಾಗಿವೆ. ಗಂಡ ಹೆಂಡತಿ, ತಂದೆ ಮಕ್ಕಳು, ಅಣ್ಣ ತಮ್ಮ, ಅಕ್ಕ ತಂಗಿ, ನಂಟರಿಷ್ಟರು, ಬಂಧು ಬಳಗ, ಸ್ನೇಹಿತ ರನ್ನೊಳಗೊಂಡಂತೆ ಸಮಾಜದ ಎಲ್ಲ ಕ್ಷೇತ್ರಗಳಲ್ಲೂ ಆಗುತ್ತಿರುವ ವಿಶ್ವಾಸದ್ರೋಹಗಳ ಎದುರು ಶಿಲುಬೆಯ, ಗುಂಡಿನ, ಈಟಿಯ, ವಿಷದ ನೋವು ಗೌಣ ಎನಿಸಿಬಿಡುತ್ತದೆ.

ಒಟ್ಟಿನಲ್ಲಿ ಸಾವಿನಲ್ಲಿ ನೋವಿಲ್ಲ; ನೋವಿನಲ್ಲಿ ಸಾವಿದೆ. ಈ ಸತ್ಯ ನಮ್ಮ ಅಂತರಂಗವನ್ನು ತುಂಬಿ ಬೆಳಗಬೇಕು. ಆದ್ದರಿಂದ ನಿತ್ಯ ನಮ್ಮನ್ನು ಕಾಡುತ್ತಿರುವ ನೋವಿನ ನಿರ್ಮೂಲನಕ್ಕೆ ಸಂಜೀವಿನಿಯಾದ ನಂಬಿಕೆ ವಿಶ್ವಾಸಗಳು ನಮ್ಮ ಬದುಕಿನ ಉಸಿರಾಗಲಿ.

**ಜ. ಹೊ. ನಾರಾಯಣಸ್ವಾಮಿ**
ವಕೀಲರು, ''ಮಾನವ'' ೨೦೬೪/ಎ, ಉತ್ತರ ಬಡಾವಣೆ, ಹಾಸನ - ೫೭೩ ೨೦೧.

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore-560 058 and Published by him for Navakarnataka Publications (P) Ltd., Embassy Centre, Crescent Road, P. B. 5159, Bangalore-560 001. Chief Editor : Dr. G. Ramakrishna